ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ — ೪೦

# ಕೂರ್ಮ ಪುರಾಣಂ

(ಕನ್ನಡ ಅನುವಾದ ಸಹಿತ)

ಸಂಚಿಕೆ ೧



ಅನುವಾದಕ:

ಆಸ್ಥಾನ ವಿದ್ವಾನ್, ಪಾಟಣಕರ ಚಂದ್ರಶೇಖರಭಟ್ಟ.

---

ಶ್ರೀ ವಿನಾಯಕ್ ಪ್ರಿಂಟಿಂಗ್ ವರ್ಕ್ಸ್,

ಮೈಸೂರು.

೧೯೪೬

# ಪ್ರಸ್ತಾವನೆ.



ಪರಮಾತ್ಮನ ಸೃಷ್ಟಿವರ್ಗದಲ್ಲಿ ಚೇತನ-ಜಡವೆಂಬ ಎರಡು ಬಗೆಯ ವಸ್ತುಜಾಲವು ಸೇರಿರುವುದು. ಅವುಗಳಲ್ಲಿ ಪ್ರತಿಯೊಂದು ವಸ್ತುವು ನಿಜಸನ್ನಿವೇಶದೊಡನೆ ಉತ್ತಮ ಸಂಸ್ಕಾರವನ್ನು ಹೊಂದಿ ಸ್ವಾರ್ಥ-ಪರಾರ್ಥಗಳ ಉಪಯೋಗವನ್ನು ಹೊಂದಲು ಅರ್ಹವಾಗುವುದು. ಅಣು-ರೇಣು ಆದಿಯಾಗಿ ಬ್ರಹ್ಮಾಂಡಾಂತವಾದ ವಸ್ತುಸಮೂಹವು ಉಚಿತ ಸಂಸ್ಕಾರವು ದೊರೆಯುವವರೆಗೆ ಮೇಲುಸ್ಥಿತಿಗೆ ಬರದೆ ತನ್ನ ಹುಟ್ಟು ಸ್ಥಿತಿಯಲ್ಲಿಯೆ ಇರುವುದು ; ಅಥವಾ ಕೆಳಮಟ್ಟಕ್ಕೆ ಇಳಿಯುವುದು. ಹೀಗಿರಲು ಸೃಷ್ಟಿವರ್ಗಕ್ಕೆ ಸೇರಿದ ಜೀವಗಣವು ಅಭ್ಯುದಯ-ನಿಶ್ರೇಯಸಗಳೆಂಬ ತನ್ನ ಇಷ್ಟಾರ್ಥಗಳನ್ನು ಹೊಂದಬೇಕಾದರೆ ಸಂಸ್ಕಾರಗಳನ್ನು ಆರ್ಜಿಸಬೇಕು. ಜಡವರ್ಗಕ್ಕೆ ಅವಶ್ಯವಿರುವ ಸಂಸ್ಕಾರವು ಚೇತನಾಧೀನವಾದ್ದರಿಂದ ಪರತಂತ್ರವಾಗಿದೆ. ಚೇತನನು ಹೊಂದಬಹುದಾದ ಸಂಸ್ಕಾರವು ತನ್ನ ಉದ್ಯಮಕ್ಕೆ ಅಧೀನವಾದುದರಿಂದ ಸ್ವತಂತ್ರವಾಗಿದೆ. ಹಾಗೆ ಚೇತನನಾದ ಮಾನವವ್ಯಕ್ತಿಗೆ ಸಂಭವಿಸಿದ ಇಂದಿನ ಸನ್ನಿವೇಶವು ಹಿಂದಿನ ಕರ್ಮಜಾಲದ ಅಧಿಕಾರದಿಂದ ಬಂಧನರೂಪವಾಗಿರುವುದು. ಇಂತಹ ಬಂಧನವು ಮುಂದೆ ಉಂಟಾಗದಂತೆ ನೋಡಿಕೊಳ್ಳುವುದು ಚೇತನವ್ಯಕ್ತಿಗೆ ಮುಖ್ಯವಾಗಿ ಗಮನಾರ್ಹವಾದ ವಿಷಯವಾಗಿದೆ. ವಿಚಾರ-ವಿವೇಕಶಕ್ತಿಗಳಿಂದ ಕೂಡಿದ ಮಾನವನು ಮುಂದಿನ ತನ್ನ ಸಾಧುಗತಿಯನ್ನು ಹೊಂದಲು ಸ್ವತಂತ್ರನಾಗಿರುವನು.

ಇಂತಹ ಮಾನವನಿಗೆ ಉತ್ತಮ-ಅಧಮಪದಗಳ ಪ್ರಾಪ್ತಿಗೆ ಶರೀರ-ಇಂದ್ರಿಯ ಮುಂತಾದುವುಗಳು ಉಪಕರಣಗಳಾಗಿವೆಯೆಂಬುದನ್ನು "ಆತ್ಮಾನಂ ರಥಿನಂ ವಿದ್ಧಿ" ಮುಂತಾದ ಉಪನಿಷತ್ತುಗಳು ಬೋಧಿಸುತ್ತಲಿವೆ. ಅಂತಹ ಉಪಕರಣಗಳಲ್ಲಿ ಚಿತ್ತವು ಮುಖ್ಯವೂ ಅತಿಸೂಕ್ಷ್ಮವೂ ಆದ ಸಾಧನವಾಗಿದೆ. ಆ ಚಿತ್ತವು ಶುದ್ಧಸಂಸ್ಕಾರಗಳಿಂದ ನಿರ್ಮಲವಾದರೆ ಆತ್ಮನನ್ನು ಉತ್ತಮಪದದಲ್ಲಿ ಇರಿಸುವ ಸಾಧನವಾಗುವುದು. ಚಿತ್ತದಲ್ಲಿ ಅನೇಕ ಜನ್ಮಪ್ರವಾಹಗಳಿಂದ ವಿವಿಧಮಲಸಂಪರ್ಕವು ಉಂಟಾಗಿದೆ. ಸ್ಥೂಲವಾದ ವಸ್ತುವಿನಲ್ಲಿ ಅಂಟಿಕೊಂಡಿರುವ ಕಶ್ಮಲವು ಸ್ಥೂಲ ಮತ್ತು ಸುಲಭೋಪಾಯದಿಂದ ವರ್ಜಿಸಲು ಶಕ್ಯವಾಗಿರುವುದು. ಸ್ಥೂಲವಾದ ಬಾಹ್ಯ ವಸ್ತುವಿನಲ್ಲಿ ಅಂಟಿಕೊಂಡಿರುವ ಮಸುಕನ್ನು ಸುಲಭವಾಗಿ ಸಾಮಾನ್ಯಜನರು ಹೋಗಲಾಡಿಸಬಲ್ಲರು. ಅದೇ ವಸ್ತುವಿನ ಛಾಯಾಚಿತ್ರದಲ್ಲಿ ಅಂಟಿರುವ ಕಳಂಕವನ್ನು

ಮಾರ್ಜಿಸಲು ಎಲ್ಲರಿಗೂ ಶಕ್ಯವಲ್ಲ. ಅದನ್ನು ಚಿತ್ರಕಲಾವಿದನೇ ಬಲ್ಲ. ಅದರಂತೆ ಚಿತ್ತದಲ್ಲಿ ಕಾಮ, ಕ್ರೋಧಾದಿ ಕಳಂಕಗಳು ಅಂಟಿಕೊಂಡಿರುವುದರಿಂದ ಅವುಗಳನ್ನು ಬಹು ಗಹನವಾದ ವ್ಯಾಪಾರಗಳಿಂದ ನಿವಾರಿಸಬೇಕು. ಹೀಗೆ ಕಾಮ ಕ್ರೋಧಾದಿಗಳ ಆವೇಶಕ್ಕೆ ಒಳಗಾಗಿ ಸಂಸಾರ ಸಮುದ್ರದಲ್ಲಿ ಮುಳುಗಿರುವ ಮಾನವರನ್ನು ಉದ್ಧರಿಸಲು ಶ್ರೀಮನ್ನಾರಾಯಣನು ನಾಲ್ಕು ವೇದಗಳರೂಪದಿಂದ ವಿವಿಧವಾದ ಶ್ರೇಯೋ ಮಾರ್ಗಗಳನ್ನು ಬೋಧಿಸಿರುವನು. ತರುವಾಯ ಅನೇಕ ಮಹರ್ಷಿಗಳು ಶಾಸ್ತ್ರ ಗ್ರಂಥಗಳನ್ನು ರಚಿಸಿ ವೇದಾರ್ಥ ಪ್ರತಿಪಾದನೆಯನ್ನು ವಿಸ್ತರಿಸಿರುವರು. ಹೀಗೆ ಮೂಲವಾದ ವೇದವಾಣಿಯ ಉಪದೇಶದಿಂದ ಪ್ರಪಂಚವನ್ನು ಕರುಣಿಸಿದ ಪರಮಾತ್ಮನು ಧರ್ಮರಕ್ಷಣೆಗಾಗಿ ಆಯಾಯ ಪ್ರಸಂಗಗಳಲ್ಲಿ ಅನೇಕ ಅವತಾರಗಳನ್ನು ಮಾಡಿ ಸುಖ-ದುಃಖಮಯವಾದ ಪ್ರಾಣಿಗಳ ಭಾವಗಳನ್ನು ಅಭಿನಯಿಸಿ ಕಡೆಯಲ್ಲಿ ಸಾಧು ವೃತ್ತವು ಜಯಶೀಲವೆಂಬುದನ್ನು ತೋರ್ಪಡಿಸಿರುವನು. ಅಂತಹ ಭಗವಂತನ ಲೀಲಾವಿನೋದ ಚರಿತ್ರೆಗಳನ್ನು ಅವಲಂಬಿಸಿ ವೇದಗಳ ತಾತ್ಪರ್ಯಕ್ಕೆ ಗೋಚರವಾದ ಧರ್ಮತತ್ತ್ವಗಳನ್ನು ಬೋಧಿಸಲು ನಾರಾಯಣಾಂಶ ಸಂಭೂತನಾದ ವೇದವ್ಯಾಸ ಮಹಾಮುನಿಯು ಪುರಾಣ ಇತಿಹಾಸಗಳನ್ನು ರಚಿಸಿರುವನು. ಆ ಪುರಾಣ ರಚನೆಯು ಮಿತ್ರಸಮ್ಮಿತವಾದ ಉಪದೇಶರೀತಿಯಿಂದ ಗರ್ಭಿತವಾಗಿ ವಿಶೇಷವಾಗಿ ಮನರಂಜಕವಾಗಿರುವುದರಿಂದ ವೇದ-ಶಾಸ್ತ್ರವಾಙ್ಮಯಗಳನ್ನು ಮೀರಿರುವ ವೈಶಿಷ್ಟ್ಯವನ್ನು ಹೊಂದಿದೆ.

ಈ ಪುರಾಣಗಳಲ್ಲಿ " ಸೃಷ್ಟಿಶ್ಚಾಪಿ ವಿಸೃಷ್ಟಿಶ್ಚ......................., ಉತ್ಕೀರ್ತನಂ ಹರೇರೇವ " ಮುಂತಾದ ವಚನಗಳ ಆಧಾರದಂತೆ ಸೃಷ್ಟಿ, ಸ್ಥಿತಿ, ಪ್ರಲಯ ಮತ್ತು ಭಗವಂತನ ಚರಿತ್ರ ಕೀರ್ತನ ಮುಂತಾದ ಅನೇಕ ವಿಷಯಗಳು ವರ್ಣಿಸಲ್ಪಟ್ಟಿವೆ. ಪುರಾಣಗಳ ಪಠನ ಶ್ರವಣಗಳಿಂದ " ಧರ್ಮಾಧರ್ಮ ಪರಿಜ್ಞಾನಂ ಸದಾಚಾರ ಪ್ರವರ್ತನಮ್, ಗತಿಶ್ಚ ಪರಮಾ ತದ್ವದ್ಭಕ್ತಿರ್ಭಗವತಿ ಪ್ರಭೌ " ಎಂಬ ಸೂಕ್ತಿಯಲ್ಲಿ ಹೇಳಿರುವಂತೆ ಧರ್ಮ-ಅಧರ್ಮಗಳ ಜ್ಞಾನ, ಸದಾಚಾರಪ್ರವೃತ್ತಿ ಮತ್ತು ಭಗವದ್ಭಕ್ತಿ ಮುಂತಾದ ಫಲಗಳು ಲಭಿಸುವುವು. ತನ್ಮೂಲಕವಾಗಿ ಚಿತ್ತವು ಶುದ್ಧಿಹೊಂದಿ ಪರಮಪುರುಷಾರ್ಥಪ್ರಾಪ್ತಿಗೆ ಮಾರ್ಗವು ದೊರೆಯುವುದು.

ಈ ಪುರಾಣಗಣದಲ್ಲಿ ಮಹರ್ಷಿ ವೇದವ್ಯಾಸ ರಚಿತವಾದ ಕೂರ್ಮಪುರಾಣವು ಒಂದಾಗಿದೆ. ಕನ್ನಡ ಅನುವಾದದಿಂದ ಕೂಡಿದ ಕೂರ್ಮಪುರಾಣದ ಮೊದಲನೆಯದಾದ ಈ ಸಂಚಿಕೆಯಲ್ಲಿ ಆದಿಯಿಂದ ಇಪ್ಪತ್ತು ಅಧ್ಯಾಯಗಳು ಸೇರಿಕೊಂಡಿವೆ. ಇವುಗಳ ಕಥಾಸಾರಾಂಶವು ಸ್ವಲ್ಪಮಟ್ಟಿನ ವಿಸ್ತಾರದಿಂದ ಕೂಡಿದ ವಿಷಯಾನುಕ್ರಮಣಿಯಿಂದ ಸಂಗ್ರಹವಾಗಿ ತಿಳಿಯಬಹುದಾಗಿದೆ. ಮುಖ್ಯವಾಗಿ ಹಿಂದೆ ಹೇಳಿರುವ ರೀತಿಯಂತೆ

ಚಿತ್ತದ ಸಂಸ್ಕಾರದಿಂದ ಮಾನವನ ವಿಶಿಷ್ಟ ಕರ್ಮಗಳು ಪವಿತ್ರವಾಗಿ ಸತ್ಫಲದಾಯಕ ಗಳಾಗುವುವು. ಚಿತ್ತಶುದ್ಧಿಯಿಲ್ಲದೆ ಆಚರಿಸಿದ ಕರ್ಮಗಳು ಗೀತೆಯಲ್ಲಿ ಹೇಳಿದ ತಾಮಸ ಕರ್ಮಗಳ ಗಣಕ್ಕೆ ಸೇರಿ ಉತ್ತಮ ಫಲವನ್ನೇ ಕೊಡದೆ ಆತ್ಮವಿನಾಶಕ್ಕೆ ಕಾರಣವಾಗುವುವು. ಇದಕ್ಕೆ ಈ ಪುರಾಣ ಚರಿತ್ರೆಗಳಲ್ಲಿ ಒಂದಾದ ದಕ್ಷಬ್ರಹ್ಮನು ಆಚರಿಸಿದ ಯಜ್ಞವನ್ನು ವಿಮರ್ಶಿಸಬಹುದು. ನಿಷ್ಕಾರಣವಾದ ಶಿವದ್ವೇಷವೆಂಬ ತಾಮಸವೃತ್ತಿಯು ದಕ್ಷಬ್ರಹ್ಮನನ್ನು ಆವರಿಸಿತು. ಆಗ ಅವನು ಆಚರಿಸಿದ ಯಜ್ಞ ಸಮಾರಂಭವು ವಿಫಲವೂ, ಅನರ್ಥಕಾರಿಯೂ ಆಗಿ ಪರಿಣಮಿಸಿತು. ತಾಮಸ ವೃತ್ತಿಯು ಉದಯಿಸದಿದ್ದರೆ ಆಗಿನ ಸತ್ಕರ್ಮವು ಯತ್ಕಿಂಚಿತ್ತಾದ ಅಂಗಲೋಪವು ಸಂಭವಿಸಿದರೂ "ನೇಹಾಭಿಕ್ರಮ ನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ । ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥" ಎಂಬ ಗೀತಾ ವಚನದಂತೆ ಅದು ಅನರ್ಥಕರವಾಗುವುದಿಲ್ಲ. ಆದ್ದರಿಂದ ಚಿತ್ತದಲ್ಲಿರುವ ಕಾಮ ಕ್ರೋಧಾದಿ ರಾಜಸ-ತಾಮಸವೃತ್ತಿಗಳೆಂಬ ಆಸುರೀವೃತ್ತಿಯನ್ನು ದೂರಮಾಡಿ ಸಾತ್ವಿಕವೃತ್ತಿಯೆಂಬ ದೈವೀಸಂಪತ್ತನ್ನು ಹೆಚ್ಚಿಸಲು ಮತ್ತು ತನ್ಮೂಲಕವಾಗಿ ಧರ್ಮಾದಿ ಸದಾಚಾರಗಳನ್ನು ಸಾರ್ಥಕಗೊಳಿಸಲು ಪುರಾಣಶ್ರವಣಾದಿಗಳು ಆವಶ್ಯಕವಾಗಿವೆ. ಇಂತಹ ಧರ್ಮಸೂಕ್ಷ್ಮಗಳನ್ನು ಬೋಧಿಸುವ ಅನೇಕ ಉಪಾಖ್ಯಾನಗಳು ಈ ಪುರಾಣದಲ್ಲಿ ತುಂಬಿವೆ. ಅವುಗಳಲ್ಲಿ ಒಂದಾದ ವಸುಮನ ರಾಜನ ಚರಿತ್ರೆಯನ್ನು ಬೋಧಿಸುತ್ತ ಈ ಸಂಚಿಕೆಯು ಕೊನೆಗಂಡಿರುವುದು.

ಆಳುವ ಮಹಾಸ್ವಾಮಿಯವರು **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್** ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರ ಆಜ್ಞೆಯಂತೆ ಸಂಸ್ಕೃತದಲ್ಲಿದ್ದ ಈ ಗ್ರಂಥವನ್ನು ಕನ್ನಡಿಗರ ತಿಳಿವಳಿಕೆಗಾಗಿ ಕನ್ನಡಕ್ಕೆ ಪರಿವರ್ತನಮಾಡಿರುತ್ತೇನೆ. ಇದು ಉತ್ತಮರೀತಿಯಿಂದ ಅಂದವಾಗಿರುವಂತೆ ಮುದ್ರಿಸಲ್ಪಟ್ಟಿದೆ. ಈ ರೀತಿ ಈ ಗ್ರಂಥವು ಪ್ರಕಾಶಕ್ಕೆ ಬಂದು ಸಜ್ಜನರ ಸೇವೆ ಮಾಡಲು ಅವಕಾಶಮಾಡಿಕೊಟ್ಟ ಮಹನೀಯರಿಗೆ ತುಂಬಾ ಕೃತಜ್ಞನಾಗಿದ್ದೇನೆ.

ಮೈಸೂರು,
ತಾ॥ ೨೮-೧೧-೪೭.

ಅನುವಾದಕ:
**ಪಾಟಣಕರ ಚಂದ್ರಶೇಖರಭಟ್ಟ,**
ಆಸ್ಥಾನ ವಿದ್ವಾನ್.

# ವಿಷಯಾನುಕ್ರಮಣಿಕೆ

॥ ಓಂ ಶ್ರೀ ಗಣೇಶಾಯನಮಃ ॥

# ಕೂರ್ಮ ಪುರಾಣಂ

## ಇಂದ್ರದ್ಯುಮ್ನಸ್ಯ ಮೋಕ್ಷಪ್ರಾಪ್ತಿವರ್ಣನಮ್

**ಓಂ ನಮಸ್ಕೃತ್ಯಾಪ್ರಮೇಯಾಯ ವಿಷ್ಣವೇ ಕೂರ್ಮರೂಪಿಣೇ ।**
**ಪುರಾಣಂ ಸಂಪ್ರವಕ್ಷ್ಯಾಮಿ ಯದುಕ್ತಂ ವಿಶ್ವಯೋನಿನಾ ॥ ೧ ॥**

**ಸತ್ರಾಂತೇ ಸೂತಮನಘಂ ನೈಮಿಷೇಯಾ ಮಹರ್ಷಯಃ ।**
**ಪುರಾಣಸಂಹಿತಾಂ ಪುಣ್ಯಾಂ ಪಪ್ರಚ್ಛೂ ರೋಮಹರ್ಷಣಮ್ ॥ ೨ ॥**

---

## ಮೊದಲನೆಯ ಅಧ್ಯಾಯವು.

ಕೂರ್ಮ ಪುರಾಣವನ್ನು ಆರಂಭಿಸುವ ಮೊದಲು ಈ ಪುರಾಣ ಪ್ರತಿಪಾದ್ಯನಾದ ಕೂರ್ಮರೂಪಿಯಾದ ಪರಮಾತ್ಮನನ್ನು ನಮಸ್ಕರಿಸಿ ಮಂಗಲಮಾಡಿ, ಪ್ರಪಂಚಕ್ಕೆ ಮೂಲಕಾರಣನಾದ ನಾರಾಯಣನಿಂದ ಸಂಪ್ರದಾಯ ಬದ್ಧವಾಗಿರುವ ಪುರಾಣವನ್ನು ಹೇಳುವೆನೆಂದು ಗ್ರಂಥಕಾರನು ಪ್ರತಿಜ್ಞೆಯನ್ನು ಈ ಪದ್ಯದಲ್ಲಿ ಬೋಧಿಸಿರುತ್ತಾನೆ:—

೧. ಸಕಲ ಪ್ರಮಾಣಾಗೋಚರನಾಗಿಯೂ, ಸಮಸ್ತ ಭುವನವ್ಯಾಪಕನೂ ಇಚ್ಛಾವಶದಿಂದ ಕೂರ್ಮ ರೂಪವನ್ನು ಪರಿಗ್ರಹಿಸಿದವನೂ ಆದ ಪರಮಾತ್ಮನಿಗೆ ನಮಸ್ಕರಿಸಿ ಬ್ರಹ್ಮದೇವನು ಹಿಂದೆ ವಿನೀತಶಿಷ್ಯರಿಗೆ ಉಪದೇಶಮಾಡಿರುವ ಈ ಪುರಾಣವನ್ನು ಹೇಳುವೆನು.

೨. ನೈಮಿಷಾರಣ್ಯವಾಸಿಗಳಾದ ಮಹರ್ಷಿಗಳೆಲ್ಲರೂ ತಾವು ಕೈಗೊಂಡಿರುವ ಸತ್ರಯಾಗದ ಅವಸಾನವಲ್ಲಿ ನಿಷ್ಕಲ್ಮಷನಾದ ಸೂತವಂಶೋತ್ಪನ್ನನಾದ ವಿಚಿತ್ರ ಕಥಾನಕಗಳ ಪ್ರವಚನದಿಂದ ರೋಮಾಂಚವನ್ನುಂಟುಮಾಡುವುದರಿಂದ ರೋಮಹರ್ಷಣನೆಂಬ ಅನ್ವರ್ಥನಾಮಧೇಯವುಳ್ಳ ಮುನಿಯನ್ನು ಕುರಿತು ದಿವ್ಯವಾದ ಮತ್ತು ಪವಿತ್ರವಾದ ಈ ಪುರಾಣಸಂಹಿತೆಯನ್ನು ಪ್ರಶ್ನಿಸಿದರು.

ತ್ವಯಾ ಸೂತ ಮಹಾಬುದ್ಧೇ ಭಗವಾನ್ ಬ್ರಹ್ಮವಿತ್ತಮಃ ।
ಇತಿಹಾಸಪುರಾಣಾರ್ಥಂ ವ್ಯಾಸಃ ಸಮ್ಯಗುಪಾಸಿತಃ ॥ ೩ ॥

ತಸ್ಯ ತೇ ಸರ್ವರೋಮಾಣಿ ವಚಸಾ ಹೃಷಿತಾನಿ ಯತ್ ।
ದ್ವೈಪಾಯನಸ್ಯ ತು ಭವಾಂಸ್ತತೋ ವೈ ರೋಮಹರ್ಷಣಃ ॥ ೪ ॥

ಭವಂತಮೇವ ಭಗವಾನ್ ವ್ಯಾಜಹಾರ ಸ್ವಯಂ ಪ್ರಭುಃ ।
ಮುನೀನಾಂ ಸಂಹಿತಾಂ ವಕ್ತುಂ ವ್ಯಾಸಃ ಪೌರಾಣಿಕೀಂ ಪುರಾ ॥ ೫ ॥

ತ್ವಂ ಹಿ ಸ್ವಾಯಂಭುವೇ ಯಜ್ಞೇ ಸುತ್ಯಾಹೇ ವಿತತೇ ಸತಿ ।
ಸಂಭೂತಃ ಸಂಹಿತಾಂ ವಕ್ತುಂ ಸ್ವಾಂಶೇನ ಪುರುಷೋತ್ತಮಃ ॥ ೬ ॥

---

೩. ಮಹಾಪ್ರಜ್ಞಾಶಾಲಿಯಾದ ಸೂತಮಹಾಮುನಿಯೇ! ಬ್ರಹ್ಮಜ್ಞಾನಿಗಳಲ್ಲಿ ಪ್ರಶಸ್ತನಾದ ಮತ್ತು ಷಡ್ಗುಣೈಶ್ವರ್ಯಸಂಪನ್ನನಾದ ವ್ಯಾಸಮುನಿಯನ್ನು ಅನೇಕ ಇತಿಹಾಸ ಪುರಾಣಗಳನ್ನು ಅವರಿಂದ ತಿಳಿಯಬೇಕೆಂಬ ಕುತೂಹಲದಿಂದ ನೀನು ಚನ್ನಾಗಿ ಶುಶ್ರೂಷೆಮಾಡಿರುವೆ.

೪. ದ್ವೈಪಾಯನನಾದ ವ್ಯಾಸಮುನಿಯ ವಚನವನ್ನು ಶ್ರವಣಮಾಡುತ್ತಿದ್ದ ನಿನಗೆ ಶ್ರವಣಾನಂದದಿಂದ ಸಮಸ್ತ ರೋಮಗಳೂ ರೋಮಾಂಚಿತವಾಗಿರುವುದರಿಂದ ನೀನು ರೋಮಹರ್ಷಣನೆಂಬ ಅನ್ವರ್ಥನಾಮಾಂಕಿತನಾಗಿರುವೆ.

೫. ಉತ್ಪತ್ತಿ-ಸ್ಥಿತಿನಾದಿ ಕಾಲತ್ರಯಜ್ಞಾನವುಳ್ಳವನೂ ಮಹರ್ಷಿಗಳಿಗೆಲ್ಲ ಪ್ರಭುವೂ ಆದ ವ್ಯಾಸಮುನಿಯು ಪೂರ್ವದಲ್ಲಿ ಈ ಪುರಾಣಸಂಹಿತೆಯನ್ನು ತಾನಾಗಿ ನಿನಗೆ ಉಪದೇಶಿಸಿರುವನು.

೬. ಸ್ವಯಂಭುವಾದ ಬ್ರಹ್ಮದೇವನು ಮಾಡಿದ ಯಜ್ಞದಲ್ಲಿ ಸುತ್ಯಾಹ ( ಪ್ರಧಾನಕರ್ಮ ) ಕರ್ಮವು ಸಾಂಗವಾಗಿ ನಡೆಯುತ್ತಲಿರಲು ಪುರುಷೋತ್ತಮನು ಈ ಸಂಹಿತೆಯನ್ನು ಹೇಳಲು ತನ್ನ ಅಂಶಪರಿಪೂರ್ಣವಾದ ನಿನ್ನ ಆಕಾರದಿಂದ ಜನಿಸಿದನು.

ತಸ್ಮಾದ್ಭವಂತಂ ಪೃಚ್ಛಾಮಃ ಪುರಾಣಂ ಕೌರ್ಮಮುತ್ತಮಮ್ ।
ವಕ್ತುಮರ್ಹಸಿ ಚಾಸ್ಮಾಕಂ ಪುರಾಣಾರ್ಥವಿಶಾರದ ॥ ೭ ॥

ಮುನೀನಾಂ ವಚನಂ ಶ್ರುತ್ವಾ ಸೂತಃ ಪೌರಾಣಿಕೋತ್ತಮಃ ।
ಪ್ರಣಮ್ಯ ಮನಸಾ ಪ್ರಾಹ ಗುರುಂ ಸತ್ಯವತೀಸುತಮ್ ॥ ೮ ॥

ರೋಮಹರ್ಷಣ ಉವಾಚ:—

ನಮಸ್ಕೃತ್ಯ ಜಗದ್ಯೋನಿಂ ಕೂರ್ಮರೂಪಧರಂ ಹರಿಮ್ ।
ವಕ್ಷ್ಯೇ ಪೌರಾಣಿಕೀಂ ದಿವ್ಯಾಂ ಕಥಾಂ ಪಾಪಪ್ರಣಾಶಿನೀಮ್ ॥ ೯ ॥

ಯಾಂ ಶ್ರುತ್ವಾ ಪಾಪಕರ್ಮಾಪಿ ಗಚ್ಛೇತ ಪರಮಾಂ ಗತಿಮ್ ।
ನ ನಾಸ್ತಿಕೇ ಕಥಾಂ ಪುಣ್ಯಾಮಿಮಾಂ ಬ್ರೂಯಾತ್ಕದಾಚನ ॥ ೧೦ ॥

---

೭. ಆದುದರಿಂದ ಉತ್ತಮವಾದ ಈ ಕೂರ್ಮಪುರಾಣವನ್ನು ಉಪದೇಶಿಸಲು ನಿನ್ನನ್ನು ಕೇಳಿಕೊಳ್ಳುತ್ತಲಿದ್ದೇವೆ. ಪುರಾಣಪ್ರತಿಪಾದ್ಯ ವಿಷಯಗಳಲ್ಲಿ ಪ್ರತಿಭಾವಂತನಾದ ಮುನಿಯೆ! ನಮ್ಮ ಪ್ರಾರ್ಥನೆಯನ್ನು ಅಂಗೀಕರಿಸಿ ಬೋಧಿಸಲು ನೀನು ಅರ್ಹನಾಗಿರುವಿ.

೮. ಪುರಾಣಪಾಠಕರಲ್ಲಿ ಉತ್ತಮನಾದ ಸೂತಮುನಿಯು ಮುನಿಗಳ ಈ ಪ್ರಾರ್ಥನಾವಚನವನ್ನು ಕೇಳಿ ಮನಸ್ಸಿನಲ್ಲಿ ಸತ್ಯವತೀಪುತ್ರನಾದ ವ್ಯಾಸಮುನಿಯೆಂಬ ಗುರುವನ್ನು ವಂದಿಸಿ ಹೇಳಲು ಉಪಕ್ರಮಮಾಡಿದನು.

೯. ಸೂತಮುನಿಯು ಇಂತೆಂದನು:– ನಿಖಿಲಪ್ರಪಂಚಕಾರಣನಾದ, ಕೂರ್ಮರೂಪವನ್ನು ಧರಿಸಿದ ಹರಿಯನ್ನು ನಮಸ್ಕಾರಮಾಡಿ ಶ್ರವಣಮಾಡಿದವರ ಸಕಲ ಪಾಪಗಳನ್ನು ಭಂಜಿಸುವ ದಿವ್ಯವಾದ ಪುರಾಣ ಕಥೆಯನ್ನು ಹೇಳುವೆನು.

೧೦. ಮಹಾ ಪಾತಕಿಯುಕೂಡ ಈ ಕಥೆಯನ್ನು ಶ್ರವಣಮಾಡಿ ಶ್ರೇಷ್ಠವಾದ ಸದ್ಗತಿಯನ್ನು ಹೊಂದುವನು. ಅಂತಹ ಪವಿತ್ರವಾದ ಈ ಪುರಾಣಕಥೆಯನ್ನು ನಾಸ್ತಿಕನಲ್ಲಿ ಎಂದಿಗೂ ದಾನಮಾಡಕೂಡದು.

ಶ್ರದ್ದಧಾನಾಯ ಶಾಂತಾಯ ಧಾರ್ಮಿಕಾಯ ದ್ವಿಜಾತಯೇ ।
ಇಮಾಂ ಕಥಾಮನುಬ್ರೂಯಾತ್ ಸಾಕ್ಷಾನ್ನಾರಾಯಣೇರಿತಾಮ್ ॥೧೧॥

ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।
ವಂಶಾನುಚರಿತಂ ಚೈವ ಪುರಾಣಂ ಪಂಚಲಕ್ಷಣಮ್ ॥ ೧೨ ॥

ಬ್ರಾಹ್ಮಂ ಪುರಾಣಂ ಪ್ರಥಮಂ ಪಾದ್ಮಂ ವೈಷ್ಣವಮೇವ ಚ ।
ಶೈವಂ ಭಾಗವತಂ ಚೈವ ಭವಿಷ್ಯಂ ನಾರದೀಯಕಮ್ ॥ ೧೩ ॥

ಮಾರ್ಕಂಡೇಯಮಥಾಗ್ನೇಯಂ ಬ್ರಹ್ಮವೈವರ್ತಮೇವ ಚ ।
ಲೈಂಗಂ ತಥಾ ಚ ವಾರಾಹಂ ಸ್ಕಾಂದಂ ವಾಮನಮೇವ ಚ ॥ ೧೪ ॥

ಕೌರ್ಮಂ ಮಾತ್ಸ್ಯಂ ಗಾರುಡಂ ಚ ವಾಯವೀಯಮನಂತರಮ್ ।
ಅಷ್ಟಾದಶಂ ಸಮುದ್ದಿಷ್ಟಂ ಬ್ರಹ್ಮಾಂಡಮಿತಿ ಸಂಜ್ಞಿತಮ್ ॥ ೧೫ ॥

---

೧೧. ನಾರಾಯಣನಿಂದ ಸಾಕ್ಷಾತ್ ಉಪದೇಶಿಸಲ್ಪಟ್ಟು ಸಂಪ್ರದಾಯಾನುಸಾರವಾಗಿ ಬಂದ ಈ ಪುರಾಣಸಂಹಿತೆಯನ್ನು ಶ್ರದ್ಧಾ (ಆಸ್ತಿಕ್ಯ), ಶಾಂತಿ ಗುಣ ಮತ್ತು ಧರ್ಮಮತಿಗಳೆಂಬ ಸದ್ಗುಣಗಳಿಂದ ಕೂಡಿದ ದ್ವಿಜವಂಶದಲ್ಲಿ ಹುಟ್ಟಿರುವ ವಿನೀತ ಶಿಷ್ಯನಿಗೆ ಉಪದೇಶಮಾಡಬಹುದು.

೧೨. ಪುರಾಣವೆಂದರೆ ಸೃಷ್ಟಿ, ಸಂಹಾರ, ಸೂರ್ಯಚಂದ್ರಾದಿಗಳ ವಂಶ, ಮನ್ವಂತರ ಮತ್ತು ಆಯಾಯ ವಂಶೀಯರಾದ ಮಹಾಮಹಿಮರ ದಿವ್ಯವಾದ ಚರಿತ್ರಗಳೆಂಬ ಐದು ಅಂಗಗಳನ್ನು ಪ್ರತಿಪಾದಿಸುವ ಗ್ರಂಥವು.

ಇಂತಹ ಪುರಾಣಗಳು ಹದಿನೆಂಟು ಮುಂದೆ ಹೇಳುವ ಕ್ರಮದಂತೆ ಇವೆ.

೧೩, ೧೪, ೧೫. ೧. ಬ್ರಹ್ಮಪುರಾಣ. ೨. ಪದ್ಮಪುರಾಣ. ೩. ವಿಷ್ಣು ಪುರಾಣ. ೪. ಶೈವಪುರಾಣ. ೫. ಭಾಗವತಪುರಾಣ. ೬. ಭವಿಷ್ಯಪುರಾಣ. ೭. ನಾರದಪುರಾಣ. ೮. ಮಾರ್ಕಂಡೇಯ ಪುರಾಣ. ೯. ಅಗ್ನಿ ಪುರಾಣ. ೧೦. ಬ್ರಹ್ಮವೈವರ್ತ ಪುರಾಣ. ೧೧. ಲಿಂಗಪುರಾಣ. ೧೨. ವಾರಾಹ ಪುರಾಣ. ೧೩. ಸ್ಕಾಂದಪುರಾಣ. ೧೪ ವಾಮನ ಪುರಾಣ. ೧೫. ಕೂರ್ಮಪುರಾಣ. ೧೬. ಮತ್ಸ್ಯ ಪುರಾಣ. ೧೭. ಗರುಡ ಪುರಾಣ. ೧೮. ಬ್ರಹ್ಮಾಂಡಪುರಾಣ . ಇವು ಅಷ್ಟಾದಶ ಮಹಾಪುರಾಣಗಳೆಂದು ಪ್ರಸಿದ್ಧವಾಗಿವೆ.

ಅನ್ಯಾನ್ಯುಪಪುರಾಣಾನಿ ಮುನಿಭಿಃ ಕಥಿತಾನಿ ತು ।
ಅಷ್ಟಾದಶಪುರಾಣಾನಿ ಶ್ರುತ್ವಾ ಸಂಕ್ಷೇಪತೋ ದ್ವಿಜಾಃ ॥ ೧೬ ॥

ಆದ್ಯಂ ಸನತ್ಕುಮಾರೋಕ್ತಂ ನಾರಸಿಂಹಮತಃ ಪರಮ್ ।
ತೃತೀಯಂ ಸ್ಕಾಂದಮುದ್ದಿಷ್ಟಂ ಕುಮಾರೇಣ ತು ಭಾಷಿತಮ್ ॥ ೧೭ ॥

ಚತುರ್ಥಂ ಶಿವಧರ್ಮಾಖ್ಯಂ ಸಾಕ್ಷಾನ್ನಂದೀಶಭಾಷಿತಮ್ ।
ದುರ್ವಾಸಸೋಕ್ತಮಾಶ್ಚರ್ಯಂ ನಾರದೀಯಮತಃ ಪರಮ್ ॥ ೧೮ ॥

ಕಾಪಿಲಂ ವಾಮನಂ ಚೈವ ತಥೈವೋಶನಸೇರಿತಮ್ ।
ಬ್ರಹ್ಮಾಂಡಂ ವಾರುಣಂ ಚೈವ ಕಾಲಿಕಾಹ್ವಯಮೇವ ಚ ॥ ೧೯ ॥

ಮಾಹೇಶ್ವರಂ ತಥಾ ಸಾಂಬಂ ಸೌರಂ ಸರ್ವಾರ್ಥಸಂಚಯಮ್ ।
ಪರಾಶರೋಕ್ತಂ ಮಾರೀಚಂ ತಥೈವ ಭಾರ್ಗವಾಹ್ವಯಮ್ ॥ ೨೦ ॥

ಇದಂ ತು ಪಂಚದಶಕಂ ಪುರಾಣಂ ಕೌರ್ಮಮುತ್ತಮಮ್ ।
ಚತುರ್ಧಾ ಸಂಸ್ಥಿತಂ ಪುಣ್ಯಂ ಸಂಹಿತಾನಾಂ ಪ್ರಭೇದತಃ ॥ ೨೧ ॥

---

೧೬. ದ್ವಿಜರೆ! ಈ ಹದಿನೆಂಟು ಮಹಾಪುರಾಣಗಳನ್ನು ಸಂಕ್ಷೇಪವಾಗಿ ಶ್ರವಣಮಾಡಿ ಅನೇಕ ಮಹರ್ಷಿಗಳಿಂದ ಇತರ ಉಪಪುರಾಣಗಳು ಪಠಿಸಲ್ಪಟ್ಟಿವೆ.

೧೭, ೧೮, ೧೯, ೨೦. ಆ ಉಪಪುರಾಣಗಳಲ್ಲಿ ಸನತ್ಕುಮಾರ ಪ್ರೋಕ್ತವಾದ ಪುರಾಣ, ನಾರಸಿಂಹ ಪುರಾಣ, ಕುಮಾರಸ್ವಾಮಿಯಿಂದ ಪ್ರೋಕ್ತವಾದ ಸ್ಕಾಂದಪುರಾಣ ನಂದೀಶನಿಂದ ರಚಿತವಾದ ಶಿವಧರ್ಮ ಪುರಾಣ, ದುರ್ವಾಸಮುನಿ ರಚಿತ ಪುರಾಣ, ನಾರದಪುರಾಣ, ಕಪಿಲ ಪುರಾಣ, ವಾಮನ ಪುರಾಣ, ಶುಕ್ರಾಚಾರ್ಯ ವಿರಚಿತ ಬ್ರಹ್ಮಾಂಡಪುರಾಣ, ವಾರುಣ ಪುರಾಣ, ಕಾಲಿಕಾ ಪುರಾಣ, ಮಾಹೇಶ್ವರ ಪುರಾಣ, ಸಾಂಬಪುರಾಣ, ಸರ್ವಾರ್ಥಗರ್ಭಿತವಾದ ಸೌರಪುರಾಣ, ಪರಾಶರಮುನಿ ಪಠಿತವಾದ ಮಾರೀಚಪುರಾಣ, ಭಾರ್ಗವ ಪುರಾಣ ಮುಂತಾದುವು ಸೇರಿವೆ.

೨೧. ಮಹಾಪುರಾಣಗಳಲ್ಲಿ ಹದಿನೈದನೆಯದಾದ ಈ ಕೂರ್ಮ ಮಹಾ ಪುರಾಣವು ಬಹಳ ಉತ್ತಮವಾದುದು. ಸಂಹಿತೆಗಳು ನಾನಾ ಬಗೆಯಾಗಿರುವುದರಿಂದ ಅದಕ್ಕೆ ಅನುಗುಣವಾಗಿ ಪುರಾಣವು ನಾಲ್ಕು ಬಗೆಯಾಗಿದೆ.

ಬ್ರಾಹ್ಮೀ ಭಾಗವತೀ ಸೌರೀ ವೈಷ್ಣವೀ ಚ ಪ್ರಕೀರ್ತಿತಾಃ ।
ಚತಸ್ರಃ ಸಂಹಿತಾಃ ಪುಣ್ಯಾ ಧರ್ಮಕಾಮಾರ್ಥಮೋಕ್ಷದಾಃ ॥ ೨೨ ॥

ಇಯಂ ತು ಸಂಹಿತಾ ಬ್ರಾಹ್ಮೀ ಚತುರ್ವೇದೈಸ್ತು ಸಮ್ಮಿತಾ ।
ಭವಂತಿ ಷಟ್ಸಹಸ್ರಾಣಿ ಶ್ಲೋಕಾನಾಮತ್ರ ಸಂಖ್ಯಯಾ ॥ ೨೩ ॥

ಯತ್ರ ಧರ್ಮಾರ್ಥಕಾಮಾನಾಂ ಮೋಕ್ಷಸ್ಯ ಚ ಮುನೀಶ್ವರಾಃ ।
ಮಾಹಾತ್ಮ್ಯಮಖಿಲಂ ಬ್ರಹ್ಮ ಜ್ಞಾಯತೇ ಪರಮೇಶ್ವರಃ ॥ ೨೪ ॥

ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।
ವಂಶಾನುಚರಿತಂ ಪುಣ್ಯಾ ದಿವ್ಯಾ ಪ್ರಾಸಂಗಿಕೀ ಕಥಾ ॥ ೨೫ ॥

---

೨೨. ಬ್ರಾಹ್ಮೀ, ಭಾಗವತೀ, ಸೌರೀ, ವೈಷ್ಣವೀ ಎಂದು ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥಗಳನ್ನು ಸಾಧಿಸುವ ಪವಿತ್ರವಾದ ನಾಲ್ಕು ಸಂಹಿತೆಗಳಿವೆ.

೨೩. ಈಗ ಪ್ರಕೃತವಾದ ಕೂರ್ಮಪುರಾಣವು ನಾಲ್ಕು ವೇದಗಳಿಗೆ ತುಲ್ಯವಾದ ಬ್ರಾಹ್ಮೀ ಸಂಹಿತಾ ಸ್ವರೂಪವಾದುದು. ಇದರಲ್ಲಿ ಪಠಿತವಾದ ಶ್ಲೋಕಗಳು ಆರು ಸಹಸ್ರ ಸಂಖ್ಯೆಯಾಗಿವೆ.

೨೪. ಮುನೀಶ್ವರರೇ! ಯಾವ ಈ ಪುರಾಣದಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷಗಳ ಮಹಾಮಹಿಮೆಯೂ ಪರಮೇಶ್ವರನಾದ ಪರಬ್ರಹ್ಮವಸ್ತುವೂ ತಿಳಿಯುವುವೋ ಅಂತಹ ಈ ಕೂರ್ಮಪುರಾಣವು ಅತ್ಯುತ್ತಮವಾದುದು.

೨೫. ಸಾಮಾನ್ಯ ಪುರಾಣ ಲಕ್ಷಣವನ್ನನುಸರಿಸಿ ಇದರಲ್ಲಿ ಸೃಷ್ಟಿ, ಪ್ರಲಯ, ವಂಶ, ಮನ್ವಂತರ, ಮಹಾವಂಶೀಯ ಚರಿತಗಳೆಂಬ ಐದು ಪ್ರತಿಪಾದ್ಯ ವಿಷಯಗಳು ಪ್ರಕಾಶಿಸುವುವು ಮತ್ತು ಸಂದರ್ಭಾನುಗುಣವಾಗಿ ಬಂದ ಪವಿತ್ರವಾದ ದಿವ್ಯ ಕಥೆಯೂ ಪ್ರತಿಪಾದಿಸಲ್ಪಟ್ಟಿದೆ.

ಬ್ರಾಹ್ಮಣಾದ್ಯೈರಿಯಂ ಧಾರ್ಯಾ ಧಾರ್ಮಿಕೈರ್ವೇದಪಾರಗೈಃ ।
ತಾಮಹಂ ವರ್ಣಯಿಷ್ಯಾಮಿ ವ್ಯಾಸೇನ ಕಥಿತಾಂ ಪುರಾ ॥ ೨೬ ॥

ಪುರಾಮೃತಾರ್ಥಂ ದೈತೇಯದಾನವೈಃ ಸಹ ದೇವತಾಃ ।
ಮಂಥಾನಂ ಮಂದರಂ ಕೃತ್ವಾ ಮಮಂಥುಃ ಕ್ಷೀರಸಾಗರಮ್ ॥ ೨೭ ॥

ಮಥ್ಯಮಾನೇ ತದಾ ತಸ್ಮಿನ್ ಕೂರ್ಮರೂಪೀ ಜನಾರ್ದನಃ ।
ಬಭಾರ ಮಂದರಂ ದೇವೋ ದೇವಾನಾಂ ಹಿತಕಾಮ್ಯಯಾ ॥ ೨೮ ॥

ದೇವಾಶ್ಚ ತುಷ್ಟುವುರ್ದೇವಂ ನಾರದಾದ್ಯಾ ಮಹರ್ಷಯಃ ।
ಕೂರ್ಮರೂಪಧರಂ ದೃಷ್ಟ್ವಾ ಸಾಕ್ಷಿಣಂ ವಿಷ್ಣುಮವ್ಯಯಮ್ ॥ ೨೯ ॥

---

೨೬. ವೇದಪಾರಂಗತರೂ, ಸತ್ಕರ್ಮಾನುಷ್ಠಾನ ತತ್ಪರರೂ ಆದ ತ್ರೈವರ್ಣಿಕರಿಂದ ಈ ಸಂಹಿತೆಯು ಗ್ರಹಿಸಿ ಧಾರಣಮಾಡಲು ಅರ್ಹವಾದುದು. ವ್ಯಾಸಮುನಿಯು ಅನುಗ್ರಹಿಸಿ ಹೇಳಿದ ಈ ಸಂಹಿತೆಯನ್ನು ನಾನು ವರ್ಣಿಸುವೆನು.

೨೭. ಪೂರ್ವಕಾಲದಲ್ಲಿ ದೇವತೆಗಳು ದೈತ್ಯ-ದಾನವರೊಡನೆ ಅಮೃತ ಪ್ರಾಪ್ತಿಗೋಸ್ಕರವಾಗಿ ಮಂದರಪರ್ವತವನ್ನು ಕಡಗೋಲನ್ನಾಗಿ ಏರ್ಪಡಿಸಿಕೊಂಡು ಕ್ಷೀರಸಮುದ್ರವನ್ನು ಮಥಿಸಿದರು.

೨೮. ಹೀಗೆ ಸಮುದ್ರಮಥನವಾಗುತ್ತಿದ್ದ ಸಮಯದಲ್ಲಿ ದೇವತೆಗಳಿಗೆ ಹಿತವನ್ನು ಬಯಸಿ ಮಹಾವಿಷ್ಣುವು ಕೂರ್ಮ (ಆಮೆ) ರೂಪವನ್ನು ಧರಿಸಿ ಮಂದರ ಪರ್ವತದ ಅಧೋಭಾಗದಲ್ಲಿ ನಿಂತು ಮಂದರವೆಂಬ ಮಥನದಂಡವನ್ನು ಧರಿಸಿದನು.

೨೯. ಸರ್ವಸಾಕ್ಷಿಯೂ, ಆದಿ-ಅಂತ ರಹಿತನೂ, ಪ್ರಕಾಶಸ್ವಭಾವನೂ ಆದ ವಿಷ್ಣು ಪರಮಾತ್ಮನು ಕೂರ್ಮರೂಪದಿಂದ ಬಂದು ದೇವತೆಗಳ ಹಿತ ಸಾಧನದಲ್ಲಿ ಸಹಾಯಮಾಡುವುದನ್ನು ಕಂಡು ಸಮಸ್ತ ದೇವತೆಗಳೂ ನಾರದರೇ ಮುಂತಾದ ಮುನಿಗಳೂ ಕೂರ್ಮರೂಪಿಯಾದ ವಿಷ್ಣುವನ್ನು ಸ್ತುತಿಮಾಡಿದರು.

ತದಂತರೇಽಭವದ್ದೇವೀ ಶ್ರೀರ್ನಾರಾಯಣವಲ್ಲಭಾ ।
ಜಗ್ರಾಹ ಭಗವಾನ್ ವಿಷ್ಣುಸ್ತಾಮೇವ ಪುರುಷೋತ್ತಮಃ ॥ ೩೦ ॥

ತೇಜಸಾ ವಿಷ್ಣುಮವ್ಯಕ್ತಂ ನಾರದಾದ್ಯಾ ಮಹರ್ಷಯಃ ।
ಮೋಹಿತಾಃ ಸಹ ಶಕ್ರೇಣ ಶ್ರೇಯೋವಚನಮಬ್ರುವನ್ ॥ ೩೧ ॥

ಭಗವನ್ ದೇವದೇವೇಶ ನಾರಾಯಣ ಜಗನ್ಮಯ ।
ಕೈಷಾ ದೇವೀ ವಿಶಾಲಾಕ್ಷೀ ಯಥಾವದ್ಬ್ರೂಹಿ ಪೃಚ್ಛತಾಮ್ ॥ ೩೨ ॥

ಶ್ರುತ್ವಾ ತೇಷಾಂ ತದಾ ವಾಕ್ಯಂ ವಿಷ್ಣುರ್ದಾನವಮರ್ದನಃ ।
ಪ್ರೋವಾಚ ದೇವೀಂ ಸಂಪ್ರೇಕ್ಷ್ಯ ನಾರದಾದೀನಕಲ್ಮಷಾನ್ ॥ ೩೩ ॥

---

೩೦. ಕೂರ್ಮರೂಪಿಯಾದ ವಿಷ್ಣುವಿನ ಸಹಾಯದಿಂದ ಸಮುದ್ರಮಥನವು ನಡೆಯುತ್ತಿರಲು ನಾರಾಯಣಪತ್ನಿಯಾದ ಲಕ್ಷ್ಮೀದೇವಿಯು ಕ್ಷೀರ ಸಮುದ್ರದಲ್ಲಿ ಉದ್ಭವಿಸಿದಳು. ಭಗವಂತನೂ ಪುರುಷೋತ್ತಮನೂ ಆದ ವಿಷ್ಣುವು ಆ ಲಕ್ಷ್ಮಿಯನ್ನು ಪರಿಗ್ರಹಿಸಿದನು.

೩೧. ತೇಜಸ್ಸಿನಿಂದ ಥಳಥಳಿಸುತ್ತಿರುವ ಮತ್ತು ವಾಙ್ಮನಸಾಗೋಚರನಾದ ವಿಷ್ಣುವನ್ನು ಕುರಿತು ಇಂದ್ರ ಮುಂತಾದ ದೇವತೆಗಳಿಂದ ಕೂಡಿದ ನಾರದಾದಿ ಮಹರ್ಷಿಗಳು ಮೋಹಪಟ್ಟವರಾಗಿ ಮುಂದೆ ಹೇಳುವ ಶುಭ ವಚನಗಳನ್ನು ಆಡಿದರು.

೩೨. ಭಗವಂತನೆ ! ನಿಖಿಲ ದೇವಾಧಿಪತಿಯೇ ! ಜಗದಂತರ್ಯಾಮಿಯೇ ! ನಾರಾಯಣನೆ ! ವಿಶಾಲಲೋಚನಗಳಿಂದ ಕೂಡಿ ಸುಂದರಿಯಾದ ಈ ದೇವಿಯು ಯಾರು ? ಕೇಳಬೇಕೆಂಬ ಕುತೂಹಲವುಳ್ಳ ನಮಗೆ ಈ ತತ್ತ್ವಾರ್ಥವನ್ನು ಹೇಳಿ ಅನುಗ್ರಹಿಸಬೇಕು.

೩೩. ಆಗ ದಾನವರನ್ನು ನಿಗ್ರಹಿಸುವ ವಿಷ್ಣುವು ಮುನಿಗಳ ಪ್ರಶ್ನೆಯನ್ನು ಲಾಲಿಸಿ ಲಕ್ಷ್ಮೀದೇವಿಯನ್ನು ನೋಡುತ್ತ ನಿಷ್ಕಲ್ಮಷರಾದ ನಾರದಾದಿ ಮುನಿಗಳಿಗೆ ಉತ್ತರವನ್ನು ಹೇಳಿದನು.

ಇಯಂ ಸಾ ಪರಮಾ ಶಕ್ತಿರ್ಮನ್ಮಯೀ ಬ್ರಹ್ಮರೂಪಿಣೀ ।
ಮಾಯಾ ಮಮ ಪ್ರಿಯಾನಂತಾ ಯಯೇದಂ ಧಾರ್ಯತೇ ಜಗತ್ ॥

ಅನಯೈವ ಜಗತ್ಸರ್ವಂ ಸದೇವಾಸುರಮಾನುಷಮ್
ಮೋಹಯಾಮಿ ದ್ವಿಜಶ್ರೇಷ್ಠಾ ಗ್ರಸಾಮಿ ವಿಸೃಜಾಮಿ ಚ　　॥ ೩೫ ॥

ಉತ್ಪತ್ತಿಂ ಪ್ರಲಯಂ ಚೈವ ಭೂತಾನಾಮಾಗತಿಂ ಗತಿಮ್ ।
ವಿದ್ಯಯಾ ವೀಕ್ಷ್ಯ ಚಾತ್ಮಾನಂ ತರಂತಿ ವಿಪುಲಾಮಿಮಾಮ್　　॥ ೩೬ ॥

ಅಸ್ಯಾಸ್ತ್ವಂಶಾನಧಿಷ್ಠಾಯ ಶಕ್ತಿಮಂತೋಽಭವನ್ ಸುರಾಃ ।
ಬ್ರಹ್ಮೇಶಾನಾದಯಃ ಸರ್ವೇ ಸರ್ವಶಕ್ತಿರಿಯಂ ಮಮ　　॥ ೩೭ ॥

---

೩೪. ನನ್ನ ಪ್ರಿಯೆಯಾದ ಈ ದೇವಿಯು ನಿಖಿಲ ಜಗದ್ಧಾರಕಳಾದ ಪರಮ ಶಕ್ತಿಯು, ನನಗೆ ಅಧೀನಳು, ಪರಬ್ರಹ್ಮಸ್ವರೂಪಳು ಮತ್ತು ಅಂತವಿಲ್ಲದ ಮಾಯಾತ್ಮಕಳು.

೩೫. ದ್ವಿಜಶ್ರೇಷ್ಠರೆ ! ದೇವ, ಅಸುರ, ಮನುಷ್ಯರಿಂದ ಪರಿಪೂರ್ಣವಾದ ಸಕಲ ಪ್ರಪಂಚವನ್ನು ಈ ಮಾಯೆಯಿಂದ ಮೋಹಪಡಿಸಿ ಅವರವರ ಕರ್ಮಪರಿ ಪಾಕಕ್ಕೆ ತಕ್ಕಂತೆ ಸಂಹರಿಸುತ್ತಲೂ ಪುನಃ ಸೃಜಿಸುತ್ತಲೂ ಇರುವೆನು.

೩೬. ಸಮಸ್ತ ಪ್ರಾಣಿಗಳ ಉತ್ಪತ್ತಿ, ನಾಶ, ಗಮನ, ಆಗಮನ ಮುಂತಾದು ವುಗಳನ್ನು ಮಾಯಿಕವೆಂದು ಅರಿತು ತತ್ತ್ವಜ್ಞಾನದಿಂದ ಆತ್ಮನನ್ನು ಸಾಕ್ಷಾತ್ಕರಿಸಿದ ಜ್ಞಾನಿಗಳು ಈ ಮಾಯೆಯನ್ನು ದಾಟುವರು.

೩೭. ಈ ಮಾಯೆಯು ಸರ್ವಶಕ್ತಿಗಳಿಂದ ಕೂಡಿದವಳಾಗಿ ನನ್ನ ಅಧೀನ ವಾಗಿರುವುದು. ಬ್ರಹ್ಮ-ಈಶ್ವರ ಮುಂತಾದ ದೇವತೆಗಳು ಈ ಮಾಯೆಯ ಅಂಶ ಗಳನ್ನು ಅವಲಂಬಿಸಿ ತಮ್ಮ ತಮ್ಮ ಕರ್ತವ್ಯಾಧಿಕಾರಗಳಲ್ಲಿ ಸಂಪೂರ್ಣಶಕ್ತಿವಂತರಾ ಗಿರುವರು.

ಸೈಷಾ ಸರ್ವಜಗತ್ಸೂತಿಃ ಪ್ರಕೃತಿಸ್ತ್ರಿಗುಣಾತ್ಮಿಕಾ ।
ಪ್ರಾಗೇವ ಮತ್ತಃ ಸಂಜಾತಾ ಶ್ರೀಃ ಕಲ್ಪೇ ಪದ್ಮವಾಸಿನೀ ॥ ೩೮ ॥

ಚತುರ್ಭುಜಾ ಶಂಖಚಕ್ರಪದ್ಮಹಸ್ತಾ ಸ್ರಗನ್ವಿತಾ ।
ಕೋಟಿಸೂರ್ಯಪ್ರತೀಕಾಶಾ ಮೋಹಿನೀ ಸರ್ವದೇಹಿನಾಮ್ ॥ ೩೯ ॥

ನಾಲಂ ದೇವಾ ನ ಪಿತರೋ ಮಾನವಾ ವಾಸವೋಽಪಿ ಚ ।
ಮಾಯಾಮೇತಾಂ ಸಮುತ್ತರ್ತುಂ ಯೇ ಚಾನ್ಯೇ ಭುವಿ ದೇಹಿನಃ ॥

ಇತ್ಯುಕ್ತಾ ವಾಸುದೇವೇನ ಮುನಯೋ ವಿಷ್ಣುಮಬ್ರುವನ್ ।
ಬ್ರೂಹಿ ತ್ವಂ ಪುಂಡರೀಕಾಕ್ಷ ಯದ್ಧಿ ಕಾಲತ್ರಯೇಽಪಿ ಚ ॥ ೪೧ ॥

---

೩೮. ಸರ್ವಜಗತ್ತಿನ ಉತ್ಪತ್ತಿಗೆ ಕಾರಣಳೂ ಸತ್ತ್ವ, ರಜಸ್ಸು, ತಮಸ್ಸೆಂಬ ತ್ರಿಗುಣ ಸಂಘಾತಸ್ವರೂಪಳೂ ಪ್ರಕೃತಿಯೆಂದು ಕರೆಯಲ್ಪಡುವವಳೂ ಆದ ಆ ಮಾಯೆಯು ಈ ಕಲ್ಪದಲ್ಲಿ ಪದ್ಮದಲ್ಲಿ ವಾಸಮಾಡುವ ಲಕ್ಷ್ಮೀ ದೇವಿಯ ರೂಪದಿಂದ ನನ್ನಿಂದ ಮೊದಲು ಹುಟ್ಟಿರುವಳು.

೩೯. ಈಕೆಯು ಪರಿಗ್ರಹಿಸಿರುವ ಈ ರೂಪವು ಚತುರ್ಭುಜ, ಶಂಖ-ಚಕ್ರ ಪದ್ಮಗಳನ್ನು ಧರಿಸಿರುವ ಪಾಣಿ, ಪುಷ್ಪಮಾಲಾ ಮುಂತಾದುವುಗಳಿಂದ ಕೂಡಿ ಸಕಲ ಚರಾಚರ ಪ್ರಾಣಿಗಳನ್ನು ಮೋಹಪಡಿಸುವ ಕೋಟಿಸೂರ್ಯರಂತೆ ಉಜ್ಜ್ವಲವಾದ ಕಾಂತಿಯುಳ್ಳದ್ದಾಗಿ ಇರುವುದು.

೪೦. ದೇವತೆಗಳು, ಪಿತೃಗಳು, ಮಾನವರು, ಇಂದ್ರನು ಇವರಲ್ಲಿ ಯಾರೊಬ್ಬನೂ ಈ ಮಾಯೆಯನ್ನು ತರಣಮಾಡಲು ಶಕ್ತನಲ್ಲ. ಹೀಗಿರಲು ಭೂಮಿಯಲ್ಲಿದ್ದ ಇತರ ಅಲ್ಪಪ್ರಾಣಿಗಳ ಪಾಡೇನು ?

೪೧. ವಾಸುದೇವ ಪರಮಾತ್ಮನು ಮುನಿಗಳಿಗೆ ಈ ರೀತಿಯಾಗಿ ಹೇಳಲು, ಮುನಿಗಳು ವಿಷ್ಣುವನ್ನು ಕುರಿತು ಕಮಲದಂತೆ ಸುಂದರವಾದ ನೇತ್ರವುಳ್ಳ ಭಗವಂತನೆ! ಭೂತ, ಭವಿಷ್ಯ, ವರ್ತಮಾನಗಳೆಂಬ ತ್ರಿಕಾಲಗಳಲ್ಲಿಯೂ (ಪ್ರಲಯ ಕಾಲದಲ್ಲಿಯೂ) ಇರುವಂತಹ ಶಾಶ್ವತ ತತ್ತ್ವವು ಯಾವುದೆಂಬುದನ್ನು ಹೇಳು, ಎಂದು ಕೇಳಿಕೊಂಡರು.

ಅಥೋವಾಚ ಹೃಷೀಕೇಶೋ ಮುನೀನ್ ಮುನಿಗಣಾರ್ಚಿತಃ ।
ಅಸ್ತಿ ದ್ವಿಜಾತಿಪ್ರವರ ಇಂದ್ರದ್ಯುಮ್ನ ಇತಿ ಶ್ರುತಃ　　॥ ೪೨ ॥

ಪೂರ್ವಜನ್ಮನಿ ರಾಜಾಸಾವಧೃಷ್ಯಃ ಶಂಕರಾದಿಭಿಃ ।
ದೃಷ್ಟ್ವಾ ಮಾಂ ಕೂರ್ಮಸಂಸ್ಥಾನಂ ಶ್ರುತ್ವಾ ಪೌರಾಣಿಕೀಂ ಸ್ವಯಮ್

ಸಂಹಿತಾಂ ಮನ್ಮುಖಾದ್ದಿವ್ಯಾಂ ಪುರಸ್ಕೃತ್ಯ ಮುನೀಶ್ವರಾನ್ ।
ಬ್ರಹ್ಮಾಣಂ ಚ ಮಹಾದೇವಂ ದೇವಾಂಶ್ಚಾನ್ಯಾನ್ ಸ್ವಶಕ್ತಿಭಿಃ　॥ ೪೪ ॥

ಮಚ್ಛಕ್ತೌ ಸಂಸ್ಥಿತಾನ್ ಬುದ್ಧ್ವಾ ಮಾಮೇವ ಶರಣಂ ಗತಃ ।
ಸಂಭಾಷಿತೋ ಮಯಾ ಚಾಥ ವಿಪ್ರಯೋನಿಂ ಗಮಿಷ್ಯಸಿ　　॥ ೪೫ ॥

ಇಂದ್ರದ್ಯುಮ್ನ ಇತಿ ಖ್ಯಾತೋ ಜಾತಿಂ ಸ್ಮರಸಿ ಪೌರ್ವಿಕೀಮ್ ।
ಸರ್ವೇಷಾಮೇವ ಭೂತಾನಾಂ ದೇವಾನಾಮಪ್ಯಗೋಚರಮ್　॥ ೪೬ ॥

---

೪೨. ಆಗ ಭಗವಂತನು ಪ್ರಶ್ನೆ ಮಾಡಿದ ಭಕ್ತರಿಗೆ ತತ್ತ್ವವನ್ನು ಕೃಪೆಯಿಂದ ಉಪದೇಶಮಾಡುವವನಾಗಿ ಒಂದು ಕಥೆಯನ್ನು ಹೇಳಲು ಉಪಕ್ರಮಿಸಿದನು. ಮುನಿವೃಂದದಿಂದ ಸತ್ಕರಿಸಲ್ಪಟ್ಟವನೂ ಅಂತರ್ಯಾಮಿಯಾಗಿ ಸಕಲಕಾರ್ಯಗಳನ್ನು ಪ್ರೇರೇಪಿಸುವವನೂ ಆದ ಭಗವಂತನು ಈ ರೀತಿಯಾಗಿ ಹೇಳಿದನು. ಇಂದ್ರದ್ಯುಮ್ನನೆಂದು ಲೋಕದಲ್ಲಿ ವಿಖ್ಯಾತನಾದ ಒಬ್ಬ ದ್ವಿಜಶ್ರೇಷ್ಠನು ಪೃಥ್ವಿಯಲ್ಲಿದ್ದಾನೆ.

೪೩, ೪೪, ೪೫. ಅವನು ಪೂರ್ವಜನ್ಮದಲ್ಲಿ ಈಶ್ವರನಾದಿಯಾಗಿ ಯಾರಿಗೂ ಆಕ್ರಮಿಸಲು ಶಕ್ಯನಾಗದಷ್ಟು ವೀರ್ಯಸಂಪನ್ನನಾದ ದೊರೆಯಾಗಿದ್ದನು. ಅವನು ಕೂರ್ಮರೂಪಿಯಾದ ನನ್ನನ್ನು ಸಾಕ್ಷಾತ್ಕರಿಸಿ ಪುರಾಣ ಪ್ರತಿಪಾದ್ಯವಾದ ದಿವ್ಯ ಸಂಹಿತೆಯನ್ನು ನನ್ನಿಂದ ಕೇಳಿ ಮುನೀಶ್ವರರನ್ನು ಪುರಸ್ಕರಿಸಿ ಬ್ರಹ್ಮ, ರುದ್ರ ಮತ್ತು ಇತರ ಸಮಸ್ತ ದೇವತೆಗಳನ್ನೂ ತಮ್ಮ ತಮ್ಮ ಅಸಾಧಾರಣ ಶಕ್ತಿಸಹಿತರಾಗಿ ನನ್ನ ಶಕ್ತಿಯ ಅಧೀನರೆಂದು ಭಾವಿಸಿ ನನ್ನನ್ನು ಶರಣ ಹೊಂದಿದನು. ಆಗ ಆ ಭಕ್ತಾಗ್ರೇಸರನನ್ನು ಕುರಿತು ಮುಂದೆ ಹೇಳುವಂತೆ ಭಾಷೆಯನ್ನಿತ್ತೆನು.

೪೬, ೪೭ ಅಕಲಂಕಿಯಾದ ಭಕ್ತನೆ! ನೀನು ಮುಂದೆ ವಿಪ್ರಜನ್ಮವನ್ನು ಹೊಂದುವಿ, ಆ ಜನ್ಮದಲ್ಲಿ "ಇಂದ್ರದ್ಯುಮ್ನ" ಎಂಬ ಹೆಸರಿನಿಂದ ಖ್ಯಾತಿ ಹೊಂ

ವಕ್ತವ್ಯಂ ಯದ್ಗುಹ್ಯತಮಂ ದಾಸ್ಯೇ ಜ್ಞಾನಂ ತವಾನಘ ।
ಲಬ್ಧ್ವಾ ತನ್ಮಾಮಕಂ ಜ್ಞಾನಂ ಮಾಮೇವಾಂತೇ ಪ್ರವೇಕ್ಷ್ಯಸಿ ॥ ೪೭ ॥

ಅಂಶಾಂತರೇಣ ಭೂಮ್ಯಾಂ ತ್ವಂ ತತ್ರ ತಿಷ್ಠ ಸುನಿರ್ವೃತಃ ।
ವೈವಸ್ವತೇಽಂತರೇಽತೀತೇ ಕಾರ್ಯಾರ್ಥಂ ಮಾಂ ಪ್ರವೇಕ್ಷ್ಯಸಿ ॥ ೪೮ ॥

ಮಾಂ ಪ್ರಣಮ್ಯ ಪುರೀಂ ಗತ್ವಾ ಪಾಲಯಾಮಾಸ ಮೇದಿನೀಮ್ ।
ಕಾಲಧರ್ಮಂ ಗತಃ ಕಾಲಾಚ್ಛ್ವೇತದ್ವೀಪೇ ಮಯಾ ಸಹ ॥ ೪೯ ॥

ಭುಕ್ತ್ವಾ ತಾನ್ ವೈಷ್ಣವಾನ್ ಭೋಗಾನ್ಯೋಗಿನಾಮಪ್ಯಗೋಚರಾನ್
ಮದಾಜ್ಞಯಾ ಮುನಿಶ್ರೇಷ್ಠಾ ಜಜ್ಞೇ ವಿಪ್ರಕುಲೇ ಪುನಃ ॥ ೫೦ ॥

---

ಪೂರ್ವಜನ್ಮವೃತ್ತಾಂತವನ್ನು ಸ್ಮರಿಸುವ ಜಾತಿ ಸ್ಮರನಾಗಿರುತ್ತೀಯೆ. ಸರ್ವಪ್ರಾಣಿಗಳಿಗೂ ದೇವತೆಗಳಿಗೂ ಕೂಡ ಗೋಚರವಾಗದಿರುವ ಪರಮಗುಹ್ಯವಾದ ತತ್ತ್ವ ಜ್ಞಾನವನ್ನು ನಿನಗೆ ಅನುಗ್ರಹಿಸುವೆನು. ಆ ಪರಮಾತ್ಮ ಜ್ಞಾನವನ್ನು ನನ್ನಿಂದ ಹೊಂದಿ ದೇಹಾವಸಾನದಲ್ಲಿ ನನ್ನಲ್ಲಿಯೇ ಐಕ್ಯವನ್ನು ಹೊಂದುತ್ತೀ.

೪೮. ಆದರೆ ನೀನು ನಿನ್ನ ಒಂದು ಅಂಶದಿಂದ ಭೂಮಿಯಲ್ಲಿ ಸುಖಿತನಾಗಿರು. ವೈವಸ್ವತ ಮನ್ವಂತರವು ಸಂಪೂರ್ಣ ಮುಗಿದ ತರುವಾಯ ಒಂದು ಕರ್ತವ್ಯ ನಿರ್ವಾಹಕ್ಕೋಸ್ಕರ ನನ್ನನ್ನು ಸೇರುತ್ತೀ.

೪೯,೫೦. ಮುನೀಶ್ವರರೆ ! ನನ್ನಿಂದ ಈ ರೀತಿಯಾಗಿ ಉಪದಿಷ್ಟನಾದ ರಾಜನು ಮತ್ತೆ ನಗರವನ್ನು ಸೇರಿ ಭೂಮಿಯನ್ನು ಆಳಿದನು. ಕೆಲವು ಕಾಲಾನಂತರ ಮೃತ್ಯು ವಶನಾಗಿ ಶ್ವೇತದ್ವೀಪದಲ್ಲಿ ನನ್ನೊಡನೆ ಯೋಗಿಗಳಿಗೂ ಪರಮ ದುರ್ಲಭವಾದ ವೈಷ್ಣವ ಭೋಗಗಳನ್ನು ಅನುಭವಿಸಿ ನಾನು ಹಿಂದೆ ಆಜ್ಞೆಯಿತ್ತಂತೆ ಮತ್ತೆ ವಿಪ್ರ ವಂಶದಲ್ಲಿ ಜನ್ಮವೆತ್ತಿದನು.

ಜ್ಞಾತ್ವಾ ಮಾಂ ವಾಸುದೇವಾಖ್ಯಂ ಯತ್ರ ದ್ವೇ ನಿಹಿತೇಽಕ್ಷರೇ ।
ವಿದ್ಯಾವಿದ್ಯೇ ಗೂಢರೂಪಂ ಯದ್ಬ್ರಹ್ಮ ಪರಮಂ ವಿದುಃ ॥ ೫೧ ॥

ಸೋಽರ್ಚಯಾಮಾಸ ಭೂತಾನಾಮಾಶ್ರಯಂ ಪರಮೇಶ್ವರಮ್ ।
ವ್ರತೋಪವಾಸನಿಯಮೈರ್ಹೋಮೈರ್ಬ್ರಾಹ್ಮಣತರ್ಪಣೈಃ ॥ ೫೨ ॥

ತದಾಶೀಸ್ತನ್ನಮಸ್ಕಾರಸ್ತನ್ನಿಷ್ಠಸ್ತತ್ಪರಾಯಣಃ ।
ಆರಾಧಯನ್ಮಹಾದೇವಂ ಯೋಗಿನಾಂ ಹೃದಿ ಸಂಸ್ಥಿತಮ್ ॥ ೫೩ ॥

ತಸ್ಯೈವಂ ವರ್ತಮಾನಸ್ಯ ಕದಾಚಿತ್ಪರಮಾ ಕಲಾ ।
ಸ್ವರೂಪಂ ದರ್ಶಯಾಮಾಸ ದಿವ್ಯಂ ವಿಷ್ಣುಸಮುದ್ಭವಮ್ ॥ ೫೪ ॥

---

೫೧. ಆ ಜನ್ಮದಲ್ಲಿ ಪರ-ಅಪರವೆಂಬ ಅಕ್ಷರದ್ವಯಕ್ಕೆ ಆಧಾರವೂ ವಿದ್ಯಾ-ಅವಿದ್ಯಾ ಪ್ರಾಪ್ಯವಾದ ಗೂಢರೂಪವೂ ಆದ ವಾಸುದೇವ ನಾಮಾಂಕಿತವಾದ ಪರಬ್ರಹ್ಮವೆಂಬ ಗೂಢವಸ್ತುವನ್ನು ಅರಿತುಕೊಂಡನು.

೫೨. ಅವನು ವ್ರತ, ಉಪವಾಸ, ನಿಯಮ, ಹೋಮ ಮತ್ತು ಬ್ರಾಹ್ಮಣ ಸಮಾರಾಧನ ಕರ್ಮಗಳಿಂದ ಸಮಸ್ತ ಭೂತೇಶ್ವರನಾದ ಪರಮೇಶ್ವರನನ್ನು ಅರ್ಚಿಸಿದನು.

೫೩. ಯೋಗಿಗಳ ಹೃದಯದಲ್ಲಿ ವಾಸಿಸುವ ಮಹಾದೇವನಾದ ಪರಮಾತ್ಮನನ್ನು ಅವನೇ ತನ್ನ ಸರ್ವಸ್ವವೆಂಬ ಭಾವನೆ, ನಮಸ್ಕಾರ, ತನ್ನಿಷ್ಠೆ ಮತ್ತು ಅವನಲ್ಲಿ ಸತತ ಆಸಕ್ತಿ ಎಂಬ ಪ್ರಕಾರಗಳಿಂದ ಆರಾಧಿಸಿದನು.

೫೪. ಈ ವಿಧವಾದ ನಿಯಮಾನುಷ್ಠಾನಗಳಿಂದ ಪವಿತ್ರನಾಗಿರುವ ಇಂದ್ರದ್ಯುಮ್ನನಿಗೆ ಒಂದು ವೇಳೆಯಲ್ಲಿ ವಿಷ್ಣುವಿಗೆ ಕಾರಣಳಾದ ಪರಮಕಲಾ ಸ್ವರೂಪಳಾದ ಶಕ್ತಿದೇವಿಯು ತನ್ನ ಸ್ವರೂಪವನ್ನು ಪ್ರದರ್ಶಿಸಿದಳು.

ದೃಷ್ಟ್ವಾ ಪ್ರಣಮ್ಯ ಶಿರಸಾ ವಿಷ್ಣೋರ್ಭಗವತಃ ಪ್ರಿಯಾಮ್ ।
ಸಂಸ್ತೂಯ ವಿವಿಧೈಃ ಸ್ತೋತ್ರೈಃ ಕೃತಾಂಜಲಿರಭಾಷತ ॥ ೫೫ ॥

ಇಂದ್ರದ್ಯುಮ್ನ ಉವಾಚ:—

ಕಾ ತ್ವಂ ದೇವಿ ವಿಶಾಲಾಕ್ಷಿ ವಿಷ್ಣುಚಿಹ್ನಾಂಕಿತೇ ಶುಭೇ ।
ಯಾಥಾತಥ್ಯೇನ ವೈ ಭಾವಂ ತವೇದಾನೀಂ ಬ್ರವೀಹಿ ಮೇ ॥ ೫೬ ॥

ತಸ್ಯ ತದ್ವಾಕ್ಯಮಾಕರ್ಣ್ಯ ಸುಪ್ರಸನ್ನಾ ಸುಮಂಗಲಾ ।
ಹಸಂತೀ ಸಂಸ್ಮರನ್ ವಿಷ್ಣುಂ ಪ್ರಿಯಂ ಬ್ರಾಹ್ಮಣಮಬ್ರವೀತ್ ॥ ೫೭ ॥

ಶ್ರೀರುವಾಚ:—

ನ ಮಾಂ ಪಶ್ಯಂತಿ ಮುನಯೋ ದೇವಾಃ ಶಕ್ರಪುರೋಗಮಾಃ ।
ನಾರಾಯಣಾತ್ಮಿಕಾಮೇಕಾಂ ಮಾಯಾಹಂ ತನ್ಮಯಿಾ ಪರಾ ॥ ೫೮ ॥

---

೫೫. ಆಗ ಇಂದ್ರದ್ಯುಮ್ನನು ಭಗವಂತನಾದ ವಿಷ್ಣುಪರಮಾತ್ಮನ ಪ್ರಿಯೆಯನ್ನು ಸಾಕ್ಷಾತ್ಕರಿಸಿ ಶಿರಸ್ಸನ್ನು ಬಾಗಿಸಿ ಪ್ರಣಾಮಮಾಡಿ ಅಂಜಲಿಯನ್ನು ಕಟ್ಟಿಕೊಂಡು ನಿಂತು ನಾನಾಬಗೆಯ ಸ್ತೋತ್ರಪಾಠಗಳಿಂದ ಸ್ತುತಿಸಿದನು.

೫೬. ಆ ಸಂದರ್ಭದಲ್ಲಿ ಇಂದ್ರದ್ಯುಮ್ನನು ಈ ರೀತಿಯಿಂದ ಸ್ತುತಿಮಾಡಿದನು. ವಿಶಾಲವಾದ ಕಣ್ಣುಗಳಿಂದ ಶೋಭಿತಳೂ, ವಿಷ್ಣುವಿನ ಚಿಹ್ನೆಗಳಿಂದ ಅಲಂಕೃತಳೂ ಮತ್ತು ಮಂಗಳಪ್ರದಳೂ ಆದ ದೇವಿಯೇ ನೀನು ಯಾರು? ನಿನ್ನ ಪರಮಾರ್ಥವಾದ ತತ್ತ್ವಸ್ವರೂಪವನ್ನು ನನಗೆ ಈಗ ಉಪದೇಶಿಸು.

೫೭. ಅವನ ಆ ವಚನವನ್ನು ಲಾಲಿಸಿ ಆನಂದವನ್ನು ಸೂಚಿಸುತ್ತ ಮಂಗಲಶ್ಲೋಕಿಣಿಯಾದ ದೇವಿಯು ಮಂದಹಾಸಮಾಡುತ್ತ ಪ್ರಿಯನಾದ ವಿಷ್ಣುದೇವನನ್ನು ಸ್ಮರಿಸಿ ಮುಂದೆ ಹೇಳುವಂತೆ ಭಾಷಣಮಾಡಿದಳು.

೫೮. ಶ್ರೀದೇವಿಯು ಇಂತೆಂದಳು:—ಇಂದ್ರಾದಿ ದೇವತೆಗಳು ಮತ್ತು ಮುನಿಗಳೂ ನನ್ನ ಸ್ವರೂಪವನ್ನು ಅರಿಯಲಾರರು. ನಾನು ನಾರಾಯಣಸ್ವರೂಪಳಾದ ತತ್ತ್ವವು. ನಾನು ನಾರಾಯಣಮಯವಾದ ಪರಮಮಾಯೆಯಾಗಿರುವೆನು.

ನ ಮೇ ನಾರಾಯಣಾದ್ಭೇದೋ ವಿದ್ಯತೇ ಹಿ ವಿಚಾರತಃ ।
ತನ್ಮಯ್ಯಹಂ ಪರಂ ಬ್ರಹ್ಮ ಸ ವಿಷ್ಣುಃ ಪರಮೇಶ್ವರಃ ॥ ೫೯ ॥

ಯೇಽರ್ಚಯಂತೀಹ ಭೂತಾನಾಮಾಶ್ರಯಂ ಪುರುಷೋತ್ತಮಮ್ ।
ಜ್ಞಾನೇನ ಕರ್ಮಯೋಗೇನ ನ ತೇಷಾಂ ಪ್ರಭವಾಮ್ಯಹಮ್ ॥ ೬೦ ॥

ತಸ್ಮಾದನಾದಿನಿಧನಂ ಕರ್ಮಯೋಗಪರಾಯಣಃ ।
ಜ್ಞಾನೇನಾರಾಧಯಾನನ್ತಂ ತತೋ ಮೋಕ್ಷಮವಾಪ್ಸ್ಯಸಿ ॥ ೬೧ ॥

ಇತ್ಯುಕ್ತಃ ಸ ಮುನಿಶ್ರೇಷ್ಠ ಇಂದ್ರದ್ಯುಮ್ನೋ ಮಹಾಮತಿಃ ।
ಪ್ರಣಮ್ಯ ಶಿರಸಾ ದೇವೀಂ ಪ್ರಾಂಜಲಿಃ ಪುನರಬ್ರವೀತ್ ॥ ೬೨ ॥

---

೫೯. ತತ್ತ್ವದೃಷ್ಟಿಯಿಂದ ವಿಚಾರಮಾಡಲಾಗಿ ನಾನು ನಾರಾಯಣನಿಗಿಂತ ಭಿನ್ನರೂಪದಿಂದ ಇಲ್ಲ. ನಾನು ನಾರಾಯಣರೂಪಿಣಿಯಾಗಿರುವೆನು. ವಿಷ್ಣುವು ಪರಮೇಶ್ವರರೂಪನೂ ಪರಬ್ರಹ್ಮಸ್ವರೂಪನೂ ಆಗಿರುವನು.

೬೦. ಯಾವ ಪುಣ್ಯಾತ್ಮರು ಸರ್ವಭೂತ ನಿವಾಸಭೂಮಿಯಾದ ಪುರುಷೋತ್ತಮನನ್ನು ಜ್ಞಾನಯೋಗ-ಕರ್ಮಯೋಗಗಳಿಂದ ಅರ್ಚಿಸುವರೋ ಅಂತಹವರ ಮೇಲೆ ನನ್ನ ಪ್ರಭಾವವಿರುವುದಿಲ್ಲ.

೬೧. ಆದುದರಿಂದ ಕರ್ಮಯೋಗದಲ್ಲಿ ಆಸಕ್ತನಾಗಿ ಆದಿ-ಅಂತ ಶೂನ್ಯನಾದ ಪರಮಾತ್ಮನನ್ನು ಆರಾಧಿಸಿ ಅನಂತರ ಜ್ಞಾನನಿಷ್ಠೆಯಿಂದ ಅನಂತನನ್ನು ಸೇವಿಸಿ ಮುಕ್ತಿಯನ್ನು ಹೊಂದುತ್ತೀ.

೬೨. ಈ ರೀತಿಯಾಗಿ ಶ್ರೀದೇವಿಯಿಂದ ಉಪದಿಷ್ಟನಾದ ಮಹಾಮುನಿಯೂ ವಿವೇಕಿಯೂ ಆದ ಇಂದ್ರದ್ಯುಮ್ನನು ದೇವಿಗೆ ಶಿರವನ್ನು ಬಾಗಿಸಿ ವಂದನಮಾಡಿ ಅಂಜಲಿಬದ್ಧನಾಗಿ ಮತ್ತೆ ಈ ರೀತಿಯಾಗಿ ಹೇಳಿದನು.

ಕಥಂ ಸ ಭಗವಾನೀಶಃ ಶಾಶ್ವತೋ ನಿಷ್ಕಲೋಽಚ್ಯುತಃ ।
ಜ್ಞಾತುಂ ಹಿ ಶಕ್ಯತೇ ದೇವಿ ಬ್ರೂಹಿ ಮೇ ಪರಮೇಶ್ವರಿ ॥ ೬೩ ॥

ಏವಮುಕ್ತಾಥ ವಿಪ್ರೇಣ ದೇವೀ ಕಮಲವಾಸಿನೀ ।
ಸಾಕ್ಷಾನ್ನಾರಾಯಣೋ ಜ್ಞಾನಂ ದಾಸ್ಯತೀತ್ಯಾಹ ತಂ ಮುನಿಮ್ ॥

ಉಭಾಭ್ಯಾಮಥ ಹಸ್ತಾಭ್ಯಾಂ ಸಂಸ್ಪೃಶ್ಯ ಪ್ರಣತಂ ಮುನಿಮ್ ।
ಸ್ಮೃತ್ವಾ ಪರಾತ್ಪರಂ ವಿಷ್ಣುಂ ತತ್ರೈವಾಂತರಧೀಯತ ॥ ೬೫ ॥

ಸೋಽಪಿ ನಾರಾಯಣಂ ದ್ರಷ್ಟುಂ ಪರಮೇಣ ಸಮಾಧಿನಾ ।
ಆರಾಧಯದ್ಧೃಷೀಕೇಶಂ ಪ್ರಣತಾರ್ತಿಪ್ರಭಂಜನಮ್ ॥ ೬೬ ॥

---

೬೩. ಪರಮೇಶ್ವರಿಯೆ ! ಭಗವಂತನೂ, ಸರ್ವನಿಯಾಮಕನೂ, ಶಾಶ್ವತನೂ, ನಿರವಯವಸ್ವರೂಪನೂ ಮತ್ತು ಚ್ಯುತಿರಹಿತನೂ ಆದ ಆ ಪರಮಾತ್ಮನನ್ನು ತಿಳಿಯುವ ಬಗೆ ಹೇಗೆ ? ಅದನ್ನು ನನಗೆ ಹೇಳಬೇಕು.

೬೪. ವಿಪ್ರನಿಂದ ಈ ರೀತಿಯಾಗಿ ಪ್ರಶ್ನಿಸಲ್ಪಟ್ಟ, ಕಮಲ ಪುಷ್ಪದಲ್ಲಿ ವಾಸಮಾಡುವ ಶ್ರೀದೇವಿಯು ಆ ವಿಪ್ರನನ್ನು ಕುರಿತು ಸಾಕ್ಷಾತ್ತಾಗಿ ನಾರಾಯಣನು ಜ್ಞಾನನಿಷ್ಠೆಯನ್ನು ಅನುಗ್ರಹಿಸುವನೆಂದು ಹೇಳಿದಳು.

೬೫. ಅನಂತರದಲ್ಲಿ ದೇವಿಯು ತನ್ನ ಎರಡು ಹಸ್ತಗಳಿಂದ ಮುಂದೆ ನಮಸ್ಕರಿಸಿ ನಿಂತಿರುವ ವಿಪ್ರನನ್ನು ಸ್ಪರ್ಶಮಾಡಿ ಪರವಸ್ತುಗಳಲ್ಲೆಲ್ಲ ಪರತರ ತತ್ತ್ವವಾದ ವಿಷ್ಣುವನ್ನು ಸ್ಮರಿಸಿ ಹಾಗೆಯೇ ಅಂತರ್ಧಾನಹೊಂದಿದಳು.

೬೬. ಆ ವಿಪ್ರನು ಉತ್ತಮವಾದ ಯೋಗಾಭ್ಯಾಸದಿಂದ ನಾರಾಯಣನನ್ನು ಸಾಕ್ಷಾತ್ಕರಿಸಬೇಕೆಂಬ ಕುತೂಹಲದಿಂದ ಭಕ್ತರ ಸಂಕಟಗಳನ್ನು ಪರಿಹರಿಸುವ, ಸರ್ವ ಪ್ರಾಣಿಗಳ ಇಂದ್ರಿಯ ಪ್ರವೃತ್ತಿಗೆ ಕಾರಣನಾದ ವಿಷ್ಣುವನ್ನು ಆರಾಧಿಸಿದನು.

ತತೋ ಬಹುತಿಥೇ ಕಾಲೇ ಗತೇ ನಾರಾಯಣಃ ಸ್ವಯಮ್ ।
ಪ್ರಾದುರಾಸೀನ್ಮಹಾಯೋಗೀ ಪೀತವಾಸಾ ಜಗನ್ಮಯಃ ॥ ೬೭ ॥

ದೃಷ್ಟ್ವಾ ದೇವಂ ಸಮಾಯಾಂತಂ ವಿಷ್ಣುಮಾತ್ಮಾನಮವ್ಯಯಮ್ ।
ಜಾನುಭ್ಯಾಮವನಿಂ ಗತ್ವಾ ತುಷ್ಟಾವ ಗರುಡಧ್ವಜಮ್ ॥ ೬೮ ॥

ಇಂದ್ರದ್ಯುಮ್ನ ಉವಾಚ:

ಯಜ್ಞೇಶಾಚ್ಯುತ ಗೋವಿಂದ ಮಾಧವಾನಂತ ಕೇಶವ ।
ಕೃಷ್ಣ ವಿಷ್ಣೋ ಹೃಷೀಕೇಶ ತುಭ್ಯಂ ವಿಶ್ವಾತ್ಮನೇ ನಮಃ ॥ ೬೯ ॥

ನಮೋಽಸ್ತು ತೇ ಪುರಾಣಾಯ ಹರಯೇ ವಿಶ್ವಮೂರ್ತಯೇ ।
ಸರ್ಗಸ್ಥಿತಿವಿನಾಶಾನಾಂ ಹೇತವೇಽನಂತಶಕ್ತಯೇ ॥ ೭೦ ॥

---

೬೭. ಹೀಗೆ ಅನೇಕ ದಿನಗಳ ದೀರ್ಘಕಾಲವು ಕಳೆಯಲಾಗಿ ಮಹಾ ಯೋಗಿಯೂ, ಪೀತಾಂಬರಧಾರಿಯೂ ಮತ್ತು ವಿಶ್ವಾಕಾರನೂ ಆದ ನಾರಾಯಣನು ಸ್ವಸ್ವರೂಪದಿಂದ ಸಾಕ್ಷಾತ್ತಾಗಿ ಪ್ರಾದುರ್ಭವಿಸಿದನು.

೬೮. ಆಗ ವಿಪ್ರನು ಎದುರಿಗೆ ಬರುತ್ತಲಿದ್ದ, ಗರುಡಧ್ವಜದಿಂದ ಅಂಕಿತನಾದ ಮತ್ತು ಆದಿ ಅಂತಗಳಿಂದ ರಹಿತನಾದ ವಿಷ್ಣುಪರಮಾತ್ಮನನ್ನು ನೋಡಿ ಮೊಳಕಾಲುಗಳನ್ನೂರಿ ಭೂಮಿಯಲ್ಲಿ ದೀರ್ಘವಾಗಿ ನಮಸ್ಕರಿಸಿ ಸ್ತುತಿಮಾಡಿದನು.

೬೯. ಇಂದ್ರದ್ಯುಮ್ನನು ಹೀಗೆ ಸ್ತೋತ್ರಮಾಡಿದನು:— ಯಜ್ಞಕರ್ಮ ಪ್ರವರ್ತಕ, ಅಚ್ಯುತ, ಗೋವಿಂದ, ಮಾಧವ, ಅನಂತ, ಕೇಶವ, ಕೃಷ್ಣ, ವಿಷ್ಣೋ, ಹೃಷೀಕೇಶ ಮುಂತಾದ ವಿಷ್ಣುನಾಮಗಳನ್ನು ಸಂಬೋಧಿಸಿ ವಿಶ್ವಾಕಾರನಾದ ನಿನಗೆ ನಮಸ್ಕಾರ ಮಾಡುವೆನೆಂದು ಹೇಳಿ ಸ್ತುತಿಮಾಡಿದನು.

೭೦. ಪುರಾತನಮೂರ್ತಿಯೂ, ಪಾಪಹರನೂ, ಜಗದಾಕಾರನೂ, ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಕಾರಣನೂ ಮತ್ತು ಅನಂತ ಶಕ್ತಿ ಪೂರ್ಣನೂ ಆದ ವಿಷ್ಣುವನ್ನು ವಂದಿಸುವೆನು.

ನಿರ್ಗುಣಾಯ ನಮಸ್ತುಭ್ಯಂ ನಿಷ್ಕಲಾಯ ನಮೋ ನಮಃ ।
ಪುರುಷಾಯ ನಮಸ್ತೇಽಸ್ತು ವಿಶ್ವರೂಪಾಯ ತೇ ನಮಃ ॥ ೨೧ ॥

ನಮಸ್ತೇ ವಾಸುದೇವಾಯ ವಿಷ್ಣವೇ ವಿಶ್ವಯೋನಯೇ ।
ಆದಿಮಧ್ಯಾಂತಹೀನಾಯ ಜ್ಞಾನಗಮ್ಯಾಯ ತೇ ನಮಃ ॥ ೨೨ ॥

ನಮಸ್ತೇ ನಿರ್ವಿಕಾರಾಯ ನಿಷ್ಪ್ರಪಂಚಾಯ ತೇ ನಮಃ ।
ಭೇದಾಭೇದವಿಹೀನಾಯ ನಮೋಽಸ್ತ್ವಾನಂದರೂಪಿಣೇ ॥ ೨೩ ॥

ನಮಸ್ತಾರಾಯ ಶಾನ್ತಾಯ ನಮೋಽಪ್ರತಿಹತಾತ್ಮನೇ ।
ಅನಂತಮೂರ್ತಯೇ ತುಭ್ಯಮಮೂರ್ತಾಯ ನಮೋ ನಮಃ ॥ ೨೪ ॥

---

೨೧. ಗುಣವರ್ಜಿತನಾದ ಸ್ವಾಮಿಗೆ ನಮಸ್ಕಾರವು. ನಿರವಯರೂಪನಾದ ಸ್ವಾಮಿಗೆ ನಮಸ್ಕಾರವು. ಪೂರ್ಣರೂಪನಾದ್ದರಿಂದ ಪುರುಷನೆಂದು ಪ್ರಸಿದ್ಧನಾದ ಸ್ವಾಮಿಗೆ ನಮಸ್ಕಾರವು. ಮತ್ತು ವಿಶ್ವಾಕಾರವನ್ನು ಧರಿಸಿದ ಪರಮಾತ್ಮನನ್ನು ವಂದಿಸುವೆನು.

೨೨. ಸರ್ವಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿ ಪ್ರಕಾಶಿಸುವವನೂ, ವ್ಯಾಪಕನೂ, ಪ್ರಪಂಚಕ್ಕೆ ಕಾರಣವೂ, ಆದಿ-ಮಧ್ಯ-ಅಂತಗಳೆಂಬ ಅವಸ್ಥೆಗಳಿಂದ ವರ್ಜಿತನೂ ಮತ್ತು ಜ್ಞಾನನಿಷ್ಠೆಯಿಂದ ವೇದ್ಯನೂ ಆದ ನಿನ್ನನ್ನು ವಂದಿಸುವೆನು.

೨೩. ವಿಕಾರಶೂನ್ಯನೂ, ಪ್ರಪಂಚಲೇಪರಹಿತನೂ, ಭೇದ-ಅಭೇದಗಳೆಂಬ ಕಲ್ಪನಾ ವರ್ಜಿತನೂ ಮತ್ತು ಪೂರ್ಣಾನಂದ ಸ್ವರೂಪನೂ ಆದ ಪರಮಾತ್ಮನಿಗೆ ವಂದನೆಯು.

೨೪. ಭವದುಃಖತಾರಕನೂ, ಶಾಂತಾಕಾರ ಶೋಭಿತನೂ ಪ್ರತಿಘಾತ ರಹಿತ ಆಕಾರವುಳ್ಳವನೂ, ಅಪಾರವಾದ ಮೂರ್ತಿಯುಳ್ಳವನೂ, ಪಾರಮಾರ್ಥಿಕಮೂರ್ತಿ ವರ್ಜಿತನೂ ಆದ ನಿನ್ನನ್ನು ನಮಸ್ಕರಿಸುವೆನು.

ನಮಸ್ತೇ ಪರಮಾರ್ಥಾಯ ಮಾಯಾತೀತಾಯ ತೇ ನಮಃ ।
ನಮಸ್ತೇ ಪರಮೇಶಾಯ ಬ್ರಹ್ಮಣೇ ಪರಮಾತ್ಮನೇ ॥ ೭೫ ॥

ನಮೋಽಸ್ತು ತೇ ಸುಸೂಕ್ಷ್ಮಾಯ ಮಹಾದೇವಾಯ ತೇ ನಮಃ ।
ನಮಃ ಶಿವಾಯ ಶುದ್ಧಾಯ ನಮಸ್ತೇ ಪರಮೇಷ್ಠಿನೇ ॥ ೭೬ ॥

ತ್ವಯ್ಯೈತತ್ಸೃಷ್ಟಮಖಿಲಂ ತ್ವಮೇವ ಪರಮಾ ಗತಿಃ ।
ತ್ವಂ ಪಿತಾ ಸರ್ವಭೂತಾನಾಂ ತ್ವಂ ಮಾತಾ ಪುರುಷೋತ್ತಮ ॥ ೭೭ ॥

ತ್ವಮಕ್ಷರಂ ಪರಂ ಧಾಮ ಚಿನ್ಮಾತ್ರಂ ವ್ಯೋಮ ನಿಷ್ಕಲಮ್ ।
ಸರ್ವಸ್ಯಾಧಾರಮವ್ಯಕ್ತಮನಂತಂ ತಮಸಃ ಪರಮ್ ॥ ೭೮ ॥

---

೭೫. ಮಾಯಾ ಸಂಗವನ್ನು ತ್ಯಜಿಸಿ ಪಾರಮಾರ್ಥಿಕಸ್ವರೂಪನಾದ ನಿನಗೆ ನಮಸ್ಕಾರವು, ಪರಮನಿಯಾಮಕನೂ, ಪರಿಚ್ಛೇದವಿಲ್ಲದ ಬ್ರಹ್ಮವಸ್ತುವೂ ಆದ ಪರಮಾತ್ಮನಿಗೆ ವಂದನೆಯು.

೭೬. ಪರಮಸೂಕ್ಷ್ಮರೂಪದಿಂದ ಕೂಡಿರುವ ಮಹಾದೇವನಾದ ನಿನಗೆ ನಮಸ್ಕಾರವು, ಪರಮಸ್ಥಾನದಲ್ಲಿ ವಾಸಿಸುವ ಮತ್ತು ಶುದ್ಧ-ಮಂಗಳಾಕಾರಗಳಿಂದ ರಾಜಿಸುವ ನಿನ್ನನ್ನು ಮತ್ತೆ ಮತ್ತೆ ನಮಸ್ಕರಿಸುವೆನು.

೭೭. ಪುರುಷೋತ್ತಮನೆ ! ಈ ದೃಶ್ಯ ಪ್ರಪಂಚವು ನಿನ್ನಿಂದ ಸೃಷ್ಟಿಸಲ್ಪಟ್ಟಿರುವುದು. ಇದಕ್ಕೆ ಶರಣವಾದ ಪರಮಗತಿಯು ನೀನೇ ಆಗಿದ್ದಿ, ನೀನು ಸರ್ವಪ್ರಾಣಿಗಳಿಗೆ ಜನಕ ಮತ್ತು ಜನನೀ ರೂಪನೂ ಆಗಿದ್ದಿ.

೭೮. ನೀನು ನಾಶರಹಿತನು, ಪರವಾದ ತೇಜೋರೂಪನು, ಚೈತನ್ಯಸ್ವರೂಪನು, ನಿರವಯವವಾದ ಆಕಾಶಸ್ವರೂಪನು, ಸರ್ವವಸ್ತುಗಳಿಗೆ ಆಧಾರನು, ವಾಙ್ಮನಸ್ಸುಗಳಿಗೆ ಅಗೋಚರನು, ಅಂತರಹಿತನು ಮತ್ತು ತಮಸ್ಸಿನ ಸ್ಪರ್ಶರಹಿತನು ನೀನು ಇಂತಹ ಸಕಲ ಗುಣಪೂರ್ಣನಾಗಿದ್ದಿ

ಪ್ರಪಶ್ಯನ್ತಿ ಪರಾತ್ಮಾನಂ ಜ್ಞಾನದೀಪೇನ ಕೇವಲಮ್ ।
ಪ್ರಪದ್ಯೇ ಭವತೋ ರೂಪಂ ತದ್ವಿಷ್ಣೋಃ ಪರಮಂ ಪದಮ್ ॥ ೭೯ ॥

ಏವಂ ಸ್ತುವಂತಂ ಭಗವಾನ್ ಭೂತಾತ್ಮಾ ಭೂತಭಾವನಃ ।
ಉಭಾಭ್ಯಾಮಥ ಹಸ್ತಾಭ್ಯಾಂ ಪಸ್ಪರ್ಶ ಪ್ರಹಸನ್ನಿವ ॥ ೮೦ ॥

ಸ್ಪೃಷ್ಟಮಾತ್ರೋ ಭಗವತಾ ವಿಷ್ಣುನಾ ಮುನಿಪುಂಗವಃ ।
ಯಥಾವತ್ಪರಮಂ ತತ್ತ್ವಂ ಜ್ಞಾತವಾಂಸ್ತತ್ಪ್ರಸಾದತಃ ॥ ೮೧ ॥

ತತಃ ಪ್ರಹೃಷ್ಟಮನಸಾ ಪ್ರಣಿಪತ್ಯ ಜನಾರ್ದನಮ್ ।
ಪ್ರೋವಾಚೋನ್ನಿದ್ರಪದ್ಮಾಕ್ಷಂ ಪೀತವಾಸಸಮಚ್ಯುತಮ್ ॥ ೮೨ ॥

ತ್ವತ್ಪ್ರಸಾದಾದಸಂದಿಗ್ಧಮುತ್ಪನ್ನಂ ಪುರುಷೋತ್ತಮ ।
ಜ್ಞಾನಂ ಬ್ರಹ್ಮೈಕವಿಷಯಂ ಪರಮಾನಂದಸಿದ್ಧಿದಮ್ ॥ ೮೩ ॥

---

೭೯. ಜ್ಞಾನಿಗಳು ಇಂತಹ ಪರಮಾತ್ಮರೂಪವನ್ನು ಜ್ಞಾನವೆಂಬ ದೀಪ ಜ್ಯೋತಿಯಿಂದ ಸಾಕ್ಷಾತ್ಕರಿಸುತ್ತಾರೆ. ವ್ಯಾಪಕನಾದ ನಿನ್ನ ಆ ಪರಮಪದವನ್ನು ನಾನು ಶರಣಹೊಂದಿರುವೆನು, ಎಂದು ಸ್ತುತಿಸಿದನು.

೮೦. ಸರ್ವಭೂತಸ್ವರೂಪನೂ, ಸರ್ವಭೂತಜನಕನೂ ಆದ ಭಗವಂತನು ಈ ರೀತಿಯಾಗಿ ಸ್ತುತಿಸಿರುವ ಭಕ್ತನನ್ನು ಪ್ರೀತಿಯಿಂದ ನಗುತ್ತ ಎರಡು ಹಸ್ತಗಳಿಂದ ಸ್ಪರ್ಶಮಾಡಿದನು.

೮೧. ಮುನಿಶ್ರೇಷ್ಠನಾದ ಆ ವಿಪ್ರನು ವಿಷ್ಣುಪರಮಾತ್ಮನ ಹಸ್ತಸ್ಪರ್ಶವಾಗುವಷ್ಟರಲ್ಲಿ ಆ ಪರಮಾತ್ಮನ ಅನುಗ್ರಹದಿಂದ ಪರಮತತ್ತ್ವವನ್ನು ಅರಿತುಕೊಂಡನು.

೮೨ ಅನಂತರದಲ್ಲಿ ಆ ವಿಪ್ರನು ಅರಳಿದ ಕಮಲದಂತೆ ರಾಜಿಸುವ ನೇತ್ರಗಳುಳ್ಳ, ಪೀತಾಂಬರವನ್ನು ಧರಿಸಿರುವ ಜನಾರ್ದನಸ್ವಾಮಿಯನ್ನು ನಮಸ್ಕರಿಸಿ ಸಂತುಷ್ಟವಾದ ಚಿತ್ತದಿಂದ ಅಚ್ಯುತನನ್ನು ಕುರಿತು ಹೀಗೆ ಹೇಳಿದನು.

೮೩. ಪುರುಷೋತ್ತಮನೆ ! ನಿನ್ನ ಅನುಗ್ರಹದಿಂದ ಪರಮಾನಂದವೆಂಬ ಪುರುಷಾರ್ಥವನ್ನು ಕೊಡುವ ಪರಬ್ರಹ್ಮ ವಿಷಯದ ತತ್ತ್ವಜ್ಞಾನವು ಸಂದೇಹವಿಲ್ಲದ ಹಾಗೆ ಉಂಟಾಗಿರುವುದು.

ನಮೋ ಭಗವತೇ ತುಭ್ಯಂ ವಾಸುದೇವಾಯ ವೇಧಸೇ ।
ಕಿಂ ಕರಿಷ್ಯಾಮಿ ಯೋಗೇಶ ತನ್ಮೇ ವದ ಜಗನ್ಮಯ ॥ ೮೪ ॥

ಶ್ರುತ್ವಾ ನಾರಾಯಣೋ ವಾಕ್ಯಮಿಂದ್ರದ್ಯುಮ್ನಸ್ಯ ಮಾಧವಃ ।
ಉವಾಚ ಸಸ್ಮಿತಂ ವಾಕ್ಯಮಶೇಷಂ ಜಗತೋ ಹಿತಮ್ ॥ ೮೫ ॥

ಶ್ರೀ ಭಗವಾನುವಾಚ :—

ವರ್ಣಾಶ್ರಮಾಚಾರವತಾಂ ಪುಂಸಾಂ ದೇವೋ ಮಹೇಶ್ವರಃ ।
ಜ್ಞಾನೇನ ಭಕ್ತಿಯೋಗೇನ ಪೂಜನೀಯೋ ನಚಾನ್ಯಥಾ ॥ ೮೬ ॥

ವಿಜ್ಞಾಯ ತತ್ಪರಂ ತತ್ತ್ವಂ ವಿಭೂತಿಂ ಕಾರ್ಯಕಾರಣಮ್ ।
ಪ್ರವೃತ್ತಿಂ ಚಾಪಿ ಮೇ ಜ್ಞಾತ್ವಾ ಮೋಕ್ಷಾರ್ಥೀಶ್ವರಮರ್ಚಯೇತ್ ॥

---

೮೪. ವಿಶ್ವರೂಪನಾದ ಸ್ವಾಮಿಯೇ ! ಯೋಗೇಶ್ವರನೇ ! ಸರ್ವಾಂತರ್ಯಾಮಿಯೂ, ಸೃಷ್ಟಿಕಾರಣನೂ, ಭಗವಂತನೂ ಆದ ನಿನಗೆ ನಮಸ್ಕರಿಸುವೆನು. ಇನ್ನು ನಾನು ಏನನ್ನು ಮಾಡಲಿ, ಎಂಬುದನ್ನು ಹೇಳು.

೮೫. ಲಕ್ಷ್ಮೀಪತಿಯಾದ ನಾರಾಯಣನು ಇಂದ್ರದ್ಯುಮ್ನರಾಜನ ಈ ವಚನವನ್ನು ಕೇಳಿ ಸಕಲಪ್ರಪಂಚಕ್ಕೆ ಹಿತೋಪದೇಶರೂಪವಾದ ವಚನವನ್ನು ಮಂದಹಾಸಪೂರ್ವಕವಾಗಿ ಆಡಿದನು.

೮೬. ಭಗವಂತನು ಇಂತೆಂದನು :—ವರ್ಣ-ಆಶ್ರಮ ಧರ್ಮಗಳ ಆಚಾರದಿಂದ ಪವಿತ್ರರಾದ ಮಾನವರಿಗೆ ಪರಮೇಶ್ವರದೇವನು ಭಕ್ತಿಯೋಗ ಮತ್ತು ಜ್ಞಾನನಿಷ್ಠೆಗಳಿಂದ ಪೂಜಿಸಲು ಅರ್ಹನು. ಬೇರೊಂದು ಬಗೆಯಿಂದ ಪೂಜ್ಯನಾಗಿಲ್ಲ.

೮೭. ಮೋಕ್ಷಪ್ರಾಪ್ತಿಯನ್ನು ಕಾಮಿಸುವವನು ಸರ್ವ ಈಶ್ವರನ ಅದ್ವೈತರೂಪವಾದ ಪರಮತತ್ತ್ವ, ಅದರ ವಿಭೂತಿ ವಿಸ್ತಾರ, ಕಾರ್ಯಕಾರಣ ವ್ಯಕ್ತಿಗಳಜಾಲ ಮತ್ತು ಅದ್ಭುತವಾದ ಪ್ರವೃತ್ತಿಗಳನ್ನು ಪರಮಾರ್ಥವಾಗಿ ಅರಿತು ಈಶ್ವರನನ್ನು ಅರ್ಚಿಸಬೇಕು.

ಸರ್ವಸಂಗಾನ್ ಪರಿತ್ಯಜ್ಯ ಜ್ಞಾತ್ವಾ ಮಾಯಾಮಯಂ ಜಗತ್ ।
ಅದ್ವೈತಂ ಭಾವಯಾತ್ಮಾನಂ ದ್ರಕ್ಷ್ಯಸೇ ಪರಮೇಶ್ವರಮ್ ॥ ೮೮ ॥

ತ್ರಿವಿಧಾಂ ಭಾವನಾಂ ಬ್ರಹ್ಮನ್ ಪ್ರೋಚ್ಯಮಾನಾಂ ನಿಬೋಧ ಮೇ ।
ಏಕಾ ಮದ್ವಿಷಯಾ ತತ್ರ ದ್ವಿತೀಯಾ ವ್ಯಕ್ತಸಂಶ್ರಯಾ ॥ ೮೯ ॥

ಅನ್ಯಾ ಚ ಭಾವನಾ ಬ್ರಾಹ್ಮೀ ವಿಜ್ಞೇಯಾ ಸಾ ಗುಣಾತಿಗಾ ।
ಆಸಾಮನ್ಯತಮಾಂ ಚಾಥ ಭಾವನಾಂ ಭಾವಯೇದ್ಬುಧಃ ॥ ೯೦ ॥

ಅಶಕ್ತಃ ಸಂಶ್ರಯೇದಾದ್ಯಾಮಿತ್ಯೇಷಾ ವೈದಿಕೀ ಶ್ರುತಿಃ ।
ತಸ್ಮಾತ್ಸರ್ವಪ್ರಯತ್ನೇನ ತನ್ನಿಷ್ಠಸ್ತತ್ಪರಾಯಣಃ ॥ ೯೧ ॥

---

೮೮. ಸರ್ವಸಂಗಗಳನ್ನು ತ್ಯಜಿಸಿ ಜಗತ್ತನ್ನು ಮಾಯಾಮಯವೆಂದು ಭಾವಿಸಿ ಅದ್ವೈತ ಆತ್ಮ ಸ್ವರೂಪವನ್ನು ಸಂತತವಾಗಿ ಅನುಸಂಧಾನ ಮಾಡು. ಈ ವಿಧವಾದ ಜ್ಞಾನನಿಷ್ಠೆಯಿಂದ ಪರಮೇಶ್ವರನನ್ನು ಸಾಕ್ಷಾತ್ಕರಿಸುತ್ತೀ.

೮೯. ಇನ್ನು ಮುಂದೆ ಪರತತ್ತ್ವ ಸಾಕ್ಷಾತ್ಕಾರಕ್ಕೆ ಸಾಧನವಾದ ನಾನು ಹೇಳುವ ತ್ರಿವಿಧ ಭಾವನೆಯನ್ನು ಶ್ರವಣಮಾಡು, ಅವುಗಳಲ್ಲಿ ಒಂದು ನನ್ನ ಸ್ವರೂಪದ ಭಾವನೆಯು, ಮತ್ತೊಂದು ತ್ರಿನೇತ್ರಾಲಂಕೃತವಾದ ಈಶ್ವರ ಸ್ವರೂಪದ ಭಾವನೆಯು.

೯೦. ಮೂರನೆಯದು ಬ್ರಹ್ಮನನ್ನು ಗೋಚರಿಸುವ ಭಾವನೆಯು. ಇದು ಗುಣಸಂಪರ್ಕವನ್ನು ಮೀರಿರುವುದು. ಜ್ಞಾನಿಯು ಇವುಗಳಲ್ಲಿ ಯಾವುದಾದರೊಂದು ಭಾವನೆಯನ್ನು ಅವಲಂಬಿಸಬೇಕು.

೯೧. ಕಷ್ಟ ಭಾವನೆಯಲ್ಲಿ ಅಶಕ್ತನಾದವನು ಆದ್ಯವಾದ ಭಾವನೆಯನ್ನು ಆಶ್ರಯಿಸಬೇಕೆಂದು ವೇದವಚನವು ಬೋಧಿಸುತ್ತಿದೆ. ಆದುದರಿಂದ ಸರ್ವಪ್ರಯತ್ನಗಳಿಂದ ಆ ಭಗವನ್ನಿಷ್ಠೆ, ಭಗವದಾಸಕ್ತಿಗಳನ್ನು ಹೊಂದಬೇಕು.

ಸಮಾರಾಧಯ ವಿಶ್ವೇಶಂ ತತೋ ಮೋಕ್ಷಮವಾಪ್ಸ್ಯಸಿ ।

ಇಂದ್ರದ್ಯುಮ್ನ ಉವಾಚ:—

ಕಿಂ ತತ್ಪರತರಂ ತತ್ತ್ವಂ ಕಾ ವಿಭೂತಿರ್ಜನಾರ್ದನ ॥ ೯೨ ॥

ಕಿಂ ಕಾರ್ಯಂ ಕಾರಣಂ ಕಸ್ತ್ವಂ ಪ್ರವೃತ್ತಿಶ್ಚಾಪಿ ಕಾ ತವ ।

ಶ್ರೀ ಭಗವಾನುವಾಚ:—

ಪರಾತ್ಪರತರಂ ತತ್ತ್ವಂ ಪರಂ ಬ್ರಹ್ಮೈಕಮವ್ಯಯಮ್ ॥ ೯೩ ॥

ನಿತ್ಯಾನಂದಮಯಂ ಜ್ಯೋತಿರಕ್ಷರಂ ತಮಸಃ ಪರಮ್ ।
ಐಶ್ವರ್ಯಂ ತಸ್ಯ ಯನ್ನಿತ್ಯಂ ವಿಭೂತಿರಿತಿ ಗೀಯತೇ ॥ ೯೪ ॥

ಕಾರ್ಯಂ ಜಗದಥಾವ್ಯಕ್ತಂ ಕಾರಣಂ ಶುದ್ಧಮಕ್ಷರಮ್ ।
ಅಹಂ ಹಿ ಸರ್ವಭೂತಾನಾಮಂತರ್ಯಾಮೀಶ್ವರಃ ಪರಃ ॥ ೯೫ ॥

---

೯೨. ಹೀಗೆ ವಿಶ್ವೇಶ್ವರನನ್ನು ನೀನು ಆರಾಧಿಸು. ಅದರಿಂದ ಮುಕ್ತಿಯನ್ನು ಹೊಂದುತ್ತೀ. ಇದನ್ನು ಶ್ರವಣಮಾಡಿದ ಇಂದ್ರದ್ಯುಮ್ನನು ಮತ್ತೆ ಪ್ರಶ್ನಿಸಿದನು. ಜನಾರ್ದನನೆ! ನಿನ್ನ ಪರತತ್ತ್ವವಾವುದು ? ಮತ್ತು ನಿನ್ನ ವಿಭೂತಿವಿಸ್ತಾರವು ಯಾವುದು ?

೯೩. ಮತ್ತು ತಿಳಿಯಬೇಕಾದ ನಿನ್ನ ಕಾರ್ಯ-ಕಾರಣ ಮತ್ತು ಪ್ರವೃತ್ತಿಗಳಾವುವು ? ಹೀಗೆ ಪ್ರಶ್ನಿಸಲು ಭಗವಂತನು ಪ್ರತ್ಯುತ್ತರವನ್ನಿತ್ತನು. ನನ್ನ ತತ್ತ್ವವು ಪರವಸ್ತುಗಳಲ್ಲೆಲ್ಲ ಪರತಮವೂ, ಪರಬ್ರಹ್ಮರೂಪವೂ, ಏಕವೂ ಮತ್ತು ನಾಶವಿಲ್ಲದಿರುವುದೂ ಆಗಿದೆ.

೯೪. ಮತ್ತು ನಿತ್ಯಾನಂದಪರಿಪೂರ್ಣವೂ, ತಮಸ್ಸಂಗಶೂನ್ಯವೂ, ನಾ[illegible] ರಹಿತವೂ ಆದ ಜ್ಯೋತಿ ರೂಪವು ನನ್ನ ಪರತತ್ತ್ವವು. ಆ ತತ್ತ್ವದ ಸಂತತವಾದ ಈಶ್ವರತ್ವಶಕ್ತಿಯು ವಿಭೂತಿಯೆಂದು ಕರೆಯಲ್ಪಡುತ್ತದೆ.

೯೫. ಸಮಸ್ತವ್ಯಕ್ತಪ್ರಪಂಚವು ನನ್ನ ಕಾರ್ಯವು. ಶುದ್ಧವೂ ಮತ್ತು ಅಕ್ಷರವೆಂಬ ಸಂಜ್ಞೆಯಿಂದ ವ್ಯವಹರಿಸಲ್ಪಡುವುದೂ ಆದ ಅವ್ಯಕ್ತವು ಕಾರಣವು. ನಾನು ಸರ್ವಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿ ಈಶ್ವರನಾಗಿರುವೆನು.

ಸರ್ಗಸ್ಥಿತ್ಯಂತಕರ್ತೃತ್ವಂ ಪ್ರವೃತ್ತಿರ್ಮಮ ಗೀಯತೇ ।
ಏತದ್ವಿಜ್ಞಾಯ ಭಾವೇನ ಯಥಾವದಖಿಲಂ ದ್ವಿಜ ॥ ೯೬ ॥

ತತಸ್ತ್ವಂ ಕರ್ಮಯೋಗೇನ ಶಾಶ್ವತಂ ಸಮ್ಯಗರ್ಚಯ ।
ಇಂದ್ರದ್ಯುಮ್ನ ಉವಾಚ:—
ಕೇ ತೇ ವರ್ಣಾಶ್ರಮಾಚಾರಾ ಯೈಃ ಸಮಾರಾಧ್ಯತೇ ಪರಃ ॥ ೯೭ ॥

ಜ್ಞಾನಂ ಚ ಕೀದೃಶಂ ದಿವ್ಯಂ ಭಾವನಾತ್ರಯಸಂಸ್ಥಿತಮ್ ।
ಕಥಂ ಸೃಷ್ಟಮಿದಂ ಪೂರ್ವಂ ಕಥಂ ಸಂಹ್ರಿಯತೇ ಪುನಃ ॥ ೯೮ ॥

ಕಿಯತ್ಯಃ ಸೃಷ್ಟಯೋ ಲೋಕೇ ವಂಶಾ ಮನ್ವಂತರಾಣಿ ಚ ।
ಕಾನಿ ತೇಷಾಂ ಪ್ರಮಾಣಾನಿ ಪಾವನಾನಿ ವ್ರತಾನಿ ಚ ॥ ೯೯ ॥

---

೯೬. ಪ್ರಪಂಚದ ಸೃಷ್ಟಿ-ಸ್ಥಿತಿ ಲಯಗಳನ್ನು ನಿರ್ವಹಿಸುವುದು ನನ್ನ ಪ್ರವೃತ್ತಿಯು, ದ್ವಿಜನೆ ! ಇವುಗಳನ್ನೆಲ್ಲ ಯಥಾವತ್ತಾಗಿ ತಿಳಿಯಬೇಕು.

೯೭. ಇದನ್ನು ಪರಮಾರ್ಥವಾಗಿ ತಿಳಿದು ಶಾಶ್ವತನಾದ ನನ್ನನ್ನು ಕರ್ಮಯೋಗದಿಂದ ಚೆನ್ನಾಗಿ ಪೂಜಿಸು. ಇದನ್ನು ಕೇಳಿ ವಿಪ್ರನು ಪ್ರಶ್ನೆ ಮಾಡಿದನು. ಪರಮಾತ್ಮನನ್ನು ಆರಾಧಿಸಲು ಸಾಧನವಾದ ವರ್ಣ-ಆಶ್ರಮ ಧರ್ಮಾಚಾರಗಳು ಯಾವುವು ?

೯೮. ಭಾವನಾತ್ರಯರೂಪದಿಂದ ವ್ಯವಸ್ಥಿತವಾದ ದಿವ್ಯವಾದ ಜ್ಞಾನವು ಯಾವುದು ? ಈ ವಿಶ್ವವು ಪೂರ್ವದಲ್ಲಿ ಸೃಷ್ಟಿಮಾಡಲ್ಪಟ್ಟಿರುವುದು ಹೇಗೆ ? ಮತ್ತೆ ಸಂಹರಿಸಲ್ಪಡುವುದು ಹೇಗೆ ?

೯೯. ಲೋಕದಲ್ಲಿ ಸೃಷ್ಟಿಗಳು ಎಷ್ಟು ಸಂಖ್ಯೆಯಿಂದಿವೆ ? ಮತ್ತು ವಂಶಗಳು ಮನ್ವಂತರಗಳು ಎಷ್ಟು ? ಅವುಗಳನ್ನು ಸಾಧಿಸುವ ಪ್ರಮಾಣಗಳು ಯಾವುವು ? ಮತ್ತು ಶ್ರೇಯಃಸಾಧನಗಳಾದ ಪಾವನ ವ್ರತಗಳು ಯಾವುವು ?

ತೀರ್ಥಾನ್ಯರ್ಕಾದಿಸಂಸ್ಥಾನಂ ಪೃಥಿವ್ಯಾಯಾಮವಿಸ್ತರಮ್ ।
ಕತಿ ದ್ವೀಪಾಃ ಸಮುದ್ರಾಶ್ಚ ಪರ್ವತಾಶ್ಚ ನದೀನದಾಃ　　॥ ೧೦೦ ॥

ಬ್ರೂಹಿ ಮೇ ಪುಂಡರೀಕಾಕ್ಷ ಯಥಾವದಧುನಾ ಪುನಃ ।
ಕೂರ್ಮ ಉವಾಚ:—
ಏವಮುಕ್ತೋಽಥ ತೇನಾಹಂ ಭಕ್ತಾನುಗ್ರಹಕಾಮ್ಯಯಾ　　॥ ೧೦೧ ॥

ಯಥಾವದಖಿಲಂ ಸರ್ವ್ಮಗವೋಚಂ ಮುನಿಪುಂಗವಾಃ ।
ವ್ಯಾಖ್ಯಾಯಾಶೇಷಮೇವೇದಂ ಯತ್ಪೃಷ್ಟೋಽಹಂ ದ್ವಿಜೇನ ತು ೧೦೨

ಅನುಗೃಹ್ಯ ಚ ತಂ ವಿಪ್ರಂ ತತ್ರೈವಾಂತರ್ಹಿತೋಽಭವಮ್ ।
ಸೋಽಪಿ ತೇನ ವಿಧಾನೇನ ಮದುಕ್ತೇನ ದ್ವಿಜೋತ್ತಮಾಃ　　॥ ೧೦೩ ॥

---

೧೦೦. ಮತ್ತು ಉತ್ತಮ ತೀರ್ಥ, ಸೂರ್ಯ ಮುಂತಾದ ಗ್ರಹಗಳ ಸನ್ನಿವೇಶ, ಪೃಥಿವಿಯ ದೀರ್ಘ-ವಿಸ್ತಾರ ಪರಿಮಾಣ, ದ್ವೀಪ, ಸಮುದ್ರ, ಪರ್ವತ ನದೀ, ನದ ಇವುಗಳು ಯಾವುವು ? ಎಷ್ಟು ? ಎಂಬುದನ್ನು ತಿಳಿಯಲು ಇಷ್ಟವುಳ್ಳವ ನಾಗಿರುವೆನು.

೧೦೧. ಪುಂಡರೀಕಾಕ್ಷನೆ ! ಈಗ ನನಗೆ ಜಿಜ್ಞಾಸೆಯುಳ್ಳ ಈ ವಿಷಯ ಗಳನ್ನು ಉಪದೇಶಮಾಡು. ಹೀಗೆ ಕೇಳಲಾಗಿ ಆ ಕೂರ್ಮಮೂರ್ತಿಯು ಇಂತೆಂದನು:– ಹೀಗೆ ಆ ವಿಪ್ರನಿಂದ ಕೇಳಲ್ಪಟ್ಟಿರುವ ನಾನು ವಿಪ್ರನ ನೆಪದಿಂದ ಸಮಸ್ತ ಭಕ್ತರನ್ನು ಅನುಗ್ರಹಿಸಬೇಕೆಂಬ ಇಷ್ಟವನ್ನು ಹೊಂದಿದೆನು.

೧೦೨. ಮುನಿಪುಂಗವರೆ ! ದ್ವಿಜನಿಂದ ಕೇಳಲ್ಪಟ್ಟಿರುವ ಎಲ್ಲ ವಿಷಯ ಗಳನ್ನು ಸ್ಪಷ್ಟವಾಗಿ ವ್ಯಾಖ್ಯಾನಮಾಡಿ ಎಲ್ಲವನ್ನೂ ಯಥಾವತ್ತಾಗಿಯೂ ವಿವರ ವಾಗಿಯೂ ತಿಳಿಸಿದೆನು.

೧೦೩. ದ್ವಿಜಶ್ರೇಷ್ಠರೆ ! ಈ ರೀತಿಯಲ್ಲಿ ವಿಪ್ರನನ್ನು ಅನುಗ್ರಹಿಸಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದೆನು. ಅವನು ನನ್ನಿಂದ ಉಪದಿಷ್ಟವಾದ ಪ್ರಯೋಗ ವಿಧಾನವನ್ನು ಕೈಗೊಂಡನು.

ಆರಾಧಯಾಮಾಸ ಪರಂ ಭಾವಪೂತಃ ಸಮಾಹಿತಃ ।
ತ್ಯಕ್ತ್ವಾ ಪುತ್ರಾದಿಷು ಸ್ನೇಹಂ ನಿರ್ದ್ವಂದ್ವೋ ನಿಷ್ಪರಿಗ್ರಹಃ ॥ ೧೦೪ ॥

ಸನ್ನ್ಯಸ್ಯ ಸರ್ವಕರ್ಮಾಣಿ ಪರಂ ವೈರಾಗ್ಯಮಾಶ್ರಿತಃ ।
ಆತ್ಮನ್ಯಾತ್ಮಾನಮನ್ವೀಕ್ಷ್ಯ ಸ್ವಾತ್ಮನ್ಯೇವಾಖಿಲಂ ಜಗತ್ ॥ ೧೦೫ ॥

ಸಂಪ್ರಾಪ್ಯ ಭಾವನಾಮಂತ್ಯಾಂ ಬ್ರಾಹ್ಮೀಮಕ್ಷರಪೂರ್ವಿಕಾಮ್ ।
ಅವಾಪ ಪರಮಂ ಯೋಗಂ ಯೇನೈಕಂ ಪರಿಪಶ್ಯತಿ ॥ ೧೦೬ ॥

ಯಂ ವಿನಿದ್ರಾ ಜಿತಶ್ವಾಸಾಃ ಕಾಂಕ್ಷಂತೇ ಮೋಕ್ಷಕಾಂಕ್ಷಿಣಃ ।
ತತಃ ಕದಾಚಿದ್ಯೋಗೀಂದ್ರೋ ಬ್ರಹ್ಮಾಣಂ ದ್ರಷ್ಟುಮವ್ಯಯಮ್ ॥

---

೧೦೪. ಅನಂತರ ಪುತ್ರ ಮುಂತಾದ ಮನಸ್ಸನ್ನು ಆಕರ್ಷಿಸುವ ಪರಿವಾರದಲ್ಲಿ ಸಂಗವನ್ನು ಬಿಟ್ಟು ದ್ವಂದ್ವ-ಪರಿಗ್ರಹವರ್ಜಿತನಾಗಿ ಪರಪುರುಷನ ಭಾವನೆಯಿಂದ ಪವಿತ್ರನೂ ಚಿತ್ತ ಸಮಾಧಾನವುಳ್ಳವನೂ ಆಗಿ ಪರಮಾತ್ಮನನ್ನು ಆರಾಧಿಸಿದನು.

೧೦೫. ಪರಮವೈರಾಗ್ಯದಿಂದ ಭೂಷಿತನಾಗಿ ಸಮಸ್ತ ಕರ್ಮಗಳನ್ನು ಸನ್ಯಾಸಮಾಡಿ ಆತ್ಮವಸ್ತುವಿನಲ್ಲಿ ಅಂತಃಕರಣವನ್ನು ಸಮಾಧಿಮಾರ್ಗದಿಂದ ಸ್ಥಾಪಿಸಿ ಆತ್ಮನಲ್ಲಿ ಸಮಸ್ತ ಜಗತ್ತನ್ನು ಇರುವುದೆಂದು ಅರಿತುಕೊಂಡನು.

೧೦೬. ಓಂಕಾರಾಭ್ಯಾಸಪೂರ್ವಕವಾದ ಉತ್ತಮವಾದ ಬ್ರಹ್ಮಭಾವನೆಯನ್ನು ಹೊಂದಿ ಆತ್ಮವಸ್ತುವಿನ ಐಕ್ಯದರ್ಶನಕ್ಕೆ ಸಾಧನವಾದ ಯೋಗಸಿದ್ಧಿಯನ್ನು ಹೊಂದಿದನು.

೧೦೭. ಯಾವ ಪರಮಾತ್ಮನನ್ನು ಮೋಕ್ಷಲಾಭವನ್ನು ಆಕಾಂಕ್ಷಿಸಿ ನಿದ್ರಾದಿ ಅವಸ್ಥಾ ಧರ್ಮಗಳನ್ನೂ, ಪ್ರಾಣವಾಯುಚಲನೆಯನ್ನೂ ನಿಗ್ರಹಿಸಿ ಸಂದರ್ಶಿಸಲು ಯತ್ನಿಸುವರೋ ಅಂತಹ ಆತ್ಮ ಸಮಾಧಿಯಲ್ಲಿ ನಿರತನಾದನು. ಹೀಗಿರಲು ಆ ಯೋಗೀಂದ್ರನು ನಾಶರಹಿತನಾದ ಬ್ರಹ್ಮನನ್ನು ನೋಡಲು ಕುತೂಹಲವುಳ್ಳವನಾದನು.

ಜಗಾಮಾದಿತ್ಯನಿರ್ದೇಶಾನ್ ಮಾನಸೋತ್ತರಪರ್ವತಮ್ ।
ಆಕಾಶೇನೈವ ವಿಪ್ರೇಂದ್ರೋ ಯೋಗೈಶ್ವರ್ಯಪ್ರಭಾವತಃ ॥ ೧೦೮ ॥

ವಿಮಾನಂ ಸೂರ್ಯಸಂಕಾಶಂ ಪ್ರಾದುರ್ಭೂತಮನುತ್ತಮಮ್ ।
ಅನ್ವಗಚ್ಛನ್ ದೇವಗಣಾ ಗಂಧರ್ವಾಪ್ಸರಸಾಂ ಗಣಾಃ ॥ ೧೦೯ ॥

ದೃಷ್ಟ್ವಾನ್ಯೇ ಪಥಿ ಯೋಗೀಂದ್ರಂ ಸಿದ್ಧಾ ಬ್ರಹ್ಮರ್ಷಯೋ ಯಯುಃ ।
ತತಃ ಸ ಗತ್ವಾನುಗಿರಿಂ ವಿವೇಶ ಸುರವಂದಿತಮ್ ॥ ೧೧೦ ॥

ಸ್ಥಾನಂ ತದ್ಯೋಗಿಭಿರ್ಜುಷ್ಟಂ ಯತ್ರಾಸ್ತೇ ಪರಮಃ ಪುಮಾನ್ ।
ಸಂಪ್ರಾಪ್ಯ ಪರಮಂ ಸ್ಥಾನಂ ಸೂರ್ಯಾಯುತಸಮಪ್ರಭಮ್ ॥ ೧೧೧॥

---

೧೦೮. ಆಗ ಆ ವಿಪ್ರೇಂದ್ರನು, ಆದಿತ್ಯನು ನಿರ್ದೇಶಿಸಿರುವ ಮಾನಸರೋವರದ ಉತ್ತರದಲ್ಲಿರುವ ಮೇರುಪರ್ವತಕ್ಕೆ ಯೋಗಸಿದ್ಧಿಯಿಂದ ಒದಗಿರುವ ಐಶ್ವರ್ಯ ಪ್ರಭಾವದಿಂದ ಆಕಾಶ ಮಾರ್ಗದಿಂದ ಪ್ರಯಾಣಮಾಡಿದನು.

೧೦೯. ಹೀಗೆ ಯೋಗೀಂದ್ರನು ಪ್ರಯಾಣಮಾಡುತ್ತಿರಲು ಸೂರ್ಯನಂತೆ ದೀಪ್ತವಾದ ನಿರುಪಮ ವಿಮಾನವು ಎದುರಿಗೆ ಪ್ರಾದುರ್ಭವಿಸಿತು. ಗಂಧರ್ವ-ಅಪ್ಸರಸ್ತ್ರೀ ಮೊದಲಾದ ಅನೇಕ ದೇವಗಣಗಳು ಅವನನ್ನು ಹಿಂಬಾಲಿಸಿದರು.

೧೧೦. ಮಾರ್ಗದಲ್ಲಿ ಇವನನ್ನು ಕಂಡಿರುವ ಇತರ ಅನೇಕ ಸಿದ್ಧರಾದ ಬ್ರಹ್ಮರ್ಷಿಗಳು ಹಿಂಬಾಲಿಸಿದರು. ಹೀಗೆ ಆ ಯೋಗೀಂದ್ರನು ದೇವತೆಗಳಿಂದ ವಂದಿಸಲ್ಪಟ್ಟ ಗಿರಿಯನ್ನು ಹೊಂದಿ ಉತ್ತಮಸ್ಥಾನವನ್ನು ಪ್ರವೇಶಿಸಿದನು.

೧೧೧. ಪರಮ ಪುರುಷನು ವಾಸಮಾಡುವುದಾಗಿಯೂ, ಕೋಟಿಸೂರ್ಯರಿಗೆ ಸಮಾನವಾಗಿ ಜಾಜ್ವಲ್ಯಮಾನ್ಯವಾದ ಪ್ರಭೆಯಿಂದ ಕೂಡಿರುವುದಾಗಿಯೂ ಮತ್ತು ಯೋಗಿವರ್ಯರಿಂದ ಸೇವಿಸಲ್ಪಟ್ಟದ್ದಾಗಿಯೂ ಇರುವ ಆ ಉತ್ತಮಸ್ಥಾನವನ್ನು ಪ್ರವೇಶಮಾಡಿದನು.

ವಿವೇಶ ಚಾಂತರ್ಭವನಂ ದೇವಾನಾಂ ಚ ದುರಾಸದಮ್ ।
ವಿಚಿಂತಯಾಮಾಸ ಪರಂ ಶರಣ್ಯಂ ಸರ್ವದೇಹಿನಾಮ್ ॥ ೧೧೨ ॥

ಅನಾದಿನಿಧನಂ ಚೈವ ದೇವದೇವಂ ಪಿತಾಮಹಮ್ ।
ತತಃ ಪ್ರಾದುರಭೂತ್ತಸ್ಮೈ ಪ್ರಕಾಶಃ ಪರಮಾದ್ಭುತಃ ॥ ೧೧೩ ॥

ತನ್ಮಧ್ಯೇ ಪುರುಷಂ ಪೂರ್ವಮಪಶ್ಯತ್ಪರಮಂ ಪದಮ್ ।
ಮಹಾಂತಂ ತೇಜಸೋ ರಾಶಿಮಗಮ್ಯಂ ಬ್ರಹ್ಮವಿದ್ವಿಷಾಮ್ ॥ ೧೧೪ ॥

ಚತುರ್ಮುಖಮುದಾರಾಂಗಮರ್ಚಿರ್ಭಿರುಪಶೋಭಿತಮ್ ।
ಸೋಽಪಿ ಯೋಗಿನಮನ್ವೀಕ್ಷ್ಯ ಪ್ರಣಮಂತಮುಪಸ್ಥಿತಮ್ ॥ ೧೧೫ ॥

---

೧೧೨. ದೇವತೆಗಳ ಪ್ರವೇಶಕ್ಕೆ ದುರ್ಲಭವಾದ ಮಂದಿರದ ಅಂತರ ಭಾಗವನ್ನು ಪ್ರವೇಶಿಸಿ ಸಮಸ್ತ ದೇಹಿಗಳ ಶರಣನಾದ ಪರಮಾತ್ಮನನ್ನು ಧ್ಯಾನಿಸಿದನು.

೧೧೩. ದೇವತೆಗಳಿಗೆ ದೇವನೂ, ಆದಿ-ಅಂತ ರಹಿತನೂ ಆದ ಪಿತಾಮಹನನ್ನು ಧ್ಯಾನಿಸಲಾಗಿ ಅಲ್ಲಿ ಪರಮಾಶ್ಚರ್ಯಕರವಾದ ಒಂದು ಪ್ರಕಾಶ ವಿಶೇಷವು ಆವಿರ್ಭಾವಹೊಂದಿತು.

೧೧೪. ಆ ಪ್ರಕಾಶ ಮಧ್ಯದಲ್ಲಿ ಪರಮಪದರೂಪನೂ, ಮಹಾಪರಿಮಾಣನೂ, ತೇಜೋರಾಶಿರೂಪನೂ, ಬ್ರಹ್ಮವನ್ನು ದ್ವೇಷಿಸುವವರಿಗೆ ಅಗಮ್ಯನೂ ಮತ್ತು ಅನಾದಿಯೂ ಆದ ಪುರುಷನನ್ನು ಸಾಕ್ಷಾತ್ಕರಿಸಿದನು.

೧೧೫. ಮತ್ತು ಆ ಪುರುಷನು ಉಜ್ವಲವಾದ ನಿಖಿಲಾವಯಗಳಿಂದ ಕೂಡಿದವನೂ, ಕಿರಣಗಳಿಂದ ಅಲಂಕರಿಸಲ್ಪಟ್ಟವನೂ, ನಾಲ್ಕುಮುಖಗಳಿಂದ ಶೋಭಿತನೂ ಆಗಿದ್ದನು. ಆ ಚತುರ್ಮುಖನು ಮುಂಭಾಗದಲ್ಲಿ ಪ್ರಣಾಮಮಾಡುತ್ತಲಿದ್ದ ಯೋಗಿಯನ್ನು ನೋಡಿದನು.

ಪ್ರತ್ಯುದ್ಗಮ್ಯ ಸ್ವಯಂ ದೇವೋ ವಿಶ್ವಾತ್ಮಾ ಪರಿಷಸ್ವಜೇ ।
ಪರಿಷ್ವಕ್ತಸ್ಯ ದೇವೇನ ದ್ವಿಜೇಂದ್ರಸ್ಯಾಥ ದೇಹತಃ　　॥ ೧೧೬ ॥

ನಿರ್ಗತ್ಯ ಮಹತೀ ಜ್ಯೋತ್ಸ್ನಾ ವಿವೇಶಾದಿತ್ಯಮಂಡಲಮ್ ।
ಋಗ್ಯಜುಃಸಾಮಸಂಜ್ಞಂ ತತ್ಪವಿತ್ರಮಮಲಂ ಪದಮ್　　॥ ೧೧೭ ॥

ಹಿರಣ್ಯಗರ್ಭೋ ಭಗವಾನ್ ಯತ್ರಾಸ್ತೇ ಹವ್ಯಕವ್ಯಭುಕ್ ।
ದ್ವಾರಂ ತದ್ಯೋಗಿನಾಮಾದ್ಯಂ ವೇದಾಂತೇಷು ಪ್ರತಿಷ್ಠಿತಮ್ ॥ ೧೧೮ ॥

ಬ್ರಹ್ಮತೇಜೋಮಯಂ ಶ್ರೀಮದ್ದೃಷ್ಟ್ವಾ ಚೈವ ಮನೀಷಿಣಾಮ್ ।
ದೃಷ್ಟಮಾತ್ರೋ ಭಗವತಾ ಬ್ರಹ್ಮಣಾರ್ಚಿರ್ಮಯೋ ಮುನಿಃ ॥ ೧೧೯ ॥

---

೧೧೬. ವಿಶ್ವರೂಪಿಯಾದ ದೇವನು ತಾನಾಗಿ ಎದುರುಗೊಂಡು ಆ ಯೋಗಿಯನ್ನು ಆಲಿಂಗಿಸಿದನು. ಹೀಗೆ ಆ ಪಿತಾಮಹನಿಂದ ಯೋಗಿಯ ದೇಹವು ಆಲಂಗಿಸಲ್ಪಟ್ಟಿತು.

೧೧೭. ಆಗ ಇವನ ದೇಹದಿಂದ ಒಂದು ಮಹತ್ತಾದ ಚಂದ್ರಿಕೆಯು ಹುಟ್ಟಿ ಋಕ್, ಯಜುಸ್ಸು ಮತ್ತು ಸಾಮವೆಂಬ ವೇದತ್ರಯರೂಪವೂ, ಪವಿತ್ರವೂ ಮತ್ತು ನಿರ್ಮಲವಾದ ಉತ್ತಮ ಗಮ್ಯಸ್ಥಾನವೂ ಆದ ಆದಿತ್ಯ ಮಂಡಲವನ್ನು ಪ್ರವೇಶಿಸಿತು.

೧೧೮. ಯಾವ ಆದಿತ್ಯಮಂಡಲದಲ್ಲಿ ಭಗವಂತನಾದ ಹಿರಣ್ಯಗರ್ಭನು ಸತ್ಕರ್ಮಗಳಲ್ಲಿ ಅರ್ಪಿಸಿದ ಹವ್ಯ-ಕವ್ಯಗಳನ್ನು ಭುಂಜಿಸುತ್ತ ಸನ್ನಿಹಿತನಾಗಿರುವನೋ ಅಂತಹ ಆದಿತ್ಯ ಮಂಡಲವು ಯೋಗಿಗಳಿಗೆ ಪ್ರಥಮ ದ್ವಾರವೆಂದು ವೇದಾಂತ ಶಾಸ್ತ್ರಗಳಲ್ಲಿ ವ್ಯಕ್ತವಾಗಿರುವುದು.

೧೧೯. ಜ್ಞಾನಿಗಳಲ್ಲಿ ಗಣ್ಯನಾದ ಯೋಗಿಯು ಅಲ್ಲಿ ಕಾಂತಿಯಿಂದ ಥಳಥಳಿಸುವ ತೇಜೋಮಯ ಬ್ರಹ್ಮನನ್ನು ನೋಡುವನು. ಅಲ್ಲಿ ಚಂದ್ರಿಕಾಮಯನಾದ ಯೋಗಿಯು ಭಗವಂತನಿಂದ ನೋಡಲ್ಪಟ್ಟನು.

ಅಪಶ್ಯದೈಶ್ವರಂ ತೇಜಃ ಶಾಂತಂ ಸರ್ವತ್ರಗಂ ಶಿವಮ್ ।
ಸ್ವಾತ್ಮಾನಮಕ್ಷರಂ ವ್ಯೋಮ ಯತ್ರ ವಿಷ್ಣೋಃ ಪರಂ ಪದಮ್ ॥ ೧೨೦॥

ಆನಂದಮಚಲಂ ಬ್ರಹ್ಮಸ್ಥಾನಂ ತತ್ಪರಮೇಶ್ವರಮ್ ।
ಸರ್ವಭೂತಾತ್ಮಭೂತಸ್ಥಃ ಪರಮೈಶ್ವರ್ಯಮಾಸ್ಥಿತಃ ॥ ೧೨೧ ॥

ಪ್ರಾಪ್ತವಾನಾತ್ಮನೋ ಧಾಮ ಯತ್ತನ್ಮೋಕ್ಷಾಖ್ಯಮವ್ಯಯಮ್ ।
ತಸ್ಮಾತ್ಸರ್ವಪ್ರಯತ್ನೇನ ವರ್ಣಾಶ್ರಮವಿಧೌ ಸ್ಥಿತಃ ॥ ೧೨೨ ॥

ಸಮಾಶ್ರಿತ್ಯಾಂತಿಮಂ ಭಾವಂ ಮಾಯಾಂ ಲಕ್ಷ್ಮೀಂ ತರೇದ್ಬುಧಃ ।
ಸೂತ ಉವಾಚ:—
ವ್ಯಾಹೃತಾ ಹರಿಣಾ ತ್ವೇವಂ ನಾರದಾದ್ಯಾ ಮಹರ್ಷಯಃ ॥ ೧೨೩ ॥

---

೧೨೦. ತತ್ಕ್ಷಣದಲ್ಲಿ ಆ ಯೋಗಿಯು ಶಾಂತ, ಸರ್ವವ್ಯಾಪಿ, ಮಂಗಳಕರ, ನಾಶರಹಿತ, ಸರ್ವಭೂತಶರಣ್ಯ, ಸಾಕ್ಷಾತ್‌ಪರಮಾತ್ಮನ ಪರಮಪದ ಮುಂತಾದ ವಿಶೇಷಣಗಳಿಂದ ಸಹಿತವಾದ ಈಶ್ವರನ ತೇಜಃಪುಂಜವನ್ನು ಸಾಕ್ಷಾತ್ಕರಿಸಿದನು.

೧೨೧ ಮತ್ತು ಶಾಶ್ವತ ಆನಂದಮಯವೂ ಬ್ರಹ್ಮಸ್ಥಾನವೂ ಪರಮೇಶ್ವರಾತ್ಮಕವೂ ಆದ ಆ ಮುಕ್ತಿದಶೆಯನ್ನು ಪಾರಮೈಶ್ವರ್ಯಭಾವದಿಂದ ಕೂಡಿ ಸರ್ವಭೂತಗಳ ಆತ್ಮ, ಅದ್ವಿತೀಯ, ಎಂಬ ದೃಢ ಪ್ರತ್ಯಯ ಅಭ್ಯಾಸದಿಂದ ಗಳಿಸಿದನು.

೧೨೨. ಶಾಶ್ವತವಾದ ಮುಕ್ತಿಸುಖವೆಂದು ಕರೆಯಲ್ಪಡುವ ಆತ್ಮಸ್ಥಾನವನ್ನು ಹೊಂದಿದನು. ಆದುದರಿಂದ ಸರ್ವಪ್ರಯತ್ನದಿಂದ ವರ್ಣ-ಆಶ್ರಮ ಧರ್ಮಗಳ ವಿಧಾನದಲ್ಲಿ ಆಸಕ್ತನಾಗಿರಬೇಕು.

೧೨೩. ಹೀಗೆ ಧರ್ಮಾನುಷ್ಠಾನದ ಮೂಲಕವಾಗಿ ಜ್ಞೇಯ ವಸ್ತುಗಳಲ್ಲಿ ಕಡೆಯ ಎಲ್ಲೆಯಲ್ಲಿರುವ ಪರಮಾತ್ಮಭಾವವನ್ನು ತಿಳಿದು ಲಕ್ಷ್ಮೀರೂಪಳಾದ ಮಾಯೆಯನ್ನು ತರಣಮಾಡಬೇಕು. ಮುಂದೆ ಸೂತಮುನಿಯು ಹೇಳಿದನು:—
ಹೀಗೆ ನಾರದ ಮುಂತಾದ ಮಹರ್ಷಿಗಳು ಹರಿಯಿಂದ ಉಪದೇಶಿಸಲ್ಪಟ್ಟರು.

ಶಕ್ರೇಣ ಸಹಿತಾಃ ಸರ್ವೇ ಪಪ್ರಚ್ಛುರ್ಗರುಡಧ್ವಜಮ್ ।

**ಋಷಯ ಊಚುಃ :—**

ದೇವದೇವ ಹೃಷೀಕೇಶ ನಾಥ ನಾರಾಯಣಾವ್ಯಯ ॥ ೧೨೪ ॥

ತದ್ವದಾಶೇಷಮಸ್ಮಾಕಂ ಯದುಕ್ತಂ ಭವತಾ ಪುರಾ ।
ಇಂದ್ರದ್ಯುಮ್ನಾಯ ವಿಪ್ರಾಯ ಜ್ಞಾನಂ ಧರ್ಮಾದಿಗೋಚರಮ್ ೧೨೫॥

ಶುಶ್ರೂಷುಶ್ಚಾಪ್ಯಯಂ ಶಕ್ರಃ ಸಖಾ ತವ ಜಗನ್ಮಯ ।
ತತಃ ಸ ಭಗವಾನ್ ವಿಷ್ಣುಃ ಕೂರ್ಮರೂಪೀ ಜನಾರ್ದನಃ ॥ ೧೨೬ ॥

ರಸಾತಲಗತೋ ದೇವೋ ನಾರದಾದ್ಯೈರ್ಮಹರ್ಷಿಭಿಃ ।
ಪೃಷ್ಟಃ ಪ್ರೋವಾಚ ಸಕಲಂ ಪುರಾಣಂ ಕೌರ್ಮಮುತ್ತಮಮ್ ॥ ೧೨೭ ॥

---

೧೨೪. ಒಂದು ಕಾಲದಲ್ಲಿ ಇಂದ್ರನೊಡಗೂಡಿ ನಾರದ ಮುಂತಾದ ಮಹಾ ಮುನಿಗಳು ಗರುಡಧ್ವಜಲಾಂಛನದಿಂದ ಕೂಡಿದ ವಿಷ್ಣುವನ್ನು ಪ್ರಶ್ನಿಸಿದರು. ಋಷಿಗಳು ಈ ರೀತಿಯಾಗಿ ಪ್ರಶ್ನೆಮಾಡಿದರು. ದೇವೋತ್ತಮನೆ! ಹೃಷೀಕೇಶನೆ! ಪ್ರಭುವೇ! ನಾರಾಯಣನೆ! ಮತ್ತು ನಾಶರಹಿತನೇ! ಎಂದು ಆದಿಯಲ್ಲಿ ಪವಿತ್ರ ನಾಮಗಳಿಂದ ಸಂಬೋಧಿಸಿದರು.

೧೨೫. ಸ್ವಾಮಿಯೇ! ಪೂರ್ವದಲ್ಲಿ ಇಂದ್ರದ್ಯುಮ್ನನೆಂಬ ವಿಪ್ರನಿಗೆ ನೀನು ಉಪದೇಶಮಾಡಿರುವ ಧರ್ಮಾದಿವಿಷಯಗಳನ್ನು ಗೋಚರಿಸುವ ಜ್ಞಾನವನ್ನು ನಮಗೆ ಸಮಗ್ರವಾಗಿ ಉಪದೇಶಿಸು.

೧೨೬. ವಿಶ್ವರೂಪನಾದ ಸ್ವಾಮಿಯೇ! ನಮ್ಮಲ್ಲಿ ನಿನ್ನ ಮಿತ್ರನಾದ ಈ ಇಂದ್ರನು ಅದನ್ನು ಶ್ರವಣಮಾಡಲು ಕುತೂಹಲದಿಂದ ಇರುವನು. ಎಂಬುದಾಗಿ ಕೂರ್ಮರೂಪದಿಂದಿರುವ ಭಗವಂತನಾದ ವಿಷ್ಣುವು ಪ್ರಶ್ನಿಸಲ್ಪಟ್ಟನು.

೧೨೭. ರಸಾತಲ ಲೋಕದಲ್ಲಿ ವಾಸಮಾಡಿರುವ ಕೂರ್ಮಸ್ವಾಮಿಯು ನಾರದ ಮುಂತಾದ ಮಹಾಮುನಿಗಳಿಂದ ಪ್ರಶ್ನಿಸಲ್ಪಡಲಾಗಿ ಸಂಪೂರ್ಣವಾಗಿ ಉತ್ತಮವಾದ ಕೂರ್ಮ ಪುರಾಣವನ್ನು ಉಪದೇಶಮಾಡಿದನು.

ಸನ್ನಿಧೌ ದೇವರಾಜಸ್ಯ ತದ್ವಕ್ಷ್ಯೇ ಭವತಾಮಹಮ್ ।
ಧನ್ಯಂ ಯಶಸ್ಯಮಾಯುಷ್ಯಂ ಪುಣ್ಯಂ ಮೋಕ್ಷಪ್ರದಂ ನೃಣಾಮ್ ॥೧೨೮॥

ಪುರಾಣಶ್ರವಣಂ ವಿಪ್ರಾಃ ಕಥನಂ ಚ ವಿಶೇಷತಃ ।
ಶ್ರುತ್ವಾ ಚಾಧ್ಯಾಯಮೇವೈಕಂ ಸರ್ವಪಾಪೈಃ ಪ್ರಮುಚ್ಯತೇ ॥ ೧೨೯ ॥

ಉಪಾಖ್ಯಾನಮಥೈಕಂ ವಾ ಬ್ರಹ್ಮಲೋಕೇ ಮಹೀಯತೇ ।
ಇದಂ ಪುರಾಣಂ ಪರಮಂ ಕೌರ್ಮಂ ಕೂರ್ಮಸ್ವರೂಪಿಣಾ ॥ ೧೩೦ ॥

ಉಕ್ತಂ ವೈ ದೇವದೇವೇನ ಶ್ರದ್ಧಾತವ್ಯಂ ದ್ವಿಜಾತಿಭಿಃ ॥ ೧೩೧ ॥

ಇತಿ ಶ್ರೀ ಕೂರ್ಮಪುರಾಣೇ ಇಂದ್ರದ್ಯುಮ್ನಮೋಕ್ಷವರ್ಣನಂ ನಾಮ
ಪ್ರಥಮೋಽಧ್ಯಾಯಃ

---

೧೨೮. ನಾನು ಈ ದೇವರಾಜನ ಸನ್ನಿಧಿಯಲ್ಲಿ ನಿಮಗೆ ಆ ಪುರಾಣವನ್ನು ಉಪದೇಶಿಸುವೆನು. ಆ ಚರಿತವು ಮಾನವರಿಗೆ ಧನ, ಕೀರ್ತಿ, ಆಯುಷ್ಯ, ಪುಣ್ಯ, ಮೋಕ್ಷ, ಮುಂತಾದ ಫಲಗಳನ್ನು ಕೊಡುವುದಾಗಿದೆ.

೧೨೯. ವಿಪ್ರರೆ ! ಹೀಗೆ ಈ ಪುರಾಣ ಶ್ರವಣವು ಸರ್ವಪ್ರಕಾರಗಳಿಂದ ವಿಶೇಷವಾಗಿ ಉತ್ತಮಫಲಗಳನ್ನು ಕೊಡುವುದು. ಇದರಲ್ಲಿ ಒಂದು ಅಧ್ಯಾಯದ ಶ್ರವಣವು ಸಮಸ್ತಪಾಪಗಳ ಬಿಡುಗಡೆಯನ್ನು ಸಾಧಿಸುವುದು.

೧೩೦. ಅಥವಾ ಒಂದು ಉಪಾಖ್ಯಾನ ಶ್ರವಣದಿಂದ ಮಾನವನು ಬ್ರಹ್ಮಲೋಕದಲ್ಲಿ ಕೂಡ ಪೂಜ್ಯನಾಗುತ್ತಾನೆ. ಹೀಗೆ ಈ ಕೂರ್ಮಪುರಾಣವು ಸರ್ವೋತ್ತಮವಾದುದು.

೧೩೧. ಈ ಪುರಾಣವು ದೇವದೇವನಾದ, ಕೂರ್ಮರೂಪಿಯಾದ ಭಗವಂತನು ಮುನಿಗಳಿಗೆ ಉಪದೇಶಿಸಿ ಬಂದಿರುವುದು. ದ್ವಿಜರು ಇದನ್ನು ಶ್ರದ್ಧೆಯಿಂದ ಸತ್ಕರಿಸಬೇಕು.

ಕೂರ್ಮಪುರಾಣದಲ್ಲಿ ಪ್ರಥಮಾಧ್ಯಾಯವು ಸಮಾಪ್ತವು.



ಶ್ರೀಃ

# ಕೂರ್ಮಪುರಾಣಂ

## ದ್ವಿತೀಯೋಽಧ್ಯಾಯಃ

### (ಅಥ ವರ್ಣಾಶ್ರಮ ವರ್ಣನಮ್)

**ಕೂರ್ಮ ಉವಾಚ:—**

**ಶೃಣುಧ್ವಮೃಷಯಃ ಸರ್ವೇ ಯತ್ಪೃಷ್ಟೋಽಹಂ ಜಗದ್ಧಿತಮ್ ।**
**ವಕ್ಷ್ಯಮಾಣಂ ಮಯಾ ಸರ್ವಮಿಂದ್ರದ್ಯುಮ್ನಾಯ ಭಾಷಿತಮ್ ॥ ೧ ॥**

**ಭೂತೈರ್ಭವ್ಯೈರ್ಭವದ್ಭಿಶ್ಚ ಚರಿತೈರುಪಬೃಂಹಿತಮ್ ।**
**ಪುರಾಣಂ ಪುಣ್ಯದಂ ನೃಣಾಂ ಮೋಕ್ಷಧರ್ಮಾನುಕೀರ್ತನಮ್ ॥ ೨ ॥**

**ಅಹಂ ನಾರಾಯಣೋ ದೇವಃ ಪೂರ್ವಮಾಸೀನ್ನ ಮೇ ಪರಮ್ ।**
**ಉಪಾಸ್ಯ ವಿಪುಲಾಂ ನಿದ್ರಾಂ ಭೋಗಿಶಯ್ಯಾಂ ಸಮಾಶ್ರಿತಃ ॥ ೩ ॥**

---

## ಎರಡನೆಯ ಅಧ್ಯಾಯವು

೧. ಕೂರ್ಮಮೂರ್ತಿಯು ಇಂತೆಂದನು :—ಸಮಸ್ತ ಮುನಿಗಳೆ! ಪೂರ್ವದಲ್ಲಿ ನಾನು ಇಂದ್ರದ್ಯುಮ್ನನಿಗೆ ಉಪದೇಶಮಾಡಿರುವ ಮತ್ತು ಜಗತ್ತಿನ ಹಿತಸಾಧಕವಾದ ವಿಷಯಗಳಲ್ಲಿ ನಿಮ್ಮ ಪ್ರಶ್ನ ವಚನಕ್ಕೆ ತಕ್ಕ ವಿವರಿಸುವ ವಚನವನ್ನು ಕೇಳಿರಿ.

೨. ನಾನು ಉಪದೇಶಮಾಡುವ ಈ ಪುರಾಣವು ಭೂತ-ಭವಿಷ್ಯ-ವರ್ತಮಾನ ಚರಿತ್ರಗಳಿಂದ ಅಲಂಕೃತವೂ ಮೋಕ್ಷಧರ್ಮಕೀರ್ತನದಿಂದ ಕೂಡಿರುವುದೂ ಮತ್ತು ಮಾನವರಿಗೆ ಪುಣ್ಯಪ್ರದವೂ ಆಗಿರುವುದು.

೩. ಈ ಪ್ರಪಂಚದ ಸೃಷ್ಟಿಯ ಆದಿಯಲ್ಲಿ ಅನಂತಶಯನವನ್ನು ಆಶ್ರಯಿಸಿ ವಿಸ್ತಾರವಾದ ನಿದ್ರೆಯನ್ನು ಅನುಭವಿಸುತ್ತ ನಾರಾಯಣ ದೇವನಾದ ನಾನು ಒಬ್ಬನೇ ಇದ್ದೆನು. ಭಿನ್ನವಸ್ತುವು ಒಂದಾದರೂ ಇರಲಿಲ್ಲ.

ಚಿಂತಯಾಮಿ ಪುನಃ ಸೃಷ್ಟಿಂ ನಿಶಾಂತೇ ಪ್ರತಿಬುಧ್ಯ ತು ।
ತತೋ ಮೇ ಸಹಸೋತ್ಪನ್ನಃ ಪ್ರಸಾದೋ ಮುನಿಪುಂಗವಾಃ ॥ ೪ ॥

ಚತುರ್ಮುಖಸ್ತತೊ ಜಾತೋ ಬ್ರಹ್ಮಾ ಲೋಕಪಿತಾಮಹಃ ।
ತದಂತರೇಽಭವತ್ಕ್ರೋಧಃ ಕಸ್ಮಾಚ್ಚಿತ್ಕಾರಣಾತ್ತದಾ ॥ ೫ ॥

ಆತ್ಮನೋ ಮುನಿಶಾರ್ದೂಲಾಸ್ತತ್ರ ದೇವೋ ಮಹೇಶ್ವರಃ ।
ರುದ್ರಃ ಕ್ರೋಧಾತ್ಮಕೋ ಜಜ್ಞೇ ಶೂಲಪಾಣಿಸ್ತ್ರಿಲೋಚನಃ ॥ ೬ ॥

ತೇಜಸಾ ಸೂರ್ಯಸಂಕಾಶಸ್ತ್ರೈಲೋಕ್ಯಂ ಸಂದಹನ್ನಿವ ।
ತದಾ ಶ್ರೀರಭವದ್ದೇವೀ ಕಮಲಾಯತಲೋಚನಾ ॥ ೭ ॥

---

೪. ಹಾಗೆ ಪ್ರಲಯವೆಂಬ ರಾತ್ರಿಯು ಕಳೆದು ಎಚ್ಚರವಾಗಿ ಪುನಃ ಸೃಷ್ಟಿಯನ್ನು ಧ್ಯಾನಿಸಿದೆನು. ಮುನಿಪುಂಗವರೇ ! ಸೃಷ್ಟಿಧ್ಯಾನದಿಂದ ಅಕಸ್ಮಾತ್ತಾಗಿ ನನ್ನಿಂದ ಒಂದು ಪ್ರಸಾದವು ಪ್ರಾದುರ್ಭಾವಿಸಿತು.

೫. ಆ ನನ್ನ ಪ್ರಸಾದದ ಪರಿಣಾಮದಿಂದ ಲೋಕಗಳಿಗೆ ಪಿತಾಮಹನಾದ ಚತುರ್ಮುಖ ಬ್ರಹ್ಮನು ಜನಿಸಿದನು. ಅನಂತರದಲ್ಲಿ ಯಾವುದೋ ಕಾರಣ ವಿಶೇಷದಿಂದ ನನಗೆ ಕ್ರೋಧವೃತ್ತಿಯು ಹುಟ್ಟಿತು.

೬. ಮುನಿಶ್ರೇಷ್ಠರೇ ! ನನ್ನಿಂದ ಹುಟ್ಟಿದ ಕ್ರೋಧವೃತ್ತಿಯ ಪರಿಣಾಮದಿಂದ ಕ್ರೋಧಮಯನೂ, ಶೂಲವನ್ನು ಧರಿಸಿದವನೂ, ಮೂರು ನೇತ್ರಗಳಿಂದ ಶೋಭಿತನೂ, ಮಹೇಶ್ವರನೂ ಆದ ರುದ್ರದೇವನು ಜನಿಸಿದನು.

೭. ಆ ರುದ್ರದೇವನು ತೇಜಸ್ಸಿನಿಂದ ಸೂರ್ಯನಿಗೆ ಸಮಾನನಾಗಿ ತ್ರಿಲೋಕಗಳನ್ನು ದಹಿಸುವವನಂತೆ ಇದ್ದನು. ಆಗ ಕಮಲದಳದಂತೆ ವಿಶಾಲನೇತ್ರಗಳಿಂದ ರಮ್ಯಳಾದ ಲಕ್ಷ್ಮೀದೇವಿಯು ಆವಿರ್ಭವಿಸಿದಳು.

ಸುರೂಪಾ ಸೌಮ್ಯವದನಾ ಮೋಹಿನೀ ಸರ್ವದೇಹಿನಾಮ್ ।
ಶುಚಿಸ್ಮಿತಾ ಸುಪ್ರಸನ್ನಾ ಮಂಗಲಾ ಮಹಿಮಾಸ್ಪದಾ ॥ ೮ ॥

ದಿವ್ಯಕಾಂತಿಸಮಾಯುಕ್ತಾ ದಿವ್ಯಮಾಲ್ಯೋಪಶೋಭಿತಾ ।
ನಾರಾಯಣೀ ಮಹಾಮಾಯಾ ಮೂಲಪ್ರಕೃತಿರವ್ಯಯಾ ॥ ೯ ॥

ಸ್ವಧಾಮ್ನಾ ಪೂರಯಂತೀದಂ ಮತ್ಪಾರ್ಶ್ವಂ ಸಮುಪಾವಿಶತ್ ।
ತಾಂ ದೃಷ್ಟ್ವಾ ಭಗವಾನ್ ಬ್ರಹ್ಮಾ ಮಾಮುವಾಚ ಜಗತ್ಪತಿಮ್ ॥೧೦॥

ಮೋಹಾಯಾಶೇಷಭೂತಾನಾಂ ನಿಯೋಜಯ ಸುರೂಪಿಣೀಮ್ ।
ಯೇನೇಯಂ ವಿಪುಲಾ ಸೃಷ್ಟಿರ್ವರ್ಧತೇ ಮಮ ಮಾಧವ ॥ ೧೧ ॥

---

೮. ಆ ಲಕ್ಷ್ಮೀದೇವಿಯು ಸುರೂಪ, ಸೌಮ್ಯವಾದ ಮುಖ, ಶುಭ್ರವಾದ ಮಂದಹಾಸ, ದಿವ್ಯಮಹಿಮೆ ಇವುಗಳಿಂದ ಕೂಡಿ ಸರ್ವಪ್ರಾಣಿಗಳಿಗೆ ಮೋಹವನ್ನುಂಟುಮಾಡುವವಳೂ, ಪ್ರಸನ್ನಮೂರ್ತಿಯೂ ಮತ್ತು ಮಂಗಲರೂಪಿಣಿಯೂ ಆಗಿದ್ದಳು.

೯. ಮತ್ತು ದಿವ್ಯವಾದ ಕಾಂತಿಯಿಂದ ರಾಜಿಸುವವಳೂ, ದಿವ್ಯ ಮಾಲ್ಯಗಳಿಂದ ಅಲಂಕರಿಸಲ್ಪಟ್ಟವಳೂ, ನಾರಾಯಣಾಂಶವುಳ್ಳವಳೂ, ಮಹಾ ಮಾಯಾತ್ಮಕಳೂ ಮತ್ತು ವ್ಯಯವಿಲ್ಲದ ಮೂಲಪ್ರಕೃತಿರೂಪಳೂ ಆಗಿದ್ದಳು.

೧೦. ಆ ಲಕ್ಷ್ಮಿಯು ತನ್ನ ಕಾಂತಿಯಿಂದ ಪ್ರಪಂಚವನ್ನು ಪೂರ್ಣಗೊಳಿಸುತ್ತ ನನ್ನ ಪಾರ್ಶ್ವವನ್ನು ಹೊಂದಿದಳು. ಪೂಜ್ಯನಾದ ಬ್ರಹ್ಮದೇವನು ಅವಳನ್ನು ನೋಡಿ ಜಗತ್ಪತಿಯಾದ ನನ್ನನ್ನು ಕುರಿತು ಈ ರೀತಿಯಾಗಿ ಹೇಳಿದನು.

೧೧. ಮಾಧವನೆ ! ಸುರೂಪಿಣಿಯಾದ ಈ ಲಕ್ಷ್ಮಿಯನ್ನು ಸರ್ವ ಭೂತಗಳನ್ನು ಮೋಹಜಾಲದಲ್ಲಿ ಬಂಧಿಸುವಂತೆ ನಿಯಮಿಸು. ಅದರಿಂದ ನನ್ನ ಸೃಷ್ಟಿ ಪ್ರಪಂಚವು ವಿಸ್ತಾರವಾಗಿ ವೃದ್ಧಿಹೊಂದುವುದು.

ತಥೋಕ್ತ್ವೋಽಹಂ ಶ್ರಿಯಂ ದೇವೀಮಬ್ರವಂ ಪ್ರಹಸನ್ನಿವ ।
ದೇವೀದಮಖಿಲಂ ವಿಶ್ವಂ ಸದೇವಾಸುರಮಾನುಷಮ್ ॥ ೧೨ ॥

ಮೋಹಯಿತ್ವಾ ಮಮಾದೇಶಾತ್ಸಂಸಾರೇ ವಿನಿಪಾತಯ ।
ಜ್ಞಾನಯೋಗರತಾನ್ ದಾಂತಾನ್ ಬ್ರಹ್ಮಿಷ್ಠಾನ್ ಬ್ರಹ್ಮವಾದಿನಃ ॥೧೩॥

ಅಕ್ರೋಧನಾನ್ ಸತ್ಯಪರಾನ್ ದೂರತಃ ಪರಿವರ್ಜಯ ।
ಧ್ಯಾಯಿನೋ ನಿರ್ಮಮಾನ್ ಶಾಂತಾನ್ ಧಾರ್ಮಿಕಾನ್ ವೇದಪಾರ (ಗಾನ್ ॥ ೧೪ ॥

ಯಾಜಿನಸ್ತಾಪಸಾನ್ ವಿಪ್ರಾನ್ ದೂರತಃ ಪರಿವರ್ಜಯ ।
ವೇದವೇದಾಂತವಿಜ್ಞಾನಸಂಛಿನ್ನಾಶೇಷಸಂಶಯಾನ್ ॥ ೧೫ ॥

---

೧೨. ಬ್ರಹ್ಮನು ಈ ರೀತಿಯಾಗಿ ಕೇಳಲಾಗಿ ನಾನು ನಗುಮುಖದಿಂದ ಲಕ್ಷ್ಮೀದೇವಿಯನ್ನು ಕುರಿತು ಇಂತೆಂದೆನು. ದೇವಿಯೇ ! ದೇವ, ಅಸುರ, ಮಾನವರಿಂದ ಕೂಡಿರುವ ಅಖಿಲ ವಿಶ್ವವನ್ನು ನೀನು ಮೋಹಪಡಿಸು.

೧೩. ಸರ್ವ ಪ್ರಾಣಿಗಳನ್ನು ಮೋಹಪಡಿಸಿ ನನ್ನ ಆಜ್ಞಾನುಸಾರವಾಗಿ ಸಂಸಾರ ಬಂಧನದಿಂದ ಬಂಧಿಸು, ಆದರೆ ಜ್ಞಾನಯೋಗನಿರತರೂ, ಜಿತೇಂದ್ರಿಯರೂ, ಬ್ರಹ್ಮಿಷ್ಠರೂ ಮತ್ತು ಬ್ರಹ್ಮವಾದಿಗಳೂ ಆದ ಮುನಿಗಣವನ್ನು ವಶೀಕರಿಸಬೇಡ.

೧೪. ಕ್ರೋಧವಿಮುಕ್ತರೂ, ಸತ್ಯಪರಾಯಣರೂ, ಧ್ಯಾನಯೋಗಾಸಕ್ತರೂ, ಮಮತಾ ಶೂನ್ಯರೂ, ಶಾಂತರೂ, ಧಾರ್ಮಿಕರೂ ಮತ್ತು ವೇದಪಾರಂಗತರೂ ಆದ ಮಹನೀಯರನ್ನು ದೂರದಲ್ಲಿ ತ್ಯಜಿಸು.

೧೫. ಯಜ್ಞ-ತಪಸ್ಸು ಮುಂತಾದ ಸದಾಚಾರಸಂಪನ್ನರಾದ ಮತ್ತು ವೇದ ವೇದಾಂತಾಭ್ಯಾಸ ಪರಿಪಾಕದಿಂದ ಅಶೇಷ ಸಂಶಯಗಳನ್ನು ತೊಲಗಿಸಿ ತತ್ತ್ವಜ್ಞಾನವುಳ್ಳ ವಿಪ್ರರನ್ನು ದೂರದಲ್ಲಿ ತ್ಯಜಿಸು.

ಮಹಾಯಜ್ಞಪರಾನ್ ವಿಪ್ರಾನ್ ದೂರತಃ ಪರಿವರ್ಜಯ ।
ಯೋ ಯಜಂತಿ ಜಪೈರ್ಹೋಮೈರ್ದೇವದೇವಂ ಮಹೇಶ್ವರಮ್ ॥೧೬॥

ಸ್ವಾಧ್ಯಾಯೇನೇಜ್ಯಯಾ ದೂರಾತ್ತಾನ್ ಪ್ರಯತ್ನೇನ ವರ್ಜಯ ।
ಭಕ್ತಿಯೋಗಸಮಾಯುಕ್ತಾನೀಶ್ವರಾರ್ಪಿತಮಾನಸಾನ್ ॥ ೧೭ ॥

ಪ್ರಾಣಾಯಾಮಾದಿಷು ರತಾನ್ ದೂರಾತ್ಪರಿಹರಾಮಲಾನ್ ।
ಪ್ರಣವಾಸಕ್ತಮನಸೋ ರುದ್ರಜಾಪ್ಯಪರಾಯಣಾನ್ ॥ ೧೮ ॥

ಅಥರ್ವಶಿರಸೋ ವೇತ್ತ್ರ್ಯಾನ್ ಧರ್ಮಜ್ಞಾನ್ ಪರಿವರ್ಜಯ ।
ಬಹುನಾತ್ರ ಕಿಮುಕ್ತೇನ ಸ್ವಧರ್ಮಪರಿಪಾಲಕಾನ್ ॥ ೧೯ ॥

---

೧೬. ಯಾರು ಜಪ, ಹೋಮಾಚರಣಗಳಿಂದ ದೇವೋತ್ತಮನಾದ ಮಹೇಶ್ವರನನ್ನು ಅರ್ಚಿಸುವರೋ ಮತ್ತು ಯಾರು ಮಹಾಯಜ್ಞಾನುಷ್ಠಾನದಲ್ಲಿ ತತ್ಪರರೋ ಅಂತಹ ವಿಪ್ರರನ್ನು ಮೋಹದಲ್ಲಿ ಇಡಬೇಡ.

೧೭. ವೇದಾಧ್ಯಯನ, ಯಾಗಾನುಷ್ಠಾನ, ಭಕ್ತಿಯೋಗಗಳಿಂದ ಕೂಡಿದವರೂ ಸರ್ವೇಶ್ವರನಲ್ಲಿ ಅರ್ಪಿಸಿದ ಮಾನಸವುಳ್ಳವರೂ ಆದ ಸಾಧುಗಳ ಸ್ಪರ್ಶವನ್ನು ಪ್ರಯತ್ನಪೂರ್ವಕವಾಗಿ ತ್ಯಜಿಸು.

೧೮. ಪ್ರಾಣಾಯಾಮಾನುಷ್ಠಾನದಿಂದ ಬಾಹ್ಯ-ಅಂತರಕಲ್ಮಷದಿಂದ ಮುಕ್ತರಾಗಿರುವವರನ್ನೂ ಓಂಕಾರಧ್ಯಾನಪರರನ್ನೂ ಮತ್ತು ರುದ್ರಾಧ್ಯಾಯ ಜಪ ಪರಾಯಣರನ್ನೂ ಸ್ಪರ್ಶಮಾಡಬೇಡ.

೧೯. ಅಥರ್ವಶೀರ್ಷಗಳನ್ನು ತಿಳಿದಿರುವ ಧರ್ಮಜ್ಞರನ್ನು ದೂರದಲ್ಲಿ ಪರಿತ್ಯಜಿಸು. ಹೆಚ್ಚು ವಾಗ್ಜಾಲದಿಂದ ಏನು ಉಪಯೋಗವು. ಮುಖ್ಯವಾಗಿ ಸ್ವಧರ್ಮಾಚರಣವುಳ್ಳವರನ್ನು ದೂರದಲ್ಲಿ ಬಿಡು.

ಈಶ್ವರಾರಾಧನರತಾನ್ ಮನ್ನಿಯೋಗಾನ್ನ ಮೋಹಯ ।
ಏವಂ ಮಯಾ ಮಹಾಮಾಯಾ ಪ್ರೇರಿತಾ ಹರಿವಲ್ಲಭಾ ॥ ೨೦ ॥

ಯಥಾದೇಶಂ ಚಕಾರಾಸೌ ತಸ್ಮಾಲ್ಲಕ್ಷ್ಮೀಂ ಸಮರ್ಚಯೇತ್ ।
ಶ್ರಿಯಂ ದದಾತಿ ವಿಪುಲಾಂ ಪುಷ್ಟಿಂ ಮೇಧಾಂ ಯಶೋ ಬಲಮ್ ॥೨೧॥

ಅರ್ಚಿತಾ ಭಗವತ್ಪತ್ನೀ ತಸ್ಮಾಲ್ಲಕ್ಷ್ಮೀಂ ಸಮರ್ಚಯೇತ್ ।
ತತೋಽಸೃಜತ್ಸ ಭಗವಾನ್ ಬ್ರಹ್ಮಾ ಲೋಕಪಿತಾಮಹಃ ॥ ೨೨ ॥

ಚರಾಚರಾಣಿ ಭೂತಾನಿ ಯಥಾಪೂರ್ವಂ ಮಮಾಜ್ಞಯಾ ।
ಮರೀಚಿಭೃಗ್ವಂಗಿರಸಂ ಪುಲಸ್ತ್ಯಂ ಪುಲಹಂ ಕ್ರತುಮ್ ॥ ೨೩ ॥

---

೨೦. ಪರಮೇಶ್ವರನ ಆರಾಧನೆಯಲ್ಲಿ ನಿರತರಾದವರನ್ನು ನನ್ನ ಆಜ್ಞೆಯನ್ನು ಅನುಸರಿಸಿ ಮೋಹಪಡಿಸಬೇಡ. ಹೀಗೆಂದು ನಾರಾಯಣ ಪತ್ನಿಯಾದ ಮಹಾ ಮಾಯೆಯು ನನ್ನಿಂದ ಪ್ರೇರೇಪಿಸಲ್ಪಟ್ಟಳು.

೨೧. ಈ ನನ್ನ ಆದೇಶದಂತೆ ಮಾಯೆಯು ಎಲ್ಲವನ್ನೂ ನೆರವೇರಿಸಿದಳು. ಆದುದರಿಂದ ಲಕ್ಷ್ಮಿಯನ್ನು ಚನ್ನಾಗಿ ಅರ್ಚಿಸಬೇಕು. ಹಾಗೆ ಅರ್ಚಿಸಲ್ಪಟ್ಟ ಲಕ್ಷ್ಮಿಯು ಅಧಿಕವಾದ ಸಂಪತ್ತು, ಪುಷ್ಟಿ, ಮೇಧಾ, ಕೀರ್ತಿ ಮತ್ತು ಬಲಗಳೆಂಬ ಅನೇಕ ಫಲಗಳನ್ನು ಕೊಡುವಳು.

೨೨. ಪರಮಾತ್ಮನ ಪತ್ನಿಯಾದ ಲಕ್ಷ್ಮೀದೇವಿಯು ಅರ್ಚಿಸಲ್ಪಟ್ಟವಳಾಗಿ ಮೇಲೆ ಹೇಳಿದ ವಿವಿಧಫಲಗಳನ್ನು ಕೊಡುವುದರಿಂದ ಲಕ್ಷ್ಮಿಯನ್ನು ಅರ್ಚಿಸಬೇಕು. ಅನಂತರದಲ್ಲಿ ಲೋಕಗಳಿಗೆ ಪಿತಾಮಹನಾದ ಮತ್ತು ಷಡ್ಗುಣೈಶ್ವರ್ಯ ಸಂಪನ್ನನಾದ ಬ್ರಹ್ಮದೇವನು ಸೃಷ್ಟಿ ವ್ಯಾಪಾರವನ್ನು ಕೈಗೊಂಡನು.

೨೩, ೨೪. ಆಗ ಬ್ರಹ್ಮನು ಚರ ಮತ್ತು ಅಚರರೂಪವಾದ ಪ್ರಾಣಿಗಳನ್ನು ನನ್ನ ಆಜ್ಞಾನುಸಾರವಾಗಿ ಪೂರ್ವಕಲ್ಪದ ವ್ಯವಸ್ಥೆಯಂತೆ ಸೃಷ್ಟಿಸಿದನು. ಆದಿಯಲ್ಲಿ ಮರೀಚಿ, ಭೃಗು, ಅಂಗಿರ, ಪುಲಸ್ತ್ಯ, ಪುಲಹ, ಕ್ರತು, ದಕ್ಷ, ಅತ್ರಿ ಮತ್ತು ವಸಿಷ್ಠ

ದಕ್ಷಮತ್ರಿಂ ವಸಿಷ್ಠಂ ಚ ಸೋಽಸೃಜದ್ಯೋಗವಿದ್ಯಯಾ ।
ನವೈತೇ ಬ್ರಹ್ಮಣಃ ಪುತ್ರಾ ಬ್ರಾಹ್ಮಣಾ ಬ್ರಾಹ್ಮಣೋತ್ತಮಾಃ ॥ ೨೪ ॥

ಬ್ರಹ್ಮವಾದಿನ ಏವೈತೇ ಮರೀಚ್ಯಾದ್ಯಾಸ್ತು ಸಾಧಕಾಃ ।
ಸಸರ್ಜ ಬ್ರಾಹ್ಮಣಾನ್ ವಕ್ತ್ರಾತ್ ಕ್ಷತ್ರಿಯಾಂಶ್ಚ ಭುಜಾದ್ವಿಭುಃ ॥ ೨೫ ॥

ವೈಶ್ಯಾನೂರುದ್ವಯಾದ್ದೇವಃ ಪದ್ಭ್ಯಾಂ ಶೂದ್ರಾನ್ ಪಿತಾಮಹಃ ।
ಯಜ್ಞನಿಷ್ಪತ್ತಯೇ ಬ್ರಹ್ಮಾ ಶೂದ್ರವರ್ಜಂ ಸಸರ್ಜ ಹ ॥ ೨೬ ॥

ಗುಪ್ತಯೇ ಸರ್ವದೇವಾನಾಂ ತೇಭ್ಯೋ ಯಜ್ಞೋ ಹಿ ನಿರ್ಬಭೌ ।
ಋಚೋ ಯಜೂಂಷಿ ಸಾಮಾನಿ ತಥೈವಾಥರ್ವಣಾನಿ ಚ ॥ ೨೭ ॥

---

ಎಂಬ ಮುನಿವರ್ಯರನ್ನು ತನ್ನ ಯೋಗವಿದ್ಯೆಯಿಂದ ಸೃಷ್ಟಿಸಿದನು. ಈ ಒಂಭತ್ತು ಮಂದಿಯು ಬ್ರಹ್ಮನಿಷ್ಠರೂ ಬ್ರಾಹ್ಮಣೋತ್ತಮರೂ ಆದ ಬ್ರಹ್ಮನ ಮಾನಸಪುತ್ರರಾಗಿ ಜನಿಸಿದರು.

೨೫. ಈ ಮರೀಚಿ ಮುಂತಾದ ಸಾಧಕರು ಬ್ರಹ್ಮವಾದಿಗಳಾಗಿರುವರು. ಬ್ರಹ್ಮದೇವನು ಬ್ರಾಹ್ಮಣರನ್ನು ತನ್ನ ಮುಖದಿಂದಲೂ ಕ್ಷತ್ರಿಯರನ್ನು ತನ್ನ ಭುಜಗಳಿಂದಲೂ ನಿರ್ಮಾಣಮಾಡಿದನು.

೨೬. ಹಾಗೆ ಪಿತಾಮಹನಾದ ಬ್ರಹ್ಮದೇವನು ಎರಡು ತೊಡೆಗಳಿಂದ ವೈಶ್ಯ ಜಾತಿಯನ್ನು ಮತ್ತು ಪಾದದ್ವಯದಿಂದ ಶೂದ್ರಜಾತಿಯನ್ನು ನಿರ್ಮಿಸಿದನು. ಬ್ರಹ್ಮದೇವನು ಇವರಲ್ಲಿ ಶೂದ್ರಜಾತಿಯನ್ನು ಹೊರತು ಮಿಕ್ಕವರನ್ನು ಯಜ್ಞ ಕರ್ಮದ ಆಚರಣೆಗೋಸ್ಕರ ಸೃಷ್ಟಿಸಿರುವನು.

೨೭. ಆ ತ್ರೈವರ್ಣಿಕರಿಂದ ಸಕಲದೇವತೆಗಳನ್ನು ರಕ್ಷಣಮಾಡಲೋಸ್ಕರ ಯಜ್ಞಪುರುಷನು ಆವಿರ್ಭವಿಸಿದನು. ಯಜ್ಞಕರ್ಮಕ್ಕೆ ಅಂಗವಾಗಿ ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದಭಾಗಗಳು ಆವಿರ್ಭವಿಸಿದುವು.

ಬ್ರಹ್ಮಣಃ ಸಹಜಂ ರೂಪಂ ನಿತ್ಯೈಷಾ ಶಕ್ತಿರವ್ಯಯಾ ।
ಅನಾದಿನಿಧನಾ ದಿವ್ಯಾ ವಾಗುತ್ಸೃಷ್ಟಾ ಸ್ವಯಂಭುವಾ ॥ ೨೮ ॥

ಆದೌ ವೇದಮಯೀ ಭೂತಾ ಯತಃ ಸರ್ವಾಃ ಪ್ರವೃತ್ತಯಃ ।
ಅತೋಽನ್ಯಾನಿ ಹಿ ಶಾಸ್ತ್ರಾಣಿ ಪೃಥಿವ್ಯಾಂ ಯಾನಿ ಕಾನಿಚಿತ್ ॥ ೨೯ ॥

ನ ತೇಷು ರಮತೇ ಧೀರಃ ಪಾಖಂಡೀ ರಮತೇ ಬುಧಃ ।
ವೇದಾರ್ಥವಿತ್ತಮೈಃ ಕಾರ್ಯಂ ಯತ್ಸ್ಮೃತಂ ಮುನಿಭಿಃ ಪುರಾ ॥ ೩೦ ॥

ಸ ಜ್ಞೇಯಃ ಪರಮೋ ಧರ್ಮಃ ನಾನ್ಯಶಾಸ್ತ್ರೇಷು ಸಂಸ್ಥಿತಃ ।
ಯಾ ವೇದಬಾಹ್ಯಾಃ ಸ್ಮೃತಯೋ ಯಾಶ್ಚ ಕಾಶ್ಚ ಕುದೃಷ್ಟಯಃ ॥೩೧॥

---

೨೮. ಈ ವೇದಭಾಗಗಳು ಬ್ರಹ್ಮದೇವನ ಸಹಜವಾದ ರೂಪವು. ಬ್ರಹ್ಮದೇವನಿಗೆ ಈ ಶಕ್ತಿಯು ನಾಶವಿಲ್ಲದಂತೆ ನಿತ್ಯವಾಗಿರುವುದು. ಆದುದರಿಂದ ಬ್ರಹ್ಮದೇವನಿಂದ ಉತ್ಪತ್ತಿ - ನಾಶಗಳಿಂದ ವರ್ಜಿತವಾದ ದಿವ್ಯವಾದ ವಾಕ್‌ಶಕ್ತಿಯು ವೇದರೂಪವಾಗಿ ಸೃಷ್ಟಿಸಲ್ಪಟ್ಟಿತು.

೨೯. ಅಂತಹ ವಾಕ್ಕು ವೇದರೂಪವಾಗಿ ಜನಿಸಿತು. ಅದರ ಮೂಲಕವಾಗಿ ಜಗತ್ತಿನ ಸಮಸ್ತವ್ಯಾಪಾರಗಳು ನಡೆಯುವುವು. ಇದಕ್ಕೆ ಬಾಹ್ಯವಾಗಿ ಪೃಥಿವಿಯಲ್ಲಿ ಆಯಾಯ ಅನೇಕಶಾಸ್ತ್ರಗಳು ಪ್ರಚುರವಾಗಿವೆ.

೩೦. ಧೀರನಾದ ಮಾನವನು ಆ ಶಾಸ್ತ್ರಗಳಲ್ಲಿ ರಮಿಸುವುದಿಲ್ಲ. ಪಾಖಂಡಿಯು ಆ ಶಾಸ್ತ್ರಗಳಲ್ಲಿ ಪ್ರೀತಿಯಿಡುವನು. ವೇದಾರ್ಥ ವಿಜ್ಞಾನದಿಂದ ಕೂಡಿದ ಮುನಿಗಳಿಂದ ಯಾವುದು ಸ್ಮೃತಿಗ್ರಂಥರೂಪವಾಗಿ ಕರ್ತವ್ಯವೆಂದು ಪೂರ್ವದಲ್ಲಿ ವಿಧಿಸಲ್ಪಟ್ಟಿರುವುದೋ ಆ ಕರ್ಮವನ್ನು ಆಚರಿಸಬೇಕು.

೩೧ ಸ್ಮೃತಿಗ್ರಂಥಗಳಲ್ಲಿ ವಿಹಿತವಾದುದು ಪರಮಧರ್ಮವೆಂದು ಅರಿಯಬೇಕು. ಅನ್ಯಶಾಸ್ತ್ರಗಳಿಂದ ಬೋಧಿಸಲ್ಪಟ್ಟಿರುವುದು ಧರ್ಮವಲ್ಲವು. ಕೆಲವು ವೇದಬಾಹ್ಯವಾದ ಸ್ಮೃತಿಗಳು ಮತ್ತು ಕೆಲವು ಕುದೃಷ್ಟಿಗಳು ಇರುವುವು.

ಸರ್ವಾಸ್ತಾ ನಿಷ್ಫಲಾಃ ಪ್ರೇತ್ಯ ತಮೋನಿಷ್ಠಾ ಹಿ ತಾಃ ಸ್ಮೃತಾಃ ।
ಪೂರ್ವಕಲ್ಪೇ ಪ್ರಜಾ ಜಾತಾಃ ಸರ್ವಬಾಧಾವಿವರ್ಜಿತಾಃ ॥ ೩೨ ॥

ಶುದ್ಧಾಂತಃಕರಣಾಃ ಸರ್ವಾಃ ಸ್ವಧರ್ಮಪರಿಪಾಲಕಾಃ ।
ತತಃ ಕಾಲವಶಾತ್ತಾಸಾಂ ರಾಗದ್ವೇಷಾದಿಕೋಽಭವತ್ ॥ ೩೩ ॥

ಅಧರ್ಮೋ ಮುನಿಶಾರ್ದೂಲಾಃ ಸ್ವಧರ್ಮಪ್ರತಿಬಂಧಕಃ ।
ತತಃ ಸಾ ಸಹಜಾ ಸಿದ್ಧಿಸ್ತಾಸಾಂ ನಾತೀವ ಜಾಯತೇ ॥ ೩೪ ॥

ರಜೋಮಾತ್ರಾತ್ಮಿಕಾಸ್ತಾಸಾಂ ಸಿದ್ಧಯೋಽನ್ಯಾಸ್ತದಾಭವನ್ ।
ತಾಸು ಕ್ಷೀಣಾಸ್ವಶೇಷಾಸು ಕಾಲಯೋಗೇನ ತಾಃ ಪುನಃ ॥ ೩೫ ॥

---

೩೨. ಆದರೆ ಅವುಗಳೆಲ್ಲವೂ ನಿಷ್ಫಲವಾದುವುಗಳೆಂದೂ ಅದರಂತೆ ಆಚರಣಶೀಲರಾದವರಿಗೆ ಮರಣಾನಂತರದಲ್ಲಿ ತಮೋನಿಷ್ಠರೂಪವಾದ ದುಷ್ಪರಿಣಾಮವನ್ನು ಕೊಡುವುವೆಂದೂ ಸ್ಮರಿಸಲ್ಪಟ್ಟಿರುತ್ತವೆ. ಆದಿಕಲ್ಪದಲ್ಲಿ ಹುಟ್ಟಿರುವ ಪ್ರಜೆಗಳು ಸಮಸ್ತಬಾಧೆಗಳಿಂದ ವರ್ಜಿತರಾಗಿದ್ದರು.

೩೩. ಮತ್ತು ಶುದ್ಧವಾದ ಅಂತಃಕರಣವುಳ್ಳವರೂ, ಸ್ವಧರ್ಮವನ್ನು ಪರಿಪಾಲಿಸುವವರೂ ಆಗಿದ್ದರು. ತರುವಾಯ ಕೆಲವುಕಾಲ ಕಳೆಯಲಾಗಿ ಆ ಪ್ರಜೆಗಳಿಗೆ ರಾಗ-ದ್ವೇಷ ಮುಂತಾದ ವೃತ್ತಿಗಳು ಜನಿಸಲಾರಂಭಿಸಿದುವು.

೩೪. ಮುನಿವರ್ಯರೇ ! ಸ್ವಧರ್ಮವನ್ನು ಪ್ರತಿಬಂಧಿಸುವ ಅಧರ್ಮವು ಕ್ರಮವಾಗಿ ಪ್ರಾದುರ್ಭವಿಸಿತು. ಆದರಿಂದ ಆ ಪ್ರಜೆಗಳಿಗೆ ಇದ್ದ ಸಹಜವಾದ ತಪಸ್ಸಿದ್ಧಿಯು ಹೆಚ್ಚಾಗಿ ಫಲಿಸುವುದಿಲ್ಲ.

೩೫. ಆಗ ಆ ಪ್ರಜೆಗಳಿಗೆ ಬೇರೆ ವಿಧವಾದ, ರಜೋಗುಣಾಂಶಸ್ವರೂಪವಾದ ಸಿದ್ಧಿಗಳು ಉಂಟಾದುವು. ಮತ್ತೆ ಕೆಲವು ಕಾಲಾನಂತರ ಸಂಪೂರ್ಣವಾಗಿ ಆ ಸಿದ್ಧಿಗಳು ಕ್ಷಯಿಸಿದುವು.

ವಾರ್ತೋಪಾಯಂ ಪುನಶ್ಚಕ್ರುರ್ಹಸ್ತಸಿದ್ಧಿಂ ಚ ಕರ್ಮಜಾಮ್ ।
ತತಸ್ತಾಸಾಂ ವಿಭುರ್ಬ್ರಹ್ಮಾ ಕರ್ಮಾಜೀವಮಕಲ್ಪಯತ್ ॥ ೩೬ ॥

ಸ್ವಾಯಂಭುವೋ ಮನುಃ ಪೂರ್ವಂ ಧರ್ಮಾನ್ ಪ್ರೋವಾಚ ಸರ್ವ
(ದೃಕ್ ।
ಸಾಕ್ಷಾತ್ಪ್ರಜಾಪತೇರ್ಮೂರ್ತಿರ್ನಿಸೃಷ್ಟಾ ಬ್ರಹ್ಮಣೋ ದ್ವಿಜಾಃ ॥ ೩೭ ॥

ಭೃಗ್ವಾದಯಸ್ತದ್ವದನಾಚ್ಛ್ರುತ್ವಾ ಧರ್ಮಾನಥೋಚಿರೇ ।
ಯಜನಂ ಯಾಜನಂ ದಾನಂ ಬ್ರಾಹ್ಮಣಸ್ಯ ಪ್ರತಿಗ್ರಹಃ ॥ ೩೮ ॥

ಅಧ್ಯಾಪನಂ ಚಾಧ್ಯಯನಂ ಷಟ್ ಕರ್ಮಾಣಿ ದ್ವಿಜೋತ್ತಮಾಃ ।
ದಾನಮಧ್ಯಯನಂ ಯಜ್ಞೋ ಧರ್ಮಃ ಕ್ಷತ್ರಿಯವೈಶ್ಯಯೋಃ ॥ ೩೯ ॥

---

೩೬. ಆಗ ಆ ಪ್ರಜೆಗಳು ಕೃಷಿ-ವಾಣಿಜ್ಯ ಮುಂತಾದ ವಾರ್ತೋಪಾಯವನ್ನೂ ಕರ್ಮದಿಂದ ಹುಟ್ಟಿದ ಹಸ್ತಾಧೀನವಾದ ಸಿದ್ಧಿಯನ್ನೂ ಅವಲಂಬಿಸಿದರು. ಸರ್ವ ಶಕ್ತನಾದ ಬ್ರಹ್ಮನು ಆಗ ಅವರಿಗೆ ಕರ್ಮನಿಮಿತ್ತವಾದ ಜೀವನೋಪಾಯವನ್ನು ಕಲ್ಪಿಸಿದನು.

೩೭. ದ್ವಿಜರೆ ! ಬ್ರಹ್ಮನಿಂದ ಸೃಜಿಸಲ್ಪಟ್ಟ ಪ್ರಜಾಪತಿಯ ಅಪರಾವತಾರ ಮೂರ್ತಿಯೂ, ಸರ್ವಸಾಕ್ಷಿಯೂ ಆದ ಸ್ವಾಯಂಭುವಮನುವು ಪೂರ್ವದಲ್ಲಿ ಧರ್ಮಗಳನ್ನು ಉಪದೇಶಿಸಿದನು.

೩೮. ಭೃಗು ಮುಂತಾದ ಮುನಿಗಳು ಮನುವಿನ ಮುಖದಿಂದ ಧರ್ಮಗಳನ್ನು ಶ್ರವಣಮಾಡಿ ಅನಂತರದಲ್ಲಿ ತಾವುಕೂಡ ಧರ್ಮವನ್ನು ಪ್ರವಚನ ಮಾಡಿದರು. ಅವರ ಉಪದೇಶದಲ್ಲಿ ಯಜನ, ಯಾಜನ, ದಾನ ಮತ್ತು ಪ್ರತಿಗ್ರಹಗಳು ಬ್ರಾಹ್ಮಣ ಧರ್ಮಗಳಾಗಿವೆ.

೩೯. ದ್ವಿಜೋತ್ತಮರೆ ! ಹಾಗು ಅಧ್ಯಯನ, ಅಧ್ಯಾಪನಗಳು ಸೇರಿ ಷಟ್ಕರ್ಮಗಳು ಬ್ರಾಹ್ಮಣನಿಗೆ ಕರ್ತವ್ಯಗಳಾಗಿವೆ. ಕ್ಷತ್ರಿಯ ಮತ್ತು ವೈಶ್ಯರಿಗೆ ದಾನ ಅಧ್ಯಯನ, ಮತ್ತು ಯಜ್ಞಗಳು ಧರ್ಮಗಳಾಗಿ ವಿಹಿತವಾಗಿವೆ.

ದಂಡೋ ಯುದ್ಧಂ ಕ್ಷತ್ರಿಯಸ್ಯ ಕೃಷಿರ್ವೈಶ್ಯಸ್ಯ ಶಸ್ಯತೇ ।
ಶುಶ್ರೂಷೈವ ದ್ವಿಜಾತೀನಾಂ ಶೂದ್ರಾಣಾಂ ಧರ್ಮಸಾಧನಮ್ ॥ ೪೦ ॥

ಕಾರುಕರ್ಮ ತಥಾಜೀವಃ ಪಾಕಯಜ್ಞಾದಿ ಧರ್ಮತಃ ।
ತತಃ ಸ್ಥಿತೇಷು ವರ್ಣೇಷು ಸ್ಥಾಪಯಾಮಾಸ ಚಾಶ್ರಮಾನ್ ॥ ೪೧ ॥

ಗೃಹಸ್ಥಂ ಚ ವನಸ್ಥಂ ಚ ಭಿಕ್ಷುಕಂ ಬ್ರಹ್ಮಚಾರಿಣಮ್ ।
ಅಗ್ನಯೋಽತಿಥಿಶುಶ್ರೂಷಾ ಯಜ್ಞೋ ದಾನಂ ಸುರಾರ್ಚನಮ್ ॥೪೨॥

ಗೃಹಸ್ಥಸ್ಯ ಸಮಾಸೇನ ಧರ್ಮೋಽಯಂ ಮುನಿಪುಂಗವಾಃ ।
ಹೋಮೋ ಮೂಲಫಲಾಶಿತ್ವಂ ಸ್ವಾಧ್ಯಾಯಸ್ತಪ ಏವ ಚ ॥ ೪೩ ॥

---

೪೦. ಅವರ ಸ್ವಧರ್ಮಗಳಲ್ಲಿ ಕ್ಷತ್ರಿಯನಿಗೆ ದಂಡ ಮತ್ತು ಯುದ್ಧವೂ ವೈಶ್ಯನಿಗೆ ಕೃಷಿಯೂ ಪ್ರಶಸ್ತ ಧರ್ಮಗಳಾಗಿವೆ. ಶೂದ್ರಜಾತಿಗೆ ದ್ವಿಜರ ಶುಶ್ರೂಷೆ ಯೆಂಬುದು ಧರ್ಮಪ್ರಾಪ್ತಿಗೆ ಸಾಧನವಾದುದು.

೪೧. ಮತ್ತು ಶೂದ್ರನಿಗೆ ಶಿಲ್ಪ ಕರ್ಮವೂ ಜೀವಿಕಾಧರ್ಮವೂ, ಮತ್ತು ಪಾಕಯಜ್ಞಾದಿವಿಧಾನವೂ ಧರ್ಮವಾಗಿರುವುದು. ಈ ರೀತಿಯಾದ ಧಾರ್ಮಿಕವ್ಯವಸ್ಥೆಯಿಂದ ಕೂಡಿ ನಾಲ್ಕು ವರ್ಣಗಳು ಇರಲು ಆಶ್ರಮಗಳನ್ನು ಸ್ಥಾಪಿಸಿದನು.

೪೨. ಆ ಆಶ್ರಮಗಳು ಗೃಹಸ್ಥ, ವನಸ್ಥ, ಭಿಕ್ಷು, ಮತ್ತು ಬ್ರಹ್ಮಚಾರಿ ಎಂದು ನಾಲ್ಕು ವಿಧಗಳಾಗಿರುವುವು. ಮೊದಲನೆಯ ಗೃಹಸ್ಥಧರ್ಮಕ್ಕೆ ಅಗ್ನಿಹೋತ್ರ ಅತಿಥಿಶುಶ್ರೂಷೆ, ಯಜ್ಞ, ದಾನ ಮತ್ತು ದೇವಾರ್ಚನೆಗಳು ಸೇರಿಕೊಂಡಿರುವುವು.

೪೩. ಮುನಿಶ್ರೇಷ್ಠರೇ ! ಹಿಂದೆ ಹೇಳಿದ ಅಗ್ನಿಹೋತ್ರಾದಿಗಳು ಸಂಗ್ರಹವಾಗಿ ತಿಳಿಸಿರುವ ಗೃಹಸ್ಥ ಆಶ್ರಮಿಯ ಮುಖ್ಯ ಧರ್ಮಗಳಾಗಿವೆ. ಹೋಮ, ಕಂದ ಮೂಲ ಭಕ್ಷಣ, ವೇದಾಧ್ಯಯನ ಮತ್ತು ತಪಶ್ಚರ್ಯೆ ಮೊದಲಾದುವು ವನಸ್ಥನ ಧರ್ಮಗಳು.

ಸಂವಿಭಾಗೋ ಯಥಾನ್ಯಾಯಂ ಧರ್ಮೋಽಯಂ ವನವಾಸಿನಾಮ್ ।
ಭೈಕ್ಷಾಶನಂ ಚ ಮೌನಿತ್ವಂ ತಪೋ ಧ್ಯಾನಂ ವಿಶೇಷತಃ ॥ ೪೪ ॥

ಸಮ್ಯಜ್ಞಾನಂ ಚ ವೈರಾಗ್ಯಂ ಧರ್ಮೋಽಯಂ ಭಿಕ್ಷುಕೇ ಮತಃ ।
ಭಿಕ್ಷಾಚರ್ಯಾ ಚ ಶುಶ್ರೂಷಾ ಗುರೋಃ ಸ್ವಾಧ್ಯಾಯ ಏವ ಚ ॥ ೪೫ ॥

ಸಂಧ್ಯಾಕರ್ಮಾಗ್ನಿಕಾರ್ಯಂ ಚ ಧರ್ಮೋಽಯಂ ಬ್ರಹ್ಮಚಾರಿಣಾಮ್ ।
ಬ್ರಹ್ಮಚಾರಿವನಸ್ಥಾನಾಂ ಭಿಕ್ಷುಕಾಣಾಂ ದ್ವಿಜೋತ್ತಮಾಃ ॥ ೪೬ ॥

ಸಾಧಾರಣಂ ಬ್ರಹ್ಮಚರ್ಯಂ ಪ್ರೋವಾಚ ಕಮಲೋದ್ಭವಃ ।
ಋತುಕಾಲಾಭಿಗಾಮಿತ್ವಂ ಸ್ವದಾರೇಷು ನ ಚಾನ್ಯತಃ ॥ ೪೭ ॥

---

೪೪. ಮತ್ತು ನ್ಯಾಯಾನುಸಾರವಾಗಿ ದ್ರವ್ಯತ್ಯಾಗವು ವನವಾಸಿಯ ಧರ್ಮವಾಗಿರುವುದು. ಮುಂದೆ ಭಿಕ್ಷು ಆಶ್ರಮಿಯ ಧರ್ಮಗಳಲ್ಲಿ ಭೈಕ್ಷಾಶನ, ಮೌನ, ತಪಸ್ಸು ಮತ್ತು ಧ್ಯಾನ ಮುಂತಾದುವು ವಿಶೇಷ ಧರ್ಮಗಳಾಗಿವೆ.

೪೫. ಮತ್ತು ಯಥಾರ್ಥತತ್ತ್ವಜ್ಞಾನ ವೈರಾಗ್ಯಗಳು ಭಿಕ್ಷು ಆಶ್ರಮಿಯ ಧರ್ಮಗಳೆಂದು ಶಾಸ್ತ್ರಕಾರರ ಮತವು. ಭಿಕ್ಷಾಚರಣೆ ಗುರುಶುಶ್ರೂಷೆ ಮತ್ತು ವೇದಾಧ್ಯಯನಗಳು ಬ್ರಹ್ಮಚಾರಿಯ ಮುಖ್ಯಧರ್ಮಗಳು.

೪೬. ಹಾಗೆ ಸಂಧ್ಯಾಕರ್ಮ, ಅಗ್ನಿಕಾರ್ಯಗಳು ಬ್ರಹ್ಮಚಾರಿ ಧರ್ಮಗಳು. ದ್ವಿಜೋತ್ತಮರೇ ! ಭಿಕ್ಷು, ವಾನಪ್ರಸ್ಥ ಮತ್ತು ಬ್ರಹ್ಮಚಾರಿ ಈ ಮೂರು ಆಶ್ರಮಗಳಿಗೆ ಕೆಲವು ಸಾಮಾನ್ಯ ಧರ್ಮಗಳಿವೆ.

೪೭. ನಾಭಿ ಕಮಲದಲ್ಲಿ ಹುಟ್ಟಿದ ಬ್ರಹ್ಮನು ಬ್ರಹ್ಮಚರ್ಯವನ್ನು ಮೂರು ಆಶ್ರಮಿಗಳಿಗೆ ಸಾಮಾನ್ಯ ಧರ್ಮವನ್ನಾಗಿ ಹೇಳಿರುವನು. ಹಾಗೆ ಗೃಹಸ್ಥನಿಗೆ ಪರಸ್ತ್ರೀಯನ್ನು ವರ್ಜಿಸಿ ಸ್ವಭಾರ್ಯೆಯಲ್ಲಿ ಋತುಕಾಲದಲ್ಲಿ ಮಾತ್ರ ಸಂಪರ್ಕಹೊಂದುವುದು ಬ್ರಹ್ಮಚರ್ಯರೂಪವಾದುದು.

ಪರ್ವವರ್ಜಂ ಗೃಹಸ್ಥಸ್ಯ ಬ್ರಹ್ಮಚರ್ಯಮುದಾಹೃತಮ್ ।
ಆಗರ್ಭಧಾರಣಾದಾಜ್ಞಾ ಕಾರ್ಯಾ ತೇನಾಪ್ರಮಾದತಃ ॥ ೪೮ ॥

ಅಕುರ್ವಾಣಸ್ತು ವಿಪ್ರೇಂದ್ರಾ ಭ್ರೂಣಹಾ ತೂಪಜಾಯತೇ ।
ವೇದಾಭ್ಯಾಸೋಽನ್ವಹಂ ಶಕ್ತ್ಯಾ ಶ್ರಾದ್ಧಂ ಚಾತಿಥಿಪೂಜನಮ್ ॥ ೪೯ ॥

ಗೃಹಸ್ಥಸ್ಯ ಪರೋ ಧರ್ಮೋ ದೇವತಾಭ್ಯರ್ಚನಂ ತಥಾ ।
ವೈವಾಹ್ಯಮಗ್ನಿಮಿಂಧೀತ ಸಾಯಂ ಪ್ರಾತರ್ಯಥಾವಿಧಿ ॥ ೫೦ ॥

ದೇಶಾಂತರಗತೋ ವಾಥ ಮೃತಪತ್ನೀಕ ಏವ ಚ ।
ತ್ರಯಾಣಾಮಾಶ್ರಮಾಣಾಂ ತು ಗೃಹಸ್ಥೋ ಯೋನಿರುಚ್ಯತೇ ॥ ೫೧ ॥

---

೪೮. ಸ್ತ್ರೀಸಂಗವನ್ನು ಮಾಡಲು ಪರ್ವಕಾಲವನ್ನು ವರ್ಜಿಸಬೇಕು. ಗರ್ಭಧಾರಣವಾಗುವವರೆಗೂ, ನಿಯತಕಾಲದಲ್ಲಿ ಪ್ರಮಾದಹೊಂದದೆ ಪತ್ನೀ ಸಮಾಗಮ ರೂಪವಾದ ಕರ್ಮದಲ್ಲಿ ಬ್ರಹ್ಮದೇವನ ಆಜ್ಞೆಯನ್ನು ಆಚರಿಸಬೇಕು.

೪೯. ವಿಪ್ರೇಂದ್ರರೆ ! ಆ ಧರ್ಮವನ್ನು ಬಿಟ್ಟ ಗೃಹಸ್ಥನು ಭ್ರೂಣಹತ್ಯಾ ದೋಷಕ್ಕೆ ಭಾಗಿಯಾಗುತ್ತಾನೆ. ಮತ್ತು ಪ್ರತಿನಿತ್ಯವೂ ಯಥಾಶಕ್ತಿಯಾಗಿ ವೇದಾಭ್ಯಾಸ, ಶ್ರಾದ್ಧ, ಅತಿಥಿ ಪೂಜೆಗಳು ಗೃಹಸ್ಥನಿಗೆ ಮುಖ್ಯವಾದ ಕರ್ತವ್ಯಗಳು.

೫೦. ಮತ್ತು ಗೃಹಸ್ಥನಿಗೆ ನಿತ್ಯದೇವತಾರ್ಚನೆಯು ಮುಖ್ಯಧರ್ಮವಾಗಿರುವುದು. ಗೃಹಸ್ಥನು ವಿವಾಹಾಗ್ನಿಯಲ್ಲಿ ಸಾಯಂ-ಪ್ರಾತಃಕಾಲಗಳಲ್ಲಿ ವಿಧಿಯನ್ನು ಅನುಸರಿಸಿ ಔಪಾಸನ ಹೋಮವನ್ನು ಆಚರಿಸಬೇಕು.

೫೧. ದೇಶಾಂತರಕ್ಕೆ ಹೋದವನಾಗಲಿ ಪತ್ನಿಯು ಮೃತಳಾಗಿ ವಿಧುರನಾಗಿರುವವನಾಗಲಿ ಸಾಯಂ-ಪ್ರಾತಃಕಾಲಗಳಲ್ಲಿ ಔಪಾಸನ ಹೋಮವನ್ನು ಆಚರಿಸಬೇಕು. ಮಿಕ್ಕ ಮೂರು ಆಶ್ರಮಗಳಿಗೆ ಗೃಹಸ್ಥನು ಮುಖ್ಯ ಕಾರಣನಾಗಿರುವನು.

ಅನ್ಯೇ ತಮುಪಜೀವಂತಿ ತಸ್ಮಾಚ್ಛ್ರೇಯಾನ್ ಗೃಹಾಶ್ರಮೀ ।
ಐಕಾಶ್ರಮ್ಯಂ ಗೃಹಸ್ಥಸ್ಯ ಚತುರ್ಣಾಂ ಶ್ರುತಿದರ್ಶನಾತ್ ॥ ೫೨ ॥

ತಸ್ಮಾದ್ಗಾರ್ಹಸ್ಥ್ಯಮೇವೈಕಂ ವಿಜ್ಞೇಯಂ ಧರ್ಮಸಾಧನಮ್ ।
ಪರಿತ್ಯಜೇದರ್ಥಕಾಮೌ ಯೌ ಸ್ಯಾತಾಂ ಧರ್ಮವರ್ಜಿತೌ ॥ ೫೩ ॥

ಸರ್ವಲೋಕವಿರುದ್ಧಂ ಚ ಧರ್ಮಮಪ್ಯಾಚರೇನ್ನ ತು ।
ಧರ್ಮಾತ್ಸಂಜಾಯತೇ ಹ್ಯರ್ಥೋ ಧರ್ಮಾತ್ಕಾಮೋಽಭಿಜಾಯತೇ ॥

ಧರ್ಮ ಏವಾಪವರ್ಗಾಯ ತಸ್ಮಾದ್ಧರ್ಮಂ ಸಮಾಶ್ರಯೇತ್ ।
ಧರ್ಮಶ್ಚಾರ್ಥಶ್ಚ ಕಾಮಶ್ಚ ತ್ರಿವರ್ಗಸ್ತ್ರಿಗುಣೋ ಮತಃ ॥ ೫೫ ॥

---

೫೨. ಮಿಕ್ಕ ಆಶ್ರಮಿಗಳು ಗೃಹಸ್ಥನನ್ನು ಉಪಜೀವಿಸಿಕೊಂಡಿರುವರು. ಆದುದರಿಂದ ಗೃಹಾಶ್ರಮಿಯು ಶ್ರೇಷ್ಠನಾಗಿರುನು. ನಾಲ್ಕು ಆಶ್ರಮಗಳಲ್ಲಿ ಗೃಹಸ್ಥನೆಂಬ ಏಕಾಶ್ರಮ್ಯವು ಬಲು ಮುಖ್ಯವಾದುದೆಂದು ಶ್ರುತಿಗೆ ಸಮ್ಮತವಾಗಿರುವುದು.

೫೩. ಆದುದರಿಂದ ಗೃಹಸ್ಥಾಶ್ರಮವು ಒಂದೇ ಧರ್ಮಕ್ಕೆ ಸಾಧನವೆಂದು ತಿಳಿಯಬೇಕು. ಆ ಆಶ್ರಮದಲ್ಲಿ ಧರ್ಮದಿಂದ ವರ್ಜಿತವಾದ ಅರ್ಥ-ಕಾಮಗಳನ್ನು ದೂರವಾಗಿ ತ್ಯಜಿಸಬೇಕು.

೫೪. ಧರ್ಮವಾಗಿದ್ದರೂ ಸರ್ವಲೋಕವಿರುದ್ಧವಾದುದನ್ನು ಆಚರಿಸಬಾರದು. ಅಂತಹ ಉತ್ತಮ ಧರ್ಮದಿಂದ ಅರ್ಥವು ಜನಿಸುತ್ತದೆ. ಮತ್ತು ಅರ್ಥದಿಂದ ಕಾಮವು ಉದಯಿಸುತ್ತದೆ.

೫೫. ಧರ್ಮವೇ ಅಪವರ್ಗಕ್ಕೆ ಸಾಧನವಾಗಿರುವುದು. ಆದ್ದರಿಂದ ಧರ್ಮವನ್ನು ತಪ್ಪದೇ ಆಚರಿಸಬೇಕು. ಧರ್ಮ-ಅರ್ಥ-ಕಾಮ ಎಂಬ ತ್ರಿವರ್ಗವು ಗುಣತ್ರಯಸಮಷ್ಟಿಮಯವಾದುದೆಂದು ತಿಳಿಯಬೇಕು.

ಸತ್ತ್ವಂ ರಜಸ್ತಮಶ್ಚೇತಿ ತಸ್ಮಾದ್ಧರ್ಮಂ ಸಮಾಶ್ರಯೇತ್ ।
ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ॥ ೫೬ ॥

ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ।
ಯಸ್ಮಿನ್ ಧರ್ಮಸಮಾಯುಕ್ತೌ ಹ್ಯರ್ಥಕಾಮೌ ವ್ಯವಸ್ಥಿತೌ ॥ ೫೭ ॥

ಇಹ ಲೋಕೇ ಸುಖೀ ಭೂತ್ವಾ ಪ್ರೇತ್ಯಾನಂತ್ಯಾಯ ಕಲ್ಪತೇ ।
ಧರ್ಮಾತ್ಸಂಜಾಯತೇ ಮೋಕ್ಷೋ ಹ್ಯರ್ಥಾತ್ಕಾಮೋಽಭಿಜಾಯತೇ ॥

ಏವಂ ಸಾಧನಸಾಧ್ಯತ್ವಂ ಚಾತುರ್ವಿಧ್ಯೇ ಪ್ರದರ್ಶಿತಮ್ ।
ಯ ಏವಂ ವೇದ ಧರ್ಮಾರ್ಥಕಾಮಮೋಕ್ಷಸ್ಯ ಮಾನವಃ ॥ ೫೯ ॥

---

೫೬. ಧರ್ಮದ ತಿರುಳಾದ ಆ ಗುಣಗಳು ಸತ್ತ್ವ-ರಜ ಮತ್ತು ತಮೋಗುಣಗಳೆಂದು ಪ್ರಸಿದ್ಧವಾಗಿವೆ. ಆದ್ದರಿಂದ ಧರ್ಮವನ್ನು ಅನುಷ್ಠಾನಮಾಡಬೇಕು. ಸತ್ತ್ವಗುಣವೃತ್ತಿಯುಳ್ಳವರು ಊರ್ಧ್ವಲೋಕಗತಿಯನ್ನು ಹೊಂದುತ್ತಾರೆ. ರಜೋಗುಣದ ವೃತ್ತಿಯುಳ್ಳವರು ಮಧ್ಯವರ್ತಿಗಳಾಗುವರು.

೫೭. ತಮೋಗುಣ ಪ್ರಧಾನರಾಗಿ ಜಘನ್ಯಗುಣವೃತ್ತಿಯನ್ನು ಅವಲಂಬಿಸಿದವರು ಅಧೋಗತಿಯನ್ನು ಹೊಂದುವರು. ಧರ್ಮದಿಂದ ಕೂಡಿದ ಅರ್ಥ-ಕಾಮಗಳು ಒಬ್ಬನಲ್ಲಿ ವ್ಯವಸ್ಥಿತವಾಗಿರಬಹುದು.

೫೮. ಅಂತಪ ಮಾನವನು ಇಹಲೋಕದಲ್ಲಿ ಸುಖಭೋಗಿಯಾಗಿ ಮರಣಾನಂತರದಲ್ಲಿ ಅನಂತ ಉತ್ತಮಲೋಕವನ್ನು ಹೊಂದುತ್ತಾನೆ. ಧರ್ಮದಿಂದ ಮುಕ್ತಿಯು ಲಭಿಸುವುದು. ಅರ್ಥದಿಂದ ಕಾಮಪುರುಷಾರ್ಥವು ಜನಿಸುವುದು.

೫೯. ಹೀಗೆ ನಾಲ್ಕು ಪುರುಷಾರ್ಥಗಳಲ್ಲಿ ಪರಸ್ಪರ ಸಾಧನ ಸಾಧ್ಯಭಾವವನ್ನು ತೋರಿಸಿದೆ. ಮಾನವನು ಧರ್ಮ–ಅರ್ಥ–ಕಾಮ–ಮೋಕ್ಷಗಳ ಚಾತುರ್ವಿಧ್ಯವನ್ನು ಅವಶ್ಯವಾಗಿ ಅರಿಯಬೇಕು.

ಮಾಹಾತ್ಮ್ಯಂ ಚಾನುತಿಷ್ಠೇತ ಸ ಚಾನಂತ್ಯಾಯ ಕಲ್ಪತೇ ।
ತಸ್ಮಾದರ್ಥಂ ಚ ಕಾಮಂ ಚ ತ್ಯಕ್ತ್ವಾ ಧರ್ಮಂ ಸಮಾಶ್ರಯೇತ್ ॥೬೦ ॥

ಧರ್ಮಾತ್ಸಂಜಾಯತೇ ಸರ್ವಮಿತ್ಯಾಹುರ್ಬ್ರಹ್ಮವಾದಿನಃ
ಧರ್ಮೇಣ ಧಾರ್ಯತೇ ಸರ್ವಂ ಜಗತ್ಸ್ಥಾವರಜಂಗಮಮ್ ॥ ೬೧ ॥

ಅನಾದಿನಿಧನಾ ಶಕ್ತಿಃ ಸೈಷಾ ಬ್ರಾಹ್ಮೀ ದ್ವಿಜೋತ್ತಮಾಃ ।
ಕರ್ಮಣಾ ಪ್ರಾಪ್ಯತೇ ಧರ್ಮೋ ಜ್ಞಾನೇನ ಚ ನ ಸಂಶಯಃ ॥ ೬೨ ॥

ತಸ್ಮಾಜ್ಜ್ಞಾನೇನ ಸಹಿತಂ ಕರ್ಮಯೋಗಂ ಸಮಾಶ್ರಯೇತ್ ।
ಪ್ರವೃತ್ತಂ ಚ ನಿವೃತ್ತಂ ಚ ದ್ವಿವಿಧಂ ಕರ್ಮ ವೈದಿಕಮ್ ॥ ೬೩ ॥

---

೬೦. ಮತ್ತು ಇವುಗಳ ಮಾಹಾತ್ಮ್ಯವನ್ನು ಅರಿತು ಶ್ರದ್ಧೆಯಿಂದ ಅನುಷ್ಠಾನ ಮಾಡಬೇಕು. ಅದರಿಂದ ಅನಂತ ಫಲಪ್ರಾಪ್ತಿಗೆ ಭಾಗಿಯಾಗುವನು. ಆದ್ದರಿಂದ ಅರ್ಥ, ಕಾಮಗಳನ್ನು ವರ್ಜಿಸಿ ಧರ್ಮವನ್ನು ಮಾತ್ರ ಆಶ್ರಯಿಸಬೇಕು.

೬೧. ಬ್ರಹ್ಮವಾದಿಗಳು ಜಗತ್ತಿನಲ್ಲಿ ಎಲ್ಲವೂ ಧರ್ಮದಿಂದ ಜನಿಸುವುದೆಂದು ಪ್ರತಿಜ್ಞೆ ಮಾಡುವರು. ಸ್ಥಾವರ, ಜಂಗಮರೂಪವಾದ ಸಮಸ್ತ ಭುವನವು ಧರ್ಮದಿಂದ ಸ್ಥಿರವಾಗಿ ಧರಿಸಲ್ಪಟ್ಟಿರುವುದು.

೬೨. ದ್ವಿಜೋತ್ತಮರೇ! ಧರ್ಮಸ್ಥಿತಿಯೆಂಬುದು ಆದಿ, ನಿಧನಗಳಿಲ್ಲದ ಬ್ರಹ್ಮನ ಶಕ್ತಿಯು. ಕರ್ಮ ಮತ್ತು ಜ್ಞಾನಗಳಿಂದ ಧರ್ಮವು ಲಭಿಸುತ್ತದೆ. ಈ ವಿಷಯದಲ್ಲಿ ಸಂದೇಹವಿಲ್ಲ.

೬೩. ಆದ್ದರಿಂದ ಜ್ಞಾನಯೋಗದಿಂದ ಸಹಿತವಾಗಿ ಕರ್ಮಯೋಗವನ್ನು ಆಶ್ರಯಿಸಬೇಕು. ವೈದಿಕವಾದ ಕರ್ಮಜಾಲವು ಪ್ರವೃತ್ತಿಕರ್ಮ, ನಿವೃತ್ತಿ ಕರ್ಮವೆಂದು ಎರಡು ಪ್ರಭೇದಗಳನ್ನು ಹೊಂದಿರುವುದು.

ಜ್ಞಾನಪೂರ್ವಂ ನಿವೃತ್ತಂ ಸ್ಯಾತ್ಪ್ರವೃತ್ತಂ ಯದತೋಽನ್ಯಥಾ ।
ನಿವೃತ್ತಂ ಸೇವಮಾನಸ್ತು ಯಾತಿ ತತ್ಪರಮಂ ಪದಮ್ ॥ ೬೪ ॥

ತಸ್ಮಾನ್ನಿವೃತ್ತಂ ಸಂಸೇವ್ಯಮನ್ಯಥಾ ಸಂಸರೇತ್ಪುನಃ ।
ಕ್ಷಮಾ ದಮೋ ದಯಾ ದಾನಮಲೋಭಸ್ತ್ಯಾಗ ಏವ ಚ ॥ ೬೫ ॥

ಆರ್ಜವಂ ಚಾನಸೂಯಾ ಚ ತೀರ್ಥಾನುಸರಣಂ ತಥಾ ।
ಸತ್ಯಂ ಸಂತೋಷಮಾಸ್ತಿಕ್ಯಂ ಶ್ರದ್ಧಾ ಚೇಂದ್ರಿಯನಿಗ್ರಹಃ ॥ ೬೬ ॥

ದೇವತಾಭ್ಯರ್ಚನಂ ಪೂಜಾ ಬ್ರಾಹ್ಮಣಾನಾಂ ವಿಶೇಷತಃ ।
ಅಹಿಂಸಾ ಪ್ರಿಯವಾದಿತ್ವಮಪೈಶುನ್ಯಮಕಲ್ಕತಾ ॥ ೬೭ ॥

---

೬೪. ಜ್ಞಾನಪೂರ್ವಕವಾಗಿರುವ ಕರ್ಮವು ನಿವೃತ್ತಕರ್ಮ ರೂಪವೂ ಅದಕ್ಕೆ ವ್ಯತಿರಿಕ್ತವಾದ ಕರ್ಮವು ಪ್ರವೃತ್ತಕರ್ಮ ರೂಪವೂ ಆಗಿದೆ. ಅವುಗಳಲ್ಲಿ ನಿವೃತ್ತ ಕರ್ಮವನ್ನು ಆಚರಿಸಿದ ಮಾನವನು ಪರಮಪದವಿಯನ್ನು ಹೊಂದುತ್ತಾನೆ.

೬೫. ಆದ್ದರಿಂದ ನಿವೃತ್ತಿಕರ್ಮವನ್ನು ಸೇವಿಸಬೇಕು. ಹಾಗಿಲ್ಲದಿದ್ದರೆ ಮತ್ತೆ ಮತ್ತೆ ಸಂಸಾರತಾಪವನ್ನು ಅನುಭವಿಸುವನು. ಸರ್ವ ಪ್ರಜೆಗಳಿಗೆ ನಿವೃತ್ತಿ ಪ್ರಧಾನವಾದ ಧರ್ಮಗಳಲ್ಲಿ ಇವು ಪ್ರಧಾನವಾಗಿವೆ. ತಾಳ್ಮೆ, ಸದಭ್ಯಾಸ, ಕರುಣೆ, ದಾನಶೀಲ, ಲೋಭವರ್ಜನ, ಅಭಿಮಾನತ್ಯಾಗಗಳು ನಿವೃತ್ತ ಧರ್ಮಗಳಲ್ಲಿ ಸೇರಿವೆ.

೬೬. ಕಾಯ, ವಾಕ್, ಮಾನಸಗಳಲ್ಲಿ ಏಕರೂಪವೆಂಬ ಆರ್ಜವ, ಅಸೂಯಾ ತ್ಯಾಗ, ತೀರ್ಥಾಟನ, ಸತ್ಯವಚನ, ಸಂತೋಷ, ಆಸ್ತಿಕ್ಯ, ಸನ್ಮಾರ್ಗದಲ್ಲಿ ವಿಶ್ವಾಸ ಮತ್ತು ಇಂದ್ರಿಯನಿಗ್ರಹಗಳು ಆ ಧರ್ಮಗಳ ಗುಂಪಿಗೆ ಸೇರಿಕೊಂಡಿರುವುವು.

೬೭. ದೇವತಾರ್ಚನೆ, ವಿಶೇಷವಾಗಿ ಬ್ರಾಹ್ಮಣಪೂಜೆ, ಅಹಿಂಸೆ, ಪ್ರಿಯವಚನ ವ್ರತ, ಚಾಡಿಕೋರತನವರ್ಜನ ಮತ್ತು ವಿಶೇಷವಾದ ವಾಚಾಲತನಶೂನ್ಯತ್ವ ಇವುಗಳು ಸಾಮಾನ್ಯ ಧರ್ಮಗಳ ಗುಂಪಿನಲ್ಲಿ ಗಣಿಸಲ್ಪಟ್ಟಿವೆ.

ಸಾಮಾಸಿಕೆನಿಮಂ ಧರ್ಮಂ ಚಾತುರ್ವರ್ಣ್ಯೇಽಬ್ರವೀನ್ಮನುಃ ।
ಪ್ರಾಜಾಪತ್ಯಂ ಬ್ರಾಹ್ಮಣಾನಾಂ ಸ್ಮೃತಂ ಸ್ಥಾನಂ ಕ್ರಿಯಾವತಾಮ್ ॥

ಸ್ಥಾನಮೈಂದ್ರಂ ಕ್ಷತ್ರಿಯಾಣಾಂ ಸಂಗ್ರಾಮೇಷ್ವಪಲಾಯಿನಾಮ್ ।
ವೈಶ್ಯಾನಾಂ ಮಾರುತಂ ಸ್ಥಾನಂ ಸ್ವಧರ್ಮಮನುವರ್ತತಾಮ್ ॥ ೧೯ ॥

ಗಾಂಧರ್ವಂ ಶೂದ್ರಜಾತೀನಾಂ ಪರಿಚಾರೇಣ ವರ್ತತಾಮ್ ।
ಅಷ್ಟಾಶೀತಿಸಹಸ್ರಾಣಾಮೃಷೀಣಾಮೂರ್ಧ್ವರೇತಸಾಮ್ ॥ ೨೦ ॥

ಸ್ಮೃತಂ ತೇಷಾಂ ತು ಯತ್ ಸ್ಥಾನಂ ತದೇವ ಗುರುವಾಸಿನಾಮ್ ।
ಸಪ್ತರ್ಷೀಣಾಂ ತು ಯತ್ ಸ್ಥಾನಂ ಸ್ಮೃತಂ ತದ್ವೈವನೌಕಸಾಮ್ ॥೨೧॥

---

೧೮. ಧರ್ಮವ್ಯವಸ್ಥಾಪಕನಾದ ಮನುವು ಇವುಗಳನ್ನು ಚಾತುರ್ವರ್ಣ್ಯದಲ್ಲಿ ಸಾಮಾನ್ಯ ಧರ್ಮರಾಶಿಯನ್ನಾಗಿ ವರ್ಣಿಸಿರುವನು. ವಿಹಿತ ಕರ್ಮಾಚರಣದಲ್ಲಿ ನಿರತರಾದ ಬ್ರಾಹ್ಮಣರಿಗೆ ಪ್ರಾಜಾಪತ್ಯಸ್ಥಾನ ಪ್ರಾಪ್ತಿಯು ಫಲವೆಂದು ಸ್ಮರಿಸಲ್ಪಟ್ಟಿದೆ.

೧೯. ಯುದ್ಧದಿಂದ ಹಿಂತಿರುಗದ ರೀತಿಯಲ್ಲಿ ಸ್ವಧರ್ಮವನ್ನು ಆಚರಿಸಿದ ಕ್ಷತ್ರಿಯರಿಗೆ ಇಂದ್ರಪದವು ಲಭ್ಯವಾಗುವುದು. ಸ್ವಧರ್ಮವನ್ನು ಆಚರಿಸಿದ ವೈಶ್ಯರಿಗೆ ಮಾರುತಪದವು ಲಭ್ಯವಾಗಿದೆ.

೨೦. ತ್ರೈವರ್ಣಿಕರ ಶುಶ್ರೂಷೆಯೆಂಬ ಸ್ವಧರ್ಮದಿಂದ ವರ್ತಿಸುವ ಶೂದ್ರರಿಗೆ ಗಂಧರ್ವಸ್ಥಾನವು ಲಭ್ಯವಾಗುವುದು. ಊರ್ಧ್ವರೇತಸ್ಸುಗಳಾದ ಎಂಭತ್ತೆಂಟುಸಹಸ್ರ ಮಹಾಮುನಿಗಳು ವಾಸಿಸುವ ಸರ್ವೋತ್ಕೃಷ್ಟ ಸ್ಥಾನವು ಒಂದಿರುವುದು.

೨೧. ಗುರುಕುಲದಲ್ಲಿ ವಾಸಿಸುವ ಸ್ವಧರ್ಮ ರಕ್ಷಕರಾದ ಬ್ರಹ್ಮಚಾರಿಗಳಿಗೆ ಆ ಸ್ಥಾನವು ಲಭ್ಯವೆಂದು ಸ್ಮರಿಸಲ್ಪಟ್ಟಿದೆ. ಸಪ್ತರ್ಷಿಗಳ ಪವಿತ್ರ ಸ್ಥಾನವು ವಾನಪ್ರಸ್ಥ ಧರ್ಮಾವಲಂಬಿಗಳಿಗೆ ಪ್ರಾಪ್ಯವು.

**ಪ್ರಾಜಾಪತ್ಯಂ ಗೃಹಸ್ಥಾನಾಂ ಸ್ಥಾನಮುಕ್ತಂ ಸ್ವಯಂಭುವಾ ।**
**ಯತೀನಾಂ ಜಿತಚಿತ್ತಾನಾಂ ನ್ಯಾಸಿನಾಮೂರ್ಧ್ವರೇತಸಾಮ್ ॥ ೭೨॥**

**ಹೈರಣ್ಯಗರ್ಭಂ ತತ್ ಸ್ಥಾನಂ ಯಸ್ಮಾನ್ನಾವರ್ತತೇ ಪುನಃ ।**
**ಯೋಗಿನಾಮಮೃತಂ ಸ್ಥಾನಂ ವ್ಯೋಮಾಖ್ಯಂ ಪರಮಕ್ಷರಮ್ ॥ ೭೩ ॥**

**ಆನಂದಮೈಶ್ವರಂ ಧಾಮ ಸಾ ಕಾಷ್ಠಾ ಸಾ ಪರಾ ಗತಿಃ ।**
**ಋಷಯ ಊಚುಃ :—**
**ಭಗವನ್ ದೇವತಾರಿಘ್ನ ಹಿರಣ್ಯಾಕ್ಷನಿಷೂದನ ॥ ೭೪ ॥**

**ಚತ್ವಾರೋ ಹ್ಯಾಶ್ರಮಾಃ ಪ್ರೋಕ್ತಾ ಯೋಗಿನಾಮೇಕ ಉಚ್ಯತೇ ।**
**ಕೂರ್ಮ ಉವಾಚ :—**
**ಸರ್ವಕರ್ಮಾಣಿ ಸನ್ನ್ಯಸ್ಯ ಸಮಾಧಿಮಚಲಂ ಶ್ರಿತಃ ॥ ೭೫ ॥**

---

೭೨. ಸ್ವಕರ್ಮನಿರತರಾದ ಗೃಹಸ್ಥರಿಗೆ ಪ್ರಾಜಾಪತ್ಯಸ್ಥಾನವು ಫಲವೆಂದು ಬ್ರಹ್ಮನಿಂದ ಹೇಳಲ್ಪಟ್ಟಿದೆ. ಚಿತ್ತವನ್ನು ಜಯಿಸಿ ಸನ್ಯಾಸವನ್ನು ಸ್ವೀಕರಿಸಿದ ಊರ್ಧ್ವರೇತರಾದ ಯತಿಗಳಿಗೆ ಒಂದು ಉತ್ತಮ ಪದವು ಪ್ರಾಪ್ಯವಾಗಿದೆ.

೭೩. ಆ ಉತ್ತಮವಾದ ಪದವು ಹಿರಣ್ಯಗರ್ಭಸ್ಥಾನವು. ಅದನ್ನು ಹೊಂದಿದವನು ಮತ್ತೆ ಸಂಸಾರ ಮಾರ್ಗಕ್ಕೆ ಆವರ್ತನವನ್ನು ಹೊಂದುವುದಿಲ್ಲ. ಯೋಗಿಗಳಿಗೆ ವ್ಯೋಮ ಎಂಬ ಹೆಸರುಳ್ಳ ಉತ್ತಮವೂ, ಶಾಶ್ವತವೂ ಆದ ಅಮೃತ ಸ್ಥಾನವು ಲಭಿಸುವುದು.

೭೪. ಆ ಸ್ಥಾನವು ಆನಂದಮಯವಾದುದು. ಅದು ಈಶ್ವರರೂಪವಾದ ಸ್ಥಾನವು. ಅದು ಎಲ್ಲಕ್ಕೂ ಎಲ್ಲೆಯು. ಅದೇ ಸರ್ವೋತ್ತಮವಾದ ಗಮ್ಯಸ್ಥಾನವು. ಇದನ್ನು ಕೇಳಿದ ಮುನಿಗಳು, ಭಗವಂತನೆ! ದೇವಶತ್ರುಗಳನ್ನು ನಿಗ್ರಹಿಸಿದವನೆ! ಹಿರಣ್ಯಾಕ್ಷನನ್ನು ಕೊಂದವನೆ! ಎಂದು ಸಂಬೋಧಿಸಿ ಮತ್ತೆ ಹೀಗೆಂದರು.

೭೫. ನಿನ್ನಿಂದ ನಾಲ್ಕು ಆಶ್ರಮಗಳು ಹೇಳಲ್ಪಟ್ಟಿವೆ. ಆದರೆ ಯೋಗಿಗಳಿಗೆ ಮಾತ್ರ ಒಂದು ಧರ್ಮವು ಹೇಳಲ್ಪಟ್ಟಿದೆ. ಕೂರ್ಮಮೂರ್ತಿಯು ಇಂತೆಂದನು :— ಯೋಗಿಯು ಸರ್ವ ಕರ್ಮಗಳನ್ನು ಸನ್ಯಾಸಮಾಡಿ ಸ್ಥಿರವಾದ ಸಮಾಧಿ ಸ್ಥಿತಿಯನ್ನು ಆಶ್ರಯಿಸುವನು.

ಯ ಆಸ್ತೇ ನಿಶ್ಚಲೋ ಯೋಗೀ ಸ ಸನ್ಯಾಸೀ ಚ ಪಂಚಮಃ ।
ಸರ್ವೇಷಾಮಾಶ್ರಮಾಣಾಂ ತು ದ್ವೈವಿಧ್ಯಂ ಶ್ರುತಿದರ್ಶಿತಮ್ ॥ ೭೬ ॥

ಬ್ರಹ್ಮಚಾರ್ಯುಪಕುರ್ವಾಣೋ ನೈಷ್ಠಿಕೋ ಬ್ರಹ್ಮತತ್ಪರಃ ।
ಯೋಽಧೀತ್ಯ ವಿಧಿವದ್ವೇದಾನ್ ಗೃಹಸ್ಥಾಶ್ರಮಮಾವ್ರಜೇತ್ ॥ ೭೭ ॥

ಉಪಕುರ್ವಾಣಕೋ ಜ್ಞೇಯೋ ನೈಷ್ಠಿಕೋ ಮರಣಾಂತಿಕಃ ।
ಉದಾಸೀನಃ ಸಾಧಕಶ್ಚ ಗೃಹಸ್ಥೋ ದ್ವಿವಿಧೋ ಭವೇತ್ ॥ ೭೮ ॥

ಕುಟುಂಬಭರಣಾಸಕ್ತಃ ಸಾಧಕೋಽಸೌ ಗೃಹೀ ಭವೇತ್ ।
ಋಣಾನಿ ತ್ರೀಣ್ಯಪಾಕೃತ್ಯ ತ್ಯಕ್ತ್ವಾ ಭಾರ್ಯಾಧನಾದಿಕಮ್ ॥ ೭೯ ॥

---

೭೬. ಯಾವ ಯೋಗಿಯು ಈ ರೀತಿಯಾಗಿ ನಿಶ್ಚಲತೆಯಿಂದಲೂ ಸರ್ವಸಂಗ ಪರಿತ್ಯಾಗದಿಂದಲೂ ಇರುವನೋ ಅವನು ಪಂಚಮಾಶ್ರಮಿಯು. ಹಿಂದೆ ಹೇಳಿದ ಎಲ್ಲ ಆಶ್ರಮಗಳಲ್ಲಿಯೂ ಎರಡು ಬಗೆಯು ಶ್ರುತಿಯಲ್ಲಿ ವಿವರಿಸಲ್ಪಟ್ಟಿದೆ.

೭೭. ಬ್ರಹ್ಮಚರ್ಯಾಶ್ರಮಿಗಳಲ್ಲಿ ಉಪಕುರ್ವಾಣ ಮತ್ತು ಬ್ರಹ್ಮನಿಷ್ಠಾ ತತ್ಪರನಾದ ನೈಷ್ಠಿಕ ಎಂದು ಎರಡು ಬಗೆಯಾಗಿರುವರು. ಅವರಲ್ಲಿ ಮೊದಲನೆ ಯವನು ವಿಧಿವತ್ತಾಗಿ ವೇದಗಳನ್ನು ಅಧ್ಯಯನಮಾಡಿ ಗೃಹಸ್ಥಾಶ್ರಮವನ್ನು ಸ್ವೀಕರಿಸುವನು.

೭೮. ಅವನು ಉಪಕುರ್ವಾಣನೆಂಬ ಬ್ರಹ್ಮಚಾರಿಯು. ಮರಣಾಂತವಾಗಿ ಗುರುಕುಲದಲ್ಲಿ ಬ್ರಹ್ಮಚರ್ಯದಲ್ಲಿಯೇ ಇರುವವನು ನೈಷ್ಠಿಕ ಬ್ರಹ್ಮಚಾರಿಯು. ಹೀಗೆ ಗೃಹಸ್ಥರಲ್ಲಿ ಉದಾಸೀನ, ಸಾಧಕರೆಂದು ಎರಡು ಬಗೆಗಳಿವೆ.

೭೯. ಕುಟುಂಬಪೋಷಣದಲ್ಲಿ ಆಸಕ್ತನಾದ ಗೃಹಸ್ಥನು ಸಾಧಕ ಎಂದು ಕರೆಯಲ್ಪಡುವನು. ಮತ್ತೊಬ್ಬನು ದೇವ, ಋಷಿ, ಪಿತೃ ಋಣತ್ರಯವನ್ನು ಕಳೆದು ಕೊಂಡು ಭಾರ್ಯಾ ಧನಾದಿಗಳನ್ನು ತ್ಯಜಿಸಿಹೋಗುವನು.

ಏಕಾಕೀ ಯಸ್ತು ವಿಚರೇದುದಾಸೀನಃ ಸ ಮೌಕ್ಷಿಕಃ ।
ತಪಸ್ತಪ್ಯತಿ ಯೋಽರಣ್ಯೇ ಯಜೇದ್ದೇವಾನ್ ಜುಹೋತಿ ಚ ॥ ೮೦ ॥

ಸ್ವಾಧ್ಯಾಯೇ ಚೈವ ನಿರತೋ ವನಸ್ಥಸ್ತಾಪಸೋ ಮತಃ ।
ತಪಸಾ ಕರ್ಷಿತೋಽತ್ಯರ್ಥಂ ಯಸ್ತು ಧ್ಯಾನಪರೋ ಭವೇತ್ ॥ ೮೧ ॥

ಸಾನ್ನ್ಯಾಸಿಕಃ ಸ ವಿಜ್ಞೇಯೋ ವಾನಪ್ರಸ್ಥಾಶ್ರಮೇ ಸ್ಥಿತಃ ।
ಯೋಗಾಭ್ಯಾಸರತೋ ನಿತ್ಯಮಾರುರುಕ್ಷುರ್ಜಿತೇಂದ್ರಿಯಃ ॥ ೮೨ ॥

ಜ್ಞಾನಾಯ ವರ್ತತೇ ಭಿಕ್ಷುಃ ಪ್ರೋಚ್ಯತೇ ಪಾರಮೇಷ್ಠಿಕಃ ।
ಯಸ್ತ್ವಾತ್ಮರತಿರೇವ ಸ್ಯಾನ್ನಿತ್ಯತೃಪ್ತೋ ಮಹಾಮುನಿಃ ॥ ೮೩ ॥

---

೮೦. ಮತ್ತು ಏಕಾಕಿಯಾಗಿ ಅಲ್ಲಲ್ಲಿ ಸಂಚರಿಸುವನು. ಅವನು ಮೋಕ್ಷಾರ್ಹನಾದ ಉದಾಸೀನನೆಂಬ ಗೃಹಸ್ಥನು. ವಾನಪ್ರಸ್ಥರಲ್ಲಿ ಒಂದು ಬಗೆಯುವನು ಅರಣ್ಯದಲ್ಲಿ ವಾಸಿಸುತ್ತ ತಪಸ್ಸನ್ನು ಆಚರಿಸುವನು. ದೇವರನ್ನು ಪೂಜಿಸುವನು ಮತ್ತು ವಿಹಿತ ಹೋಮವನ್ನೂ ಆಚರಿಸುವನು.

೮೧. ಮತ್ತು ವೇದಾಧ್ಯಯನದಲ್ಲಿ ನಿರತನಾಗಿರುವನು. ಇವನು ತಾಪಸನೆಂಬ ವಾನಪ್ರಸ್ಥನೆಂದು ಶಾಸ್ತ್ರಸಮ್ಮತವು. ಒಬ್ಬನು ತಪಸ್ಸಿನಲ್ಲಿ ಅತ್ಯಂತ ಕೃಶನಾಗಿ ಧ್ಯಾನಯೋಗದಲ್ಲಿ ಆಸಕ್ತಿಯನ್ನು ಹೊಂದುವನು.

೮೨. ಅವನು ವಾನಪ್ರಸ್ಥಾಶ್ರಮದಲ್ಲಿ ಸನ್ಯಾಸ ಧರ್ಮವನ್ನು ಅವಲಂಬಿಸಿರುವುದರಿಂದ ಸಾನ್ಯಾಸಿಕವಾನಪ್ರಸ್ಥಾಶ್ರಮಿಯೆಂದು ಕರೆಯಲ್ಪಡುವನು. ಯತಿಗಳಲ್ಲಿ ಒಂದು ಬಗೆಯುವನು ಸರ್ವಕಾಲದಲ್ಲಿಯೂ ಯೋಗಾಭ್ಯಾಸದಲ್ಲಿ ಆಸಕ್ತನೂ, ಪರಮ ನಿಷ್ಠೆಯನ್ನು ಹೊಂದುವ ಇಷ್ಟವುಳ್ಳವನೂ ಮತ್ತು ಜಿತೇಂದ್ರಿಯನೂ ಆಗಿರುವನು.

೮೩. ಅವನು ಜ್ಞಾನನಿಷ್ಠಾ-ಸಾಧನಕ್ಕಾಗಿ ಯತ್ನಿಸುವನಾದ್ದರಿಂದ ಅವನು ಪಾರಮೇಷ್ಠಿಕಭಿಕ್ಷುವೆಂದು ಕರೆಯಲ್ಪಡುತ್ತಾನೆ. ಮತ್ತೊಬ್ಬನು ಆತ್ಮವಸ್ತುವಿನಲ್ಲಿ ಕ್ರೀಡಾವಿನೋದಗಳುಳ್ಳವನೂ, ನಿತ್ಯತೃಪ್ತಿಯುಳ್ಳವನೂ ಮತ್ತು ಮಹಾಮುನಿಯೂ ಆಗಿರುವನು.

ಸಮ್ಯಗ್ದರ್ಶನಸಂಪನ್ನಃ ಸ ಯೋಗೀ ಭಿಕ್ಷುರುಚ್ಯತೇ ।
ಜ್ಞಾನಸನ್ನ್ಯಾಸಿನಃ ಕೇಚಿದ್ವೇದಸನ್ನ್ಯಾಸಿನೋಽಪರೇ ॥ ೮೪ ॥

ಕರ್ಮಸನ್ನ್ಯಾಸಿನಃ ಕೇಚಿತ್ತ್ರಿವಿಧಾಃ ಪಾರಮೇಷ್ಠಿಕಾಃ ।
ಯೋಗೀ ಚ ತ್ರಿವಿಧೋ ಜ್ಞೇಯೋ ಭೌತಿಕಃ ಸಾಂಖ್ಯ ಏವ ಚ॥ ೮೫ ॥

ತೃತೀಯೋ ಹ್ಯಾಶ್ರಮೀ ಪ್ರೋಕ್ತೋ ಯೋಗಮುತ್ತಮಮಾಶ್ರಿತಃ ।
ಪ್ರಥಮಾ ಭಾವನಾ ಪೂರ್ವೇ ಸಾಂಖ್ಯೇ ತ್ವಕ್ಷರಭಾವನಾ ॥ ೮೬ ॥

ತೃತೀಯೇ ಚಾಂತಿಮಾ ಪ್ರೋಕ್ತಾ ಭಾವನಾ ಪಾರಮೇಶ್ವರೀ ।
ತಸ್ಮಾದೇತದ್ವಿಜಾನೀಧ್ವಮಾಶ್ರಮಾಣಾಂ ಚತುಷ್ಟಯಮ್ ॥ ೮೭ ॥

---

೮೪. ಮತ್ತು ಪರಮಾರ್ಥ ತತ್ವಜ್ಞಾನದಿಂದ ಕೂಡಿರುವವನು. ಅವನು ಯೋಗಿಭಿಕ್ಷುವೆಂದು ಕರೆಯಲ್ಪಡುವನು. ಪಾರಮೇಷ್ಠಿಕ ಸನ್ಯಾಸಿಗಳಲ್ಲಿ ಕೆಲವರು ಜ್ಞಾನಸನ್ಯಾಸಿಗಳೂ, ಮತ್ತೆ ಕೆಲವರು ವೇದ ಸನ್ಯಾಸಿಗಳೂ ಆಗಿರುವರು.

೮೫. ಹಾಗೆ ಇನ್ನು ಕೆಲವರು ಕರ್ಮಸನ್ಯಾಸಿಗಳಾಗಿರುವರು. ಹೀಗೆ ಪಾರಮೇಷ್ಠಿಕ ಯತಿಗಳು ಮೂರು ಪಂಗಡದವರಾಗಿದ್ದಾರೆ. ಯೋಗಿಯೂ ಮೂರು ವಿಧಗಳನ್ನು ಹೊಂದಿರುವನೆಂದು ತಿಳಿಯಬೇಕು. ಭೌತಿಕ, ಸಾಂಖ್ಯ ಎಂಬುವು ಮೊದಲನೆಯ ಎರಡು ಪ್ರಕಾರಗಳಾಗಿವೆ.

೮೬. ಉತ್ತಮವಾದ ಯೋಗಮರ್ಯಾದೆಯನ್ನು ಆಶ್ರಯಿಸಿದವನು ಮೂರನೆಯ ಆಶ್ರಮಿಯೋಗಿಯು. ಇವರಲ್ಲಿ ಮೊದಲನೆಯ ಭೌತಿಕಯೋಗಿಯಲ್ಲಿ ಪರಮೇಶ್ವರನ ಪ್ರಥಮ ಭಾವನೆಯೂ, ಎರಡನೆಯ ಸಾಂಖ್ಯಯೋಗಿಯಲ್ಲಿ ಅಕ್ಷರ ಭಾವನೆಯೂ ಇರುವುವು.

೮೭. ಆಶ್ರಮಿಯೆಂಬ ಯೋಗಿಯಲ್ಲಿ ಪರಮೇಶ್ವರನ ಅಂತಿಮಭಾವನೆಯು ನೆಲೆಸಿರುವದು, ಎಂದು ಹೇಳಲ್ಪಟ್ಟಿದೆ. ಆದುದರಿಂದ ಈ ರೀತಿಯಾಗಿ ನಾಲ್ಕು ಆಶ್ರಮಗಳನ್ನು ಪ್ರತ್ಯೇಕವಾಗಿ ತಿಳಿಯಿರಿ.

ಸರ್ವೇಷು ವೇದಶಾಸ್ತ್ರೇಷು ಪಂಚಮೋ ನೋಪಪದ್ಯತೇ ।
ಏವಂ ವರ್ಣಾಶ್ರಮಾನ್ ಸೃಷ್ಟ್ವಾ ದೇವದೇವೋ ನಿರಂಜನಃ ॥ ೮೮ ॥

ದಕ್ಷಾದೀನ್ ಪ್ರಾಹ ವಿಶ್ವಾತ್ಮಾ ಸೃಜಧ್ವಂ ವಿವಿಧಾಃ ಪ್ರಜಾಃ ।
ಬ್ರಹ್ಮಣೋ ವಚನಾತ್ಪುತ್ರಾ ದಕ್ಷಾದ್ಯಾ ಮುನಿಸತ್ತಮಾಃ ॥ ೮೯ ॥

ಅಸೃಜಂತ ಪ್ರಜಾಃ ಸರ್ವೇ ದೇವಮಾನುಷಪೂರ್ವಕಾಃ ।
ಇತ್ಯೇವಂ ಭಗವಾನ್ ಬ್ರಹ್ಮಾ ಸ್ರಷ್ಟೃತ್ವೇ ಸಂವ್ಯವಸ್ಥಿತಃ ॥ ೯೦ ॥

ಅಹಂ ವೈ ಪಾಲಯಾಮೀದಂ ಸಂಹರಿಷ್ಯತಿ ಶೂಲಭೃತ್ ।
ತಿಸ್ರಸ್ತು ಮೂರ್ತಯಃ ಪ್ರೋಕ್ತಾ ಬ್ರಹ್ಮವಿಷ್ಣುಮಹೇಶ್ವರಾಃ ॥ ೯೧ ॥

---

೮೮. ಎಲ್ಲ ವೇದ - ಶಾಸ್ತ್ರಗಳನ್ನು ನೋಡಿದರೂ ಐದನೆಯ ಆಶ್ರಮವು ಇರುವುದಿಲ್ಲ. ನಿರ್ದೋಷಿಯಾದ ದೇವೋತ್ತಮನು ಹೀಗೆ ವರ್ಣ-ಆಶ್ರಮಗಳನ್ನು ನಿರ್ಮಾಣಮಾಡಿದನು.

೮೯. ತರುವಾಯ ವಿಶ್ವರೂಪಿಯಾದ ಬ್ರಹ್ಮನು ದಕ್ಷಾದಿಗಳನ್ನು ಕುರಿತು ನೀವು ವಿವಿಧಪ್ರಜೆಗಳನ್ನು ಸೃಷ್ಟಿಮಾಡಿರಿ, ಎಂದು ಆಜ್ಞೆಯಿತ್ತನು. ಆಗ ಮುನಿಶ್ರೇಷ್ಠರೂ, ಪುತ್ರರೂ ಆದ ಆ ದಕ್ಷ ಮುಂತಾದವರು ಬ್ರಹ್ಮನ ವಚನವನ್ನು ಅಂಗೀಕರಿಸಿದರು.

೯೦. ಮತ್ತು ಅವರೆಲ್ಲರೂ ದೇವ-ಮಾನುಷಪೂರ್ವಕವಾಗಿ ಪ್ರಜೆಗಳನ್ನು ಸೃಷ್ಟಿಮಾಡಿದರು. ಈ ರೀತಿಯಾಗಿ ಭಗವಂತನಾದ ಬ್ರಹ್ಮದೇವನು ಸೃಷ್ಟಿವ್ಯಾಪಾರದ ಅಧಿಕಾರದಲ್ಲಿ ವ್ಯವಸ್ಥಿತನಾಗಿರುವನು.

೯೧. ನಾನು ಇದನ್ನು ರಕ್ಷಿಸುತ್ತಿರುವೆನು. ಅಂತದಲ್ಲಿ ಶೂಲಧಾರಿಯಾದ ಈಶ್ವರನು ಸಂಹಾರ ಮಾಡುವನು. ಹೀಗೆ ಬ್ರಹ್ಮ, ವಿಷ್ಣು, ಮಹೇಶ್ವರ ಎಂದು ಮೂರು ಮೂರ್ತಿಗಳು ಸೃಷ್ಟ್ಯಾದಿ ವ್ಯಾಪಾರವನ್ನು ನಿರ್ವಹಿಸುವರು.

ರಜಃಸತ್ತ್ವತಮೋಯೋಗಾತ್ಪರಸ್ಯ ಪರಮಾತ್ಮನಃ ।
ಅನ್ಯೋನ್ಯಮನುರಕ್ತಾಸ್ತೇ ಹ್ಯನ್ಯೋನ್ಯಮುಪಜೀವಿನಃ ॥ ೯೨ ॥

ಅನ್ಯೋನ್ಯಪ್ರಣತಾಶ್ಚೈವ ಲೀಲಯಾ ಪರಮೇಶ್ವರಾಃ ।
ಬ್ರಾಹ್ಮೀ ಮಾಹೇಶ್ವರೀ ಚೈವ ತಥೈವಾಕ್ಷರಭಾವನಾ ॥ ೯೩ ॥

ತಿಸ್ರಸ್ತು ಭಾವನಾ ರುದ್ರೇ ವರ್ತಂತೇ ಸತತಂ ದ್ವಿಜಾಃ ।
ಪ್ರವರ್ತತೇ ಮಯ್ಯಜಸ್ರಮಾದ್ಯಾ ತ್ವಕ್ಷರಭಾವನಾ ॥ ೯೪ ॥

ದ್ವಿತೀಯಾ ಬ್ರಹ್ಮಣಃ ಪ್ರೋಕ್ತಾ ದೇವಸ್ಯಾಕ್ಷರಭಾವನಾ ।
ಅಹಂ ಚೈವ ಮಹಾದೇವೋ ನ ಭಿನ್ನಃ ಪರಮಾರ್ಥತಃ ॥ ೯೫ ॥

---

೯೨. ಶ್ರೇಷ್ಠನಾದ ಪರಮಾತ್ಮನಿಗೆ ಸತ್ತ್ವ, ರಜ, ತಮ ಎಂಬ ಗುಣಗಳ ಸಂಪರ್ಕದಿಂದ ಪ್ರತ್ಯೇಕವಾದ ಈ ಮೂರು ಮೂರ್ತಿಗಳು ಉಂಟಾಗಿರುವುವು. ಈ ಮೂರು ಮೂರ್ತಿಗಳು ಅನ್ಯೋನ್ಯ ಪ್ರೀತಿಯುಳ್ಳವರೂ, ಅನ್ಯೋನ್ಯ ಉಪಜೀವನವುಳ್ಳವರೂ ಆಗಿರುವರು.

೯೩. ಮತ್ತು ಎಲ್ಲರೂ ಪರಮೇಶ್ವರರೂ, ಲೀಲೆಯಿಂದ ಅನ್ಯೋನ್ಯವಾಗಿ ಪ್ರಣಾಮಮಾಡುವವರೂ ಆಗಿರುವರು. ಇವರ ವಿಷಯದಲ್ಲಿ ಬ್ರಾಹ್ಮೀ, ಮಾಹೇಶ್ವರೀ ಮತ್ತು ಅಕ್ಷರಭಾವನೆಯೆಂದು ಮೂರು ಭಾವನೆಗಳು ಇರುವುವು.

೯೪. ದ್ವಿಜರೆ! ರುದ್ರನಲ್ಲಿ ಈ ಮೂರು ಭಾವನೆಗಳು ಯಾವಾಗಲೂ ಪ್ರವರ್ತಿಸುತ್ತವೆ. ನನ್ನಲ್ಲಿ ಸರ್ವ ಕಾಲದಲ್ಲಿಯೂ ಮೊದಲನೆಯ ಅಕ್ಷರಭಾವನೆಯು ಪ್ರವರ್ತಿಸುವುದು.

೯೫. ಬ್ರಹ್ಮದೇವನಿಗೆ ಎರಡನೆಯ ಅಕ್ಷರಭಾವನೆಯು ಪ್ರವರ್ತಿಸುವುದೆಂದು ಹೇಳಲ್ಪಟ್ಟಿದೆ. ನಾನೂ, ಮಹಾದೇವನೂ ಪರಮಾರ್ಥವಾಗಿ ಭಿನ್ನವಾದ ತತ್ತ್ವಗಳಾಗಿಲ್ಲ.

ವಿಭಜ್ಯ ಸ್ವೇಚ್ಛಯಾತ್ಮಾನಂ ಸೋಽಂತರ್ಯಾಮೀಶ್ವರಃ ಸ್ಥಿತಃ ।
ತ್ರೈಲೋಕ್ಯಮಖಿಲಂ ಸ್ರಷ್ಟುಂ ಸದೇವಾಸುರಮಾನುಷಮ್ ॥ ೯೬ ॥

ಪುರುಷಃ ಪರತೋಽವ್ಯಕ್ತೋ ಬ್ರಹ್ಮತ್ವಂ ಸಮುಪಾಗಮತ್ ।
ತಸ್ಮಾದ್ಬ್ರಹ್ಮಾ ಮಹಾದೇವೋ ವಿಷ್ಣುರ್ವಿಶ್ವೇಶ್ವರಃ ಪರಃ ॥ ೯೭ ॥

ಏಕಸ್ಯೈವ ಸ್ಮೃತಾಸ್ತಿಸ್ರಸ್ತದ್ವತ್ಕಾರ್ಯವಶಾತ್ಪ್ರಭೋಃ ।
ತಸ್ಮಾತ್ ಸರ್ವಪ್ರಯತ್ನೇನ ವಂದ್ಯಾಃ ಪೂಜ್ಯಾ ವಿಶೇಷತಃ ॥ ೯೮ ॥

ಯದೀಚ್ಛೇದಚಿರಾತ್ ಸ್ಥಾನಂ ಯತ್ತನ್ಮೋಕ್ಷಾಖ್ಯಮವ್ಯಯಮ್ ।
ವರ್ಣಾಶ್ರಮಪ್ರಯುಕ್ತೇನ ಧರ್ಮೇಣ ಪ್ರೀತಿಸಂಯುತಃ ॥ ೯೯ ॥

---

೯೬. ಅಂತರ್ಯಾಮಿಯಾದ ಪರಮೇಶ್ವರನು ಸ್ವಸಂಕಲ್ಪದಿಂದ ಎರಡಾಗಿ ವಿಂಗಡಿಸಿ ಮೂರ್ತಿಭೇದವನ್ನು ಹೊಂದಿರುವನು. ದೇವ-ಅಸುರ-ಮಾನುಷಾದಿಗಳಿಂದ ಕೂಡಿದ ತ್ರೈಲೋಕ್ಯವನ್ನು ಸೃಷ್ಟಿಮಾಡಲು ಒಂದು ಮೂರ್ತಿಯು ಉಂಟಾಯಿತು.

೯೭. ಅದಕ್ಕೋಸ್ಕರ ಅವ್ಯಕ್ತನಾದ ಪರಮಪುರುಷನು ಬ್ರಹ್ಮತ್ವವನ್ನು ಹೊಂದಿರುವನು. ಆದ್ದರಿಂದ ವಿಶ್ವೇಶ್ವರನೂ, ಪರಮಪುರುಷನೂ ಆದ ಮಹಾದೇವ ಅಥವಾ ವಿಷ್ಣುವು ಬ್ರಹ್ಮರೂಪನಾಗಿರುವನು.

೯೮. ಪ್ರಭುವಾದ ಒಬ್ಬ ಪರಮಾತ್ಮನಿಗೆ ಆಯಾಯ ಕಾರ್ಯವಶದಿಂದ ಮೂರು ಮೂರ್ತಿಗಳುಂಟಾಗಿವೆಯೆಂದು ಸ್ಮರಿಸಲ್ಪಟ್ಟಿವೆ. ಆದುದರಿಂದ ಸರ್ವವಿಧ ಪ್ರಯತ್ನದಿಂದ ಆ ಮೂರ್ತಿಗಳು ವಿಶೇಷವಾಗಿ ಪೂಜಿಸಲ್ಪಡಬೇಕು.

೯೯. ಮುಕ್ತಿಯೆಂಬ ವ್ಯಯವಿಲ್ಲದ ಶಾಶ್ವತವಾದ ಸ್ಥಾನವನ್ನು ಶೀಘ್ರವಲ್ಲಿ ಹೊಂದಲು ಆಶಿಸುವವನು ಪ್ರೀತಿಯಿಂದ ಕೂಡಿ ವರ್ಣಾಶ್ರಮಪ್ರಯುಕ್ತ ಧರ್ಮಗಳ ಮೂಲಕವಾಗಿ ಪರಮಾತ್ಮಮೂರ್ತಿಯನ್ನು ಪೂಜಿಸಬೇಕು.

ಪೂಜಯೇದ್ಭಾವಯುಕ್ತೇನ ಯಾವಜ್ಜೀವಂ ಪ್ರತಿಜ್ಞಯಾ ।
ಚತುರ್ಣಾಮಾಶ್ರಮಾಣಾಂ ತು ಪ್ರೋಕ್ತೋಽಯಂ ವಿಧಿವದ್ದ್ವಿಜಾಃ ॥

ಆಶ್ರಮೋ ವೈಷ್ಣವೋ ಬ್ರಾಹ್ಮೋ ಹರಾಶ್ರಮ ಇತಿ ತ್ರಯಃ ।
ತಲ್ಲಿಂಗಧಾರೀ ನಿಯತಂ ತದ್ಭಕ್ತಜನವತ್ಸಲಃ ॥ ೧೦೧ ॥

ಧ್ಯಾಯೇದಥಾರ್ಚಯೇದೇತಾನ್ ಬ್ರಹ್ಮವಿದ್ಯಾಪರಾಯಣಃ ।
ಸರ್ವೇಷಾಮೇವ ಭಕ್ತಾನಾಂ ಶಂಭೋರ್ಲಿಂಗಮನುತ್ತಮಮ್ ॥೧೦೨॥

ಸಿತೇನ ಭಸ್ಮನಾ ಕಾರ್ಯಂ ಲಲಾಟೇ ತು ತ್ರಿಪುಂಡ್ರಕಮ್ ।
ಯಸ್ತು ನಾರಾಯಣಂ ದೇವಂ ಪ್ರಸನ್ನಃ ಪರಮಂ ಪದಮ್ ॥ ೧೦೩ ॥

---

೧೦೦. ದ್ವಿಜರೆ ! ತಾನು ಜೀವಿಸುವವರೆಗೆ ಪ್ರತಿಜ್ಞಾಪೂರ್ವಕವಾಗಿ ಭಕ್ತಿಭಾವದಿಂದ ಕೂಡಿ ಪೂಜೆಮಾಡಬೇಕು. ಇದು ನಾಲ್ಕು ಆಶ್ರಮಗಳಿಗೂ ಸಾಮಾನ್ಯವಾದ ಒಂದು ಆಶ್ರಮವೆಂದು ಕೀರ್ತಿಸಲ್ಪಟ್ಟಿದೆ.

೧೦೧. ಇಂತಹ ಆಶ್ರಮಗಳು ವೈಷ್ಣವಾಶ್ರಮ, ಬ್ರಹ್ಮಾಶ್ರಮ, ಹರಾಶ್ರಮವೆಂದು ಮೂರಾಗಿವೆ. ಆ ಆಶ್ರಮವಾಸಿಯು ಆಯಾಯ ದೇವತಾ ಚಿಹ್ನವನ್ನು ಧರಿಸಿದವನೂ, ತಪ್ಪದೇ ಆ ದೇವತಾಭಕ್ತರಲ್ಲಿ ಪ್ರೇಮಿಯೂ ಆಗಿರಬೇಕು.

೧೦೨. ಆ ವ್ರತದಲ್ಲಿದ್ದು ಬ್ರಹ್ಮವಿದ್ಯೆಯಲ್ಲಿ ಮುಖ್ಯತತ್ಪರತೆಯಿಂದ ಈ ದೇವತೆಗಳ ಧ್ಯಾನ-ಅರ್ಚನಗಳನ್ನು ಆಚರಿಸಬೇಕು. ಎಲ್ಲ ಭಕ್ತರಿಗೂ ಶಂಭುವಿನ ಲಿಂಗಧಾರಣವು ಅತ್ಯುತ್ತಮವಾದುದು.

೧೦೩. ಮತ್ತು ಹಣೆಯಲ್ಲಿ ಶುಭ್ರವಾದ ಭಸ್ಮದಿಂದ ತ್ರಿಪುಂಡ್ರವನ್ನು ಧಾರಣ ಮಾಡಬೇಕು. ಇವರಲ್ಲಿ ಒಬ್ಬನು ನಾರಾಯಣದೇವನನ್ನು ಪರಮಪೂಜ್ಯಪದವನ್ನಾಗಿ ಹೊಂದಿರುವನು.

ಧಾರಯೇತ್ ಸರ್ವದಾ ಶೂಲಂ ಲಲಾಟೇ ಗಂಧವಾರಿಭಿಃ ।
ಪ್ರಸನ್ನಾ ಯೇ ಜಗದ್ಬೀಜಂ ಬ್ರಹ್ಮಾಣಂ ಪರಮೇಷ್ಠಿನಮ್ ॥ ೧೦೪ ॥

ತೇಷಾಂ ಲಲಾಟೇ ತಿಲಕಂ ಧಾರಣೀಯಂ ತು ಸರ್ವದಾ ।
ಯೋಽಸಾವನಾದಿಭೂತಾದಿಃ ಕಾಲಾತ್ಮಾಸೌ ಧೃತೋ ಭವೇತ್ ॥೧೦೫॥

ಉಪರ್ಯಧೋಭಾವಯೋರ್ಗಾತ್ರಿಪುಂಡ್ರಸ್ಯ ತು ಧಾರಣಾತ್ ।
ಯತ್ತತ್ಪ್ರಧಾನಂ ತ್ರಿಗುಣಂ ಬ್ರಹ್ಮವಿಷ್ಣುಶಿವಾತ್ಮಕಮ್ ॥ ೧೦೬ ॥

ಧೃತಂ ತು ಶೂಲಧರಣಾದ್ಭವತ್ಯೇವ ನ ಸಂಶಯಃ ।
ಬ್ರಹ್ಮತೇಜೋಮಯಂ ಶುಕ್ಲಂ ಯದೇತನ್ಮಂಡಲಂ ರವೇಃ ॥ ೧೦೭ ॥

---

೧೦೪. ಅಂತಹ ಮಾನವನು ಲಲಾಟದಲ್ಲಿ ಗಂಧೋದಕದಿಂದ ಯಾವಾಗಲೂ ಶೂಲದ ಚಿಹ್ನವನ್ನು ಧರಿಸಬೇಕು. ಹಾಗೆ ಮತ್ತೊಬ್ಬನು ಜಗತ್ಕಾರಣನೂ ಪರಮೇಷ್ಠಿಯೂ ಆದ ಬ್ರಹ್ಮದೇವನನ್ನು ಭಜಿಸಬಹುದು.

೧೦೫. ಅವರಿಗೆ ಯಾವಾಗಲೂ ಲಲಾಟದಲ್ಲಿ ತಿಲಕವು ಧಾರಣೀಯವಾಗಿರುವುದು. ಇಂತಹ ತಿಲಕಧಾರಣದಿಂದ ಅನಾದಿಯೂ, ನಿಖಿಲಜಗತ್ತಿಗೆ ಆದಿಯೂ ಆದ ಕಾಲಸ್ವರೂಪಿಯು ಧರಿಸಲ್ಪಟ್ಟಂತೇ ಆಗುವನು.

೧೦೬. ಮೇಲೆ-ಕೆಳಗೆ ಎಂಬ ರೇಖಾವಿಭಾಗವುಳ್ಳ ತ್ರಿಪುಂಡ್ರವನ್ನು ಧರಿಸಿರುವುದರಿಂದ ಸತ್ತ್ವ-ರಜ-ಸ್ತಮೋಗುಣಾತ್ಮಕವೂ ಬ್ರಹ್ಮ, ವಿಷ್ಣು, ಶಿವಸ್ವರೂಪವೂ ಆದ ಜಗದ್ಬೀಜವಾದ ಪ್ರಧಾನವನ್ನು ಧರಿಸಿದಂತೆ ಆಗುವುದು.

೧೦೭. ಶೂಲಧಾರಣದಿಂದ ಬ್ರಹ್ಮತೇಜೋಮಯವಾದ ಮತ್ತು ಶುಕ್ಲ ವರ್ಣದ ಸೂರ್ಯನ ಮಂಡಲವನ್ನು ಧರಿಸಿದಂತೆ ಇರುವುದು. ಈ ವಿಷಯದಲ್ಲಿ ಸಂಶಯಕ್ಕೆ ಅವಕಾಶವಿಲ್ಲ.

ಭವತ್ಯೇವ ಧೃತಂ ಸ್ಥಾನಮೈಶ್ವರಂ ತಿಲಕೇ ಕೃತೇ ।
ತಸ್ಮಾತ್ಕಾರ್ಯಂ ತ್ರಿಶೂಲಾಙ್ಕಂ ತಥಾ ಚ ತಿಲಕಂ ಶುಭಮ್ ॥ ೧೦೮ ॥

ಆಯುಷ್ಯಂಚಾಪಿ ಭಕ್ತಾನಾಂ ತ್ರಯಾಣಾಂ ವಿಧಿಪೂರ್ವಕಮ್ ।
ಯಜೇತ ಜುಹುಯಾದಗ್ನೌ ಜಪೇದ್ದದ್ಯಾಜ್ಜಿತೇಂದ್ರಿಯಃ ॥ ೧೦೯ ॥

ಶಾಂತೋ ದಾಂತೋ ಜಿತಕ್ರೋಧೋ ವರ್ಣಾಶ್ರಮವಿಧಾನವಿತ್ ।
ಏವಂ ಪರಿಚರೇದ್ದೇವಾನ್ ಯಾವಜ್ಜೀವಂ ಸಮಾಹಿತಃ ॥ ೧೧೦ ॥

ತೇಷಾಂ ಸ್ವಸ್ಥಾನಮಚಲಂ ಸೋऽಚಿರಾದಧಿಗಚ್ಛತಿ ॥ ೧೧೧ ॥

ಇತಿ ಶ್ರೀ ಕೂರ್ಮಪುರಾಣೇ ದ್ವಿತೀಯೋऽಧ್ಯಾಯಃ

---

೧೦೮. ಹಾಗು ತಿಲಕವು ಧರಿಸಲ್ಪಡಲು ಐಶ್ವರಸ್ಥಾನವು ಸರ್ವಕಾಲದಲ್ಲಿ ಧರಿಸಲ್ಪಟ್ಟಂತೆ ಇರುವುದು. ಆದ್ದರಿಂದ ತ್ರಿಶೂಲಾಂಕವೂ ಮಂಗಲವಾದ ತಿಲಕವೂ ಯಾವಾಗಲೂ ಧರಿಸಲ್ಪಡಬೇಕು.

೧೦೯. ಮತ್ತು ತ್ರಿಶೂಲ, ತಿಲಕಧಾರಣಗಳು ಭಕ್ತರಿಗೆ ಆಯುಷ್ಯಕಾರಕವಾಗಿರುವುವು. ಮತ್ತು ತ್ರಿಮೂರ್ತಿಗಳನ್ನು ಉದ್ದೇಶಿಸಿ ಯಾಗ, ಹೋಮ, ಜಪ ಮತ್ತು ದಾನಕರ್ಮಗಳನ್ನು ಜಿತೇಂದ್ರಿಯನಾಗಿ ಆಚರಿಸಬೇಕು.

೧೧೦ ಶಮ-ದಮಾದಿಗಳಿಂದ ಸಂಸ್ಕೃತನೂ, ಕ್ರೋಧವನ್ನು ಜಯಿಸಿದವನೂ ವರ್ಣಾಶ್ರಮ ವಿಧಾನವನ್ನು ಅರಿತವನೂ ಆದ ಪ್ರಾಜ್ಞನು ಜೀವಂತನಾಗಿರುವವರೆಗೆ ಸಮಾಧಾನಚಿತ್ತದಿಂದ ಈ ರೀತಿಯಾಗಿ ದೇವತೆಗಳನ್ನು ಪೂಜಿಸಬೇಕು.

೧೧೧. ಇಂತಹ ವಿಹಿತ ಕರ್ಮಾಚರಣೆಯಿಂದ ಸಾಧಕನು ಆಯಾಯ ದೇವತಾ ಪ್ರಸಾದದಿಂದ ಆಯಾಯ ದೇವತೆಯ ಸ್ವಸ್ಥಾನವನ್ನು ಹೊಂದುವನು.

ಕೂರ್ಮಪುರಾಣದಲ್ಲಿ ಎರಡನೆಯ ಅಧ್ಯಾಯವು ಮುಗಿದುದು.



ಶ್ರೀಃ

# ಕೂರ್ಮಪುರಾಣಂ

---

## ಅಥ ತೃತೀಯೋಽಧ್ಯಾಯಃ

### (ವರ್ಣಾಶ್ರಮಕ್ರಮವರ್ಣನಮ್)

**ಋಷಯ ಊಚುಃ :—**

**ವರ್ಣಾ ಭಗವತೋದ್ದಿಷ್ಟಾಃ ಚತ್ವಾರೋಽಪ್ಯಾಶ್ರಮಾಸ್ತಥಾ ।**
**ಇದಾನೀಂ ಕ್ರಮಮಸ್ಮಾಕಮಾಶ್ರಮಾಣಾಂ ವದ ಪ್ರಭೋ ॥ ೧ ॥**

**ಕೂರ್ಮ ಉವಾಚ :—**

**ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥೋ ಯತಿಸ್ತಥಾ ।**
**ಕ್ರಮೇಣೈವಾಶ್ರಮಾಃ ಪ್ರೋಕ್ತಾಃ ಕಾರಣಾದನ್ಯಥಾ ಭವೇತ್ ॥ ೨ ॥**

---

## ಮೂರನೆಯ ಅಧ್ಯಾಯವು

ಮುನಿಗಳು ಹೀಗೆ ಪ್ರಶ್ನಿಸಿದರು :—

೧. ಪ್ರಭುವೇ ! ಪೂಜ್ಯನಾದ ನಿನ್ನಿಂದ ನಾಲ್ಕು ವರ್ಣಗಳೂ ಮತ್ತು ನಾಲ್ಕು ಆಶ್ರಮಗಳೂ ಕೂಡ ನಿರ್ದೇಶಿಸಲ್ಪಟ್ಟಿವೆ. ಈಗ ಆ ಆಶ್ರಮಗಳ ಕ್ರಮವನ್ನು ನಮಗೆ ಉಪದೇಶಿಸು.

ಕೂರ್ಮ ಮೂರ್ತಿಯು ಪ್ರತ್ಯುತ್ತರವಿತ್ತನು :—

೨. ಬ್ರಹ್ಮಚಾರೀ, ಗೃಹಸ್ಥ, ವಾನಪ್ರಸ್ಥ, ಮತ್ತು ಯತಿ-ಎಂಬುದಾಗಿಯೇ ಆಶ್ರಮಗಳಿಗೆ ಸಾಮಾನ್ಯ ನಿಯಮ ಸಿದ್ಧವಾದ ಕ್ರಮವು ಹೇಳಲ್ಪಟ್ಟಿದೆ, ಕಾರಣ ವಿಶೇಷದಿಂದ ಈ ಕ್ರಮವು ಅನ್ಯಥಾ ಭೂತವೂ ಆಗುವುದು.

ಉತ್ಪನ್ನಜ್ಞಾನವಿಜ್ಞಾನೀ ವೈರಾಗ್ಯಂ ಪರಮಂ ಗತಃ ।
ಪ್ರವ್ರಜೇದ್ಬ್ರಹ್ಮಚರ್ಯಾತ್ತು ಯದೀಚ್ಛೇತ್ಪರಮಾಂ ಗತಿಮ್ ॥ ೩ ॥

ದಾರಾನಾಹೃತ್ಯ ವಿಧಿವದನ್ಯಥಾ ವಿವಿಧೈರ್ಮಖೈಃ ।
ಯಜೇದುತ್ಪಾದಯೇತ್ಪುತ್ರಾನ್ ವಿರಕ್ತೋ ಯದಿ ಸನ್ನ್ಯಸೇತ್ ॥ ೪ ॥

ಅನಿಷ್ಟ್ವಾ ವಿಧಿವದ್ಯಜ್ಞೈರನುತ್ಪಾದ್ಯ ತಥಾತ್ಮಜಮ್ ।
ನ ಗಾರ್ಹಸ್ಥ್ಯಂ ಗೃಹೀ ತ್ಯಕ್ತ್ವಾ ಸನ್ನ್ಯಸೇದ್ಬುದ್ಧಿಮಾನ್ ದ್ವಿಜಃ ॥ ೫ ॥

ಅಥ ವೈರಾಗ್ಯವೇಗೇನ ಸ್ಥಾತುಂ ನೋತ್ಸಹತೇ ಗೃಹೇ ।
ತತ್ರೈವ ಸನ್ನ್ಯಸೇದ್ವಿದ್ವಾನನಿಷ್ಟ್ವಾಪಿ ದ್ವಿಜೋತ್ತಮಃ ॥ ೬ ॥

---

೩. ಜ್ಞಾನ ವಿಜ್ಞಾನಗಳನ್ನು ಹೊಂದಿರುವ ಮಹನೀಯನು ಬ್ರಹ್ಮಚರ್ಯದಲ್ಲಿಯೇ ಪರಮ ವೈರಾಗ್ಯವನ್ನು ಹೊಂದಿ ಅಲ್ಲಿರುವ ಪರಮಸದ್ಗತಿಯನ್ನು ವಾಂಛಿಸುವುದಾದರೆ ಬ್ರಹ್ಮಚರ್ಯದಿಂದ ಸನ್ಯಾಸವನ್ನು ಪರಿಗ್ರಹಿಸಬೇಕು.

೪. ವೈರಾಗ್ಯವು ಜನಿಸದಿದ್ದಪಕ್ಷದಲ್ಲಿ ವಿಧಿಪೂರ್ವಕವಾಗಿ ಕನ್ಯೆಯನ್ನು ಪಾಣಿಗ್ರಹಣಮಾಡಿಕೊಂಡು ವಿವಿಧಯಾಗಾದಿ ಕರ್ಮಗಳನ್ನು ಆಚರಿಸಬೇಕು ಮತ್ತು ಪುತ್ರಸಂತಾನವನ್ನು ಹೊಂದಬೇಕು. ಮುಂದೆ ವಿರಕ್ತನಾದರೆ ಸನ್ನ್ಯಾಸವನ್ನು ಸ್ವೀಕರಿಸಬೇಕು.

೫. ಬುದ್ಧಿಶಾಲಿಯಾದ ದ್ವಿಜನು ವಿಧಿವತ್ತಾಗಿ ಯಜ್ಞಾದಿಗಳನ್ನು ಆಚರಿಸದೆ ಔರಸಪುತ್ರರನ್ನು ಹೊಂದದೆ ಗೃಹಸ್ಥಾಶ್ರಮವನ್ನು ತ್ಯಜಿಸಿ ಸನ್ನ್ಯಸ್ತನಾಗಬಾರದು.

೬. ಒಂದುವೇಳೆ ತೀವ್ರವೈರಾಗ್ಯಯೋಗದಿಂದ ಗೃಹಸ್ಥಾಶ್ರಮದಲ್ಲಿ ಇರಲು ಮನಸ್ಸು ಒಪ್ಪದಿದ್ದರೆ ವಿದ್ವಾಂಸನಾದ ದ್ವಿಜಶ್ರೇಷ್ಠನು ಆ ಆಶ್ರಮದಿಂದಲೇ ಸನ್ನ್ಯಾಸಿಯಾಗಬೇಕು.

ತಥಾಪಿ ವಿವಿಧೈರ್ಯಜ್ಞೈರಿಷ್ಟ್ವಾ ವನಮಥಾಶ್ರಯೇತ್ ।
ತಪಸ್ತಪ್ತ್ವಾ ತಪೋಯೋಗಾದ್ವಿರಕ್ತಃ ಸನ್ನ್ಯಸೇದ್ಬಹಿಃ ॥ ೭ ॥

ವಾನಪ್ರಸ್ಥಾಶ್ರಮಂ ಗತ್ವಾ ನ ಗೃಹಂ ಪ್ರವಿಶೇತ್ಪುನಃ ।
ನ ಸನ್ನ್ಯಾಸೀ ವನಂ ಚಾಥ ಬ್ರಹ್ಮಚರ್ಯಂ ಚ ಸಾಧಕಃ ॥ ೮ ॥

ಪ್ರಾಜಾಪತ್ಯಾಂನಿರೂಪ್ಯೇಷ್ಟಿಮಾಗ್ನೇಯೀಮಥವಾ ದ್ವಿಜಃ ।
ಪ್ರವ್ರಜೇತ್ತು ಗೃಹೀ ವಿದ್ವಾನ್ ವನಾದ್ವಾಶ್ರುತಿ ಚೋದನಾತ್ ॥ ೯ ॥

ಪ್ರಕರ್ತುಮಸಮರ್ಥೋಽಪಿ ಜುಹೋತಿ ಯಜತಿ ಕ್ರಿಯಾಃ ।
ಅಂಧಃ ಪಂಗುರ್ದರಿದ್ರೋ ವಾ ವಿರಕ್ತಃ ಸನ್ನ್ಯಸೇದ್ದ್ವಿಜಃ ॥ ೧೦ ॥

---

೭. ಆದರೂ ಸಾಮಾನ್ಯವಾಗಿ ವಿಧಿವತ್ತಾಗಿ ಯಾಗಾದಿಗಳನ್ನು ಆಚರಿಸಿ ಮುಂದೆ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ತಪಸ್ಸನ್ನುಮಾಡಿ ತಪೋಯೋಗದಿಂದ ವಿರಕ್ತನಾಗಿ ಮುಂದಿನ ಸನ್ನ್ಯಾಸವನ್ನು ಸ್ವೀಕರಿಸಬೇಕು.

೮. ವಾನಪ್ರಸ್ಥಾಶ್ರಮವನ್ನು ಹೊಂದಿ ಮತ್ತೆ ಗೃಹಸ್ಥಾಶ್ರಮಕ್ಕೆ ಇಳಿಯಬಾರದು. ಹಾಗೆಯೇ ಸನ್ಯಾಸಿಯು ಕೆಳಗಿನ ವಾನಪ್ರಸ್ಥಾಶ್ರಮವನ್ನೂ, ಗೃಹಸ್ಥನು ಹಿಂದಿನ ಬ್ರಹ್ಮಚರ್ಯವನ್ನೂ ಮತ್ತೆ ಹೊಂದಬಾರದು.

೯. ದ್ವಿಜನು ಗೃಹಸ್ಥಾಶ್ರಮದಿಂದಲೂ ಅಥವಾ ಶ್ರುತಿವಿಹಿತವಾದ ವಾನಪ್ರಸ್ಥಾಶ್ರಮದಿಂದಲೂ ಮೊದಲು ಪ್ರಾಜಾಪತ್ಯ ಇಷ್ಟಿ ಅಥವಾ ಆಗ್ನೇಯೇಷ್ಟಿಯನ್ನು ಮಾಡಿ ಸನ್ಯಾಸವನ್ನು ಸ್ವೀಕರಿಸಬೇಕು.

೧೦. ಯಾಗ, ದಾನ, ಹೋಮ ಮುಂತಾದ ಕ್ರಿಯೆಗಳನ್ನು ಆಚರಿಸಲು ಅಸಮರ್ಥನಾದ ಕುರುಡ, ಕುಂಟ, ದರಿದ್ರನಾದ ದ್ವಿಜನು ವೈರಾಗ್ಯಸಂಪತ್ತಿಯಿಂದ ಸನ್ಯಾಸವನ್ನು ಪರಿಗ್ರಹಿಸಬೇಕು.

ಸರ್ವೇಷಾಮೇವ ವೈರಾಗ್ಯಂ ಸನ್ನ್ಯಾಸೇ ತು ವಿಧೀಯತೇ ।
ಪತತ್ಯೇವಾವಿರಕ್ತೋ ಯಃ ಸನ್ನ್ಯಾಸಂ ಕರ್ತುಮಿಚ್ಛತಿ ॥ ೧೧ ॥

ಏಕಸ್ಮಿನ್ನಥವಾ ಸಮ್ಯಗ್ವರ್ತೇತಾಮರಣಾಂತಿಕಮ್ ।
ಶ್ರದ್ಧಾವಾನಾಶ್ರಮೇ ಯುಕ್ತಃ ಸೋಽಮೃತತ್ವಾಯ ಕಲ್ಪತೇ ॥ ೧೨ ॥

ನ್ಯಾಯಾಗತಧನಃ ಶಾಂತೋ ಬ್ರಹ್ಮವಿದ್ಯಾಪರಾಯಣಃ ।
ಸ್ವಧರ್ಮಪಾಲಕೋ ನಿತ್ಯಂ ಬ್ರಹ್ಮಭೂಯಾಯ ಕಲ್ಪತೇ ॥ ೧೩ ॥

ಬ್ರಹ್ಮಣ್ಯಾಧಾಯ ಕರ್ಮಾಣಿ ನಿಃಸಂಗಃ ಕಾಮವರ್ಜಿತಃ ।
ಪ್ರಸನ್ನೇನೈವ ಮನಸಾ ಕುರ್ವಾಣೋ ಯಾತಿ ತತ್ಪದಮ್ ॥ ೧೪ ॥

---

೧೧. ಸರ್ವಾಶ್ರಮಿಗಳೂ ಸನ್ಯಾಸಾಶ್ರಮದಲ್ಲಿ ವೈರಾಗ್ಯವು ಅವಶ್ಯವಾಗಿ ವಿಧಿಸಲ್ಪಟ್ಟಿದೆ. ಅವಿರಕ್ತನು ಸನ್ಯಾಸ ಸ್ವೀಕಾರವನ್ನು ಆಶಿಸುವುದಾದರೆ ಅವನು ಪತಿತನಾಗುವನು.

೧೨ ಅಥವಾ ಒಂದು ಆಶ್ರಮದಲ್ಲಿ ಶ್ರದ್ಧೆಯುಳ್ಳವನೂ ಚಿತ್ತಸಮಾಧಾನವುಳ್ಳವನೂ, ಆಗಿ ಮರಣದವರೆಗೂ ಅದೇ ಆಶ್ರಮದಲ್ಲಿ ಸಾಧು ವೃತ್ತದಿಂದ ಇರುವವನು ಮುಕ್ತಿ ಲಾಭಕ್ಕೆ ಅರ್ಹನಾಗುವನು.

೧೩. ನ್ಯಾಯದಿಂದ ಆರ್ಜಿಸಿದ ಧನವುಳ್ಳವನೂ, ಶಾಂತನೂ, ಬ್ರಹ್ಮ ವಿದ್ಯೆಯಲ್ಲಿ ಆಸಕ್ತನೂ, ಸ್ವಧರ್ಮಪಾಲಕನೂ ಆದ ಧಾರ್ಮಿಕನು ಬ್ರಹ್ಮಭಾವವೆಂಬ ಮುಕ್ತಿಗೆ ಯೋಗ್ಯನಾಗುವನು.

೧೪. ಹೊಸ ವಿಷಯನ್ನು ಹೊಂದಬೇಕೆಂಬ ಆಶೆಯಿಂದಲೂ ಹೊಂದಿದ ವಿಷಯಗಳಿಂದಾಗುವ ಚಿತ್ತರಂಜನವೆಂಬ ಸಂಗದಿಂದಲೂ ವರ್ಜಿತನಾಗಿ ಬ್ರಹ್ಮಾರ್ಪಣ ಬುದ್ಧಿಯಿಂದ ಕರ್ಮಗಳನ್ನು ಆಚರಿಸುವವನು ಬ್ರಹ್ಮಪದವನ್ನು ಹೊಂದುವನು.

ಬ್ರಹ್ಮಣಾ ದೀಯತೇ ದೇಯಂ ಬ್ರಹ್ಮಣೇ ಸಂಪ್ರದೀಯತೇ ।
ಬ್ರಹ್ಮೈವ ದೀಯತೇ ಚೇತಿ ಬ್ರಹ್ಮಾರ್ಪಣಮಿದಂ ಪರಮ್ ॥ ೧೫ ॥

ನಾಹಂ ಕರ್ತಾ ಸರ್ವಮೇತದ್ಬ್ರಹ್ಮೈವ ಕುರುತೇ ತಥಾ ।
ಏತದ್ಬ್ರಹ್ಮಾರ್ಪಣಂ ಪ್ರೋಕ್ತಮೃಷಿಭಿಸ್ತತ್ತ್ವದರ್ಶಿಭಿಃ ॥ ೧೬ ॥

ಪ್ರೀಣಾತು ಭಗವಾನೀಶಃ ಕರ್ಮಣಾನೇನ ಶಾಶ್ವತಃ ।
ಕರೋತಿ ಸತತಂ ಬುದ್ಧ್ಯಾ ಬ್ರಹ್ಮಾರ್ಪಣಮಿದಂ ಪರಮ್ ॥ ೧೭ ॥

ಯದ್ವಾ ಫಲಾನಾಂ ಸನ್ನ್ಯಾಸಂ ಪ್ರಕುರ್ಯಾತ್ಪರಮೇಶ್ವರೇ ।
ಕರ್ಮಣಾಮೇತದಪ್ಯಾಹುರ್ಬ್ರಹ್ಮಾರ್ಪಣಮನುತ್ತಮಮ್ ॥ ೧೮ ॥

---

೧೫. ಕೊಡಬೇಕಾದ ವಸ್ತುವು ಬ್ರಹ್ಮವಸ್ತುವಿನಿಂದ ಕೊಡಲ್ಪಡುವುದು. ಬ್ರಹ್ಮವಸ್ತುವಿಗೆ ಕೊಡಲ್ಪಡುವುದು, ಬ್ರಹ್ಮವಸ್ತುವೇ ಕೊಡಲ್ಪಡುವುದು-ಎಂಬ ಸರ್ವ ಕರ್ಮೋಪಕರಣಗಳಲ್ಲಿ ಬ್ರಹ್ಮಭಾವನೆಯು ಮುಖ್ಯವಾದ ಬ್ರಹ್ಮಾರ್ಪಣ ಭಾವನೆಯು.

೧೬. ನಾನು ಕರ್ತೃಪುರುಷನಲ್ಲ. ಇದೆಲ್ಲವನ್ನೂ ಸರ್ವಾತ್ಮಕವಾದ ಬ್ರಹ್ಮ ವಸ್ತುವೇ ಮಾಡುವುದು– ಎಂಬ ಬುದ್ಧಿಯು ಬ್ರಹ್ಮಾರ್ಪಣ ಭಾವನೆಯೆಂದು ತತ್ತ್ವಜ್ಞರಾದ ಮುನಿಗಳಿಂದ ಹೇಳಲ್ಪಟ್ಟಿದೆ.

೧೭. ಈ ನನ್ನ ಕರ್ಮದಿಂದ ಭಗವಂತನೂ ಶಾಶ್ವತನೂ ಆದ ಈಶ್ವರನು ಸುಪ್ರೀತನಾಗಲಿ- ಎಂದು ಯಾವಾಗಲೂ ಬುದ್ಧಿಯಿಂದ ಧ್ಯಾನಿಸುವುದು- ಇದೊಂದು ಉತ್ತಮವಾದ ಬ್ರಹ್ಮಾರ್ಪಣ ಭಾವನೆಯು.

೧೮. ಅಥವಾ ಕರ್ಮಸಾಧ್ಯವಾದ ಫಲಗಳನ್ನು ಪರಮೇಶ್ವರಾರ್ಪಣ ಬುದ್ಧಿಯಿಂದ [illegible] ಗೆಯಿಂದ ಕರ್ಮಗಳ ಉತ್ತಮವಾದ ಬ್ರಹ್ಮಾರ್ಪಣವು.

ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಸಂಗವರ್ಜಿತಮ್ ।
ಕ್ರಿಯತೇ ವಿದುಷಾ ಕರ್ಮ ತದ್ಭವೇದಪಿ ಮೋಕ್ಷದಮ್ ॥ ೧೯ ॥

ಅಥವಾ ಯದಿ ಕರ್ಮಾಣಿ ಕುರ್ಯಾನ್ನಿತ್ಯಾನ್ಯಪಿ ದ್ವಿಜಃ ।
ಅಕೃತ್ವಾ ಫಲಸನ್ನ್ಯಾಸಂ ಬಧ್ಯತೇ ತತ್ಫಲೇನ ತು ॥ ೨೦ ॥

ತಸ್ಮಾತ್ಸರ್ವಪ್ರಯತ್ನೇನ ತ್ಯಕ್ತ್ವಾ ಕರ್ಮಾಶ್ರಿತಂ ಫಲಮ್ ।
ಅವಿದ್ವಾನಪಿ ಕುರ್ವೀತ ಕರ್ಮಾಪ್ನೋತಿ ಚಿರಾತ್ಪದಮ್ ॥ ೨೧ ॥

ಕರ್ಮಣಾ ಕ್ಷೀಯತೇ ಪಾಪಮೈಹಿಕಂ ಪೌರ್ವಿಕಂ ತಥಾ
ಮನಃ ಪ್ರಸಾದಮನ್ವೇತಿ ಬ್ರಹ್ಮವಿಜ್ಞಾಯತೇ ನರಃ ॥ ೨೨ ॥

---

೧೯. ಜ್ಞಾನಿಯಿಂದ ತನ್ನ ನಿಯತವಾದ ಕರ್ಮವು ಸಂಗರಹಿತವಾಗಿ ಕರ್ತವ್ಯವೆಂಬ ಬುದ್ಧಿಯಿಂದ ಮಾತ್ರ ಮಾಡಲ್ಪಟ್ಟರೆ ಆ ಕರ್ಮವು ಕೂಡ ಮೋಕ್ಷದಾಯಕವಾಗುವುದು.

೨೦. ಹೀಗೆಯೇ ದ್ವಿಜನು ತನ್ನ ನಿತ್ಯ ಕರ್ಮಗಳನ್ನು ಕರ್ತವ್ಯವೆಂಬ ಬುದ್ಧಿಯಿಂದ ಮೋಕ್ಷಾರ್ಥವಾಗಿ ಮಾಡಬಹುದು. ಫಲಸನ್ಯಾಸವನ್ನು ಮಾಡದವನು ಆ ಕರ್ಮಗಳ ಫಲದಿಂದ ಅವಶ್ಯವಾಗಿ ಬದ್ಧನಾಗುವನು.

೨೧. ಆದುದರಿಂದ ಕರ್ಮಸಾಧ್ಯವಾದ ಫಲಸಂಗವನ್ನು ಸರ್ವಪ್ರಯತ್ನದಿಂದ ಬಿಟ್ಟು ಅಜ್ಞಾನಿಯೂ ಕೂಡ ಕರ್ಮವನ್ನು ಆಚರಿಸಬೇಕು. ಅವನು ಆ ಕರ್ಮಬಲದಿಂದಲೇ ದೀರ್ಘಕಾಲದಿಂದ ಪರಮಪದವನ್ನು ಹೊಂದುವನು.

೨೨. ಕರ್ಮಾಚರಣದಿಂದ ಜನ್ಮ, ಪೂರ್ವಜನ್ಮಗಳ ಪಾಪಗಳು ಧ್ವಂಸವಾಗುವುವು, ಕರ್ಮದಿಂದ ಮನಸ್ಸು ಶಾಂತಿಯನ್ನು ಹೊಂದುವುದು. ಮತ್ತು ಅಂತಹ ಮಾನವನು ಬ್ರಹ್ಮಜ್ಞಾನಿಯಾಗುವನು.

ಕರ್ಮಣಾ ಸಹಿತಾಜ್ಞಾನಾತ್ ಸಮ್ಯಗ್ಯೋಗೋಽಭಿಜಾಯತೇ ।
ಜ್ಞಾನಂ ಚ ಕರ್ಮಸಹಿತಂ ಜಾಯತೇ ದೋಷವರ್ಜಿತಮ್ ॥ ೨೩ ॥

ತಸ್ಮಾತ್ ಸರ್ವಪ್ರಯತ್ನೇನ ಯತ್ರ ತತ್ರಾಶ್ರಮೇ ರತಃ ।
ಕರ್ಮಾಣೀಶ್ವರತುಷ್ಟ್ಯರ್ಥಂ ಕುರ್ಯಾನ್ನೈಷ್ಕರ್ಮ್ಯಮಾಪ್ನುಯಾತ್॥

ಸಂಪ್ರಾಪ್ಯ ಪರಮಂ ಜ್ಞಾನಂ ನೈಷ್ಕರ್ಮ್ಯಂ ತತ್ಪ್ರಸಾದತಃ ।
ಏಕಾಕೀ ನಿರ್ಮಮಃ ಶಾಂತೋ ಜೀವನ್ನೇವ ವಿಮುಚ್ಯತೇ ॥ ೨೫ ॥

ವೀಕ್ಷತೇ ಪರಮಾತ್ಮಾನಂ ಪರಂ ಬ್ರಹ್ಮ ಮಹೇಶ್ವರಮ್ ।
ನಿತ್ಯಾನಂದೀ ನಿರಾಭಾಸ್ತಸ್ಮಿನ್ನೇವ ಲಯಂ ವ್ರಜೇತ್ ॥ ೨೬ ॥

---

೨೩. ಕರ್ಮದಿಂದ ಸಹಿತವಾದ ಜ್ಞಾನದಿಂದ ಉತ್ತಮವಾದ ಯೋಗವು ಹುಟ್ಟುವುದು. ಯೋಗದಿಂದ ಕರ್ಮಸಹಿತವಾದ ಜ್ಞಾನವು ನಿಖಿಲದೋಷಗಳಿಂದ ವರ್ಜಿತವಾಗಿ ಸುಸ್ಥಿರವಾಗುವುದು.

೨೪. ಆದುದರಿಂದ ಯಾವುದಾದರೊಂದು ಆಶ್ರಮದಲ್ಲಿರುವ ಮನುಜನು ಸಮಸ್ತ ಪ್ರಯತ್ನದಿಂದ ಈಶ್ವರ ಸಂತುಷ್ಟಿಗೋಸ್ಕರ ಕರ್ಮಗಳನ್ನು ಆಚರಿಸಿ ಕಡೆಗೆ ವೈರಾಗ್ಯದಿಂದ ನೈಷ್ಕರ್ಮವನ್ನು ಹೊಂದಬೇಕು.

೨೫. ಪ್ರಕೃಷ್ಟವಾದ ಜ್ಞಾನವನ್ನು ಹೊಂದಿ ಅದರ ಮಹಿಮೆಯಿಂದ ನೈಷ್ಕರ್ಮ್ಯಯೋಗವನ್ನು ಪಡೆದು ಏಕಾಕಿಯೂ, ಮಮತಾರಹಿತನೂ, ಮತ್ತು ವಿಕಾರ ಗಳಿಂದ ಶಾಂತನೂ, ಆಗಿ ಜೀವಂತನಾಗಿರುವಾಗಲೇ ಮುಕ್ತಿಯನ್ನು ಹೊಂದುವನು.

೨೬. ಮತ್ತು ಜೀವನ್ಮುಕ್ತನು ಮಹೇಶ್ವರನೂ, ಪರಬ್ರಹ್ಮಾತ್ಮಕನೂ ಆದ ಪರಮಾತ್ಮನನ್ನು ಸಾಕ್ಷಾತ್ಕರಿಸಿ ಸಾಕ್ಷಾತ್ಕಾರದಿಂದ ನಿತ್ಯಾನಂದಿಯೂ, ವಿಕಲ್ಪಾ ಭಾಸರಹಿತನೂ ಆಗಿ ಪರಮಾತ್ಮನಲ್ಲಿಯೇ ಲಯವನ್ನು ಹೊಂದುತ್ತಾನೆ.

ತಸ್ಮಾತ್ಸೇವೇತ ಸತತಂ ಕರ್ಮಯೋಗಂ ಪ್ರಸನ್ನಧೀಃ ।
ತೃಪ್ತಯೇ ಪರಮೇಶಸ್ಯ ತತ್ಪದಂ ಯಾತಿ ಶಾಶ್ವತಮ್ ॥ ೨೭ ॥

ಏತದ್ವಃ ಕಥಿತಂ ಸರ್ವಂ ಚಾತುರಾಶ್ರಮ್ಯಮುತ್ತಮಮ್ ।
ನಹ್ಯೇತತ್ ಸಮತಿಕ್ರಮ್ಯ ಸಿದ್ಧಿಂ ವಿಂದತಿ ಮಾನವಃ ॥ ೨೮ ॥

ಇತಿ ಶ್ರೀ ಕೂರ್ಮಪುರಾಣೇ ತೃತೀಯೋಽಧ್ಯಾಯಃ

---

೨೭. ಆದ್ದರಿಂದ ಪ್ರಸನ್ನವಾದ ಬುದ್ಧಿಯುಳ್ಳವನಾಗಿ ಪರಮೇಶ್ವರನ ತೃಪ್ತಿಗೆ ಕರ್ಮಯೋಗವನ್ನು ಯಾವಾಗಲೂ ಸೇವಿಸಬೇಕು. ಅದನ್ನು ಸೇವಿಸಿರುವ ಮನುಜನು ಶಾಶ್ವತವಾದ ಬ್ರಹ್ಮಪದವನ್ನು ಹೊಂದುವನು.

೨೮. ಈ ರೀತಿಯಾಗಿ ನಿಮಗೆ ಉತ್ತಮವಾದ ಚಾತುರಾಶ್ರಮ್ಯವು ಪೂರ್ಣವಾಗಿ ಉಪದೇಶಿಸಲ್ಪಟ್ಟಿದೆ. ಇಂತಹ ಚಾತುರಾಶ್ರಮ್ಯವನ್ನು ಅತಿಕ್ರಮಿಸಿದ ಮಾನವನು ಸದ್ಗತಿ ಸಿದ್ಧಿಯನ್ನು ಹೊಂದುವುದಿಲ್ಲ.

ಕೂರ್ಮಪುರಾಣದಲ್ಲಿ ಮೂರನೆಯ ಅಧ್ಯಾಯವು ಮುಗಿದುದು.



ಶ್ರೀಃ

# ಕೂರ್ಮಪುರಾಣಂ

## ಚತುರ್ಥೋಽಧ್ಯಾಯಃ

### (ಪ್ರಾಕೃತ ಸರ್ಗಃ)

**ಸೂತ ಉವಾಚ :—**

**ಶ್ರುತ್ವಾಶ್ರಮವಿಧಿಂ ಕೃತ್ಸ್ನಮೃಷಯೋ ಹೃಷ್ಟಚೇತಸಃ ।**
**ನಮಸ್ಕೃತ್ಯ ಹೃಷೀಕೇಶಂ ಪುನರ್ವಚನಮಬ್ರುವನ್ ॥ ೧ ॥**

**ಮುನಯ ಊಚುಃ :—**

**ಭಾಷಿತಂ ಭವತಾ ಸರ್ವಂ ಚಾತುರಾಶ್ರಮ್ಯಮುತ್ತಮಮ್ ।**
**ಇದಾನೀಂ ಶ್ರೋತುಮಿಚ್ಛಾಮೋ ಯಥಾ ಸಂಭವತೇ ಜಗತ್ ॥ ೨ ॥**

---

### ನಾಲ್ಕನೆಯ ಅಧ್ಯಾಯವು.

೧. ಸೂತಮುನಿಯು ಇಂತೆಂದನು :—ಸಂಪೂರ್ಣ ಆಶ್ರಮ ವಿಧಾನವನ್ನು ಕೇಳಿ ಹೃಷ್ಟವಾದ ಅಂತರಂಗವುಳ್ಳ ಋಷಿಗಳು ವಿಷ್ಣುವನ್ನು ನಮಸ್ಕರಿಸಿ ಮತ್ತೆ ಈ ರೀತಿಯಾಗಿ ಪ್ರಶ್ನಿಸಿದರು.

೨. ಮುನಿಗಳು ಇಂತೆಂದರು :—ನಿನ್ನಿಂದ ಉತ್ತಮವಾದ ಚಾತುರಾಶ್ರಮ್ಯವು ಸಮಗ್ರವಾಗಿ ಉಪದೇಶಿಸಲ್ಪಟ್ಟಿತು. ಈಗ ಈ ಜಗತ್ತು ಹೇಗೆ ಸಂಭವಿಸುವುದೋ ಆ ಉತ್ಪತ್ತಿ ಪ್ರಕಾರವನ್ನು ಕೇಳಲು ಇಷ್ಟವುಳ್ಳವರಾಗಿದ್ದೇವೆ.

ಕುತಃ ಸರ್ವಮಿದಂ ಜಾತಂ ಕಸ್ಮಿಂಶ್ಚ ಲಯಮೇಷ್ಯತಿ ।
ನಿಯಂತಾ ಕಶ್ಚ ಸರ್ವೇಷಾಂ ವದಸ್ವ ಪುರುಷೋತ್ತಮ ॥ ೩ ॥

ಶ್ರುತ್ವಾ ನಾರಾಯಣೋ ವಾಕ್ಯಮೃಷೀಣಾಂ ಕೂರ್ಮರೂಪಧೃಕ್।
ಪ್ರಾಹ ಗಂಭೀರಯಾ ವಾಚಾ ಭೂತಾನಾಂ ಪ್ರಭವೋಽವ್ಯಯಃ ॥ ೪ ॥

ಕೂರ್ಮ ಉವಾಚ :—

ಮಹೇಶ್ವರಃ ಪರೋಽವ್ಯಕ್ತಶ್ಚತುರ್ವ್ಯೂಹಃ ಸನಾತನಃ ।
ಅನಂತಶ್ಚಾಪ್ರಮೇಯಶ್ಚ ನಿಯಂತಾ ಸರ್ವತೋಮುಖಃ ॥ ೫ ॥

ಅವ್ಯಕ್ತಂ ಕಾರಣಂ ಯತ್ತನ್ನಿತ್ಯಂ ಸದಸದಾತ್ಮಕಮ್ ।
ಪ್ರಧಾನಂ ಪ್ರಕೃತಿಶ್ಚೇತಿ ಯಮಾಹುಸ್ತತ್ತ್ವಚಿಂತಕಾಃ ॥ ೬ ॥

---

೩. ಈ ಎಲ್ಲ ಜಗತ್ತು ಯಾವಕಾರಣದಿಂದ ಹುಟ್ಟಿದೆ ? ಎಲ್ಲಿ ಲಯವನ್ನು ಹೊಂದುವುದು ? ಮತ್ತು ಎಲ್ಲ ವಸ್ತುಗಳಿಗೂ ನಿಯಾಮಕನು ಯಾರು ? ಪುರುಷೋತ್ತಮನೆ ! ಇದೆಲ್ಲವನ್ನೂ ನಮಗೆ ಹೇಳು.

೪. ಸಮಸ್ತ ಭೂತಗಳಿಗೆ ಕಾರಣನೂ, ವ್ಯಯವಿಲ್ಲದವನೂ ಮತ್ತು ಕೂರ್ಮ ರೂಪವನ್ನು ಧರಿಸಿದವನೂ ಆದ ನಾರಾಯಣನು ಋಷಿಗಳ ಆ ವಚನವನ್ನು ಕೇಳಿ ಗಂಭೀರವಾದ ವಚನವನ್ನು ಹೇಳಿದನು.

೫. ಕೂರ್ಮಮೂರ್ತಿಯು ಇಂತೆಂದನು :— ಜಗನ್ಮೂಲ ತತ್ತ್ವಸ್ವರೂಪ ನಾದ ಪರಮಾತ್ಮನು ಮಹೇಶ್ವರನೂ, ಸರ್ವಾತೀತನೂ ಅವ್ಯಕ್ತನೂ, ನಾಲ್ಕು ವ್ಯೂಹಗಳಿಂದ ಕೂಡಿದವನೂ, ಅನಾದಿಯೂ, ಅನಂತನೂ, ಸಕಲಪ್ರಮಾಣಾ ಗೋಚರನೂ, ನಿಯಾಮಕನೂ ಮತ್ತು ಸರ್ವತೋಮುಖನೂ ಆಗಿರುವನು.

೬. ಅಂತಹ ಜಗತ್ಕಾರಣವನ್ನು ಆಯಾಯ ತತ್ತ್ವಚಿಂತಕರು ಅವ್ಯಕ್ತ, ಕಾರಣ, ನಿತ್ಯ, ಸತ್- ಅಸತ್‌ಸ್ವರೂಪ, ಪ್ರಧಾನ, ಪ್ರಕೃತಿ ಮುಂತಾದ ವಿಶೇಷಣ ನಾಮವಾಚಕ ಶಬ್ದಗಳಿಂದ ವಿವಿಧವಾಗಿ ವ್ಯವಹರಿಸುತ್ತಾರೆ.

ಗಂಧವರ್ಣರಸೈರ್ಹೀನಂ ಶಬ್ದಸ್ಪರ್ಶವಿವರ್ಜಿತಮ್ ।
ಅಜರಂ ಧ್ರುವಮಕ್ಷಯ್ಯಂ ನಿತ್ಯಂ ಸ್ವಾತ್ಮನ್ಯವಸ್ಥಿತಮ್ ॥ ೭ ॥

ಜಗದ್ಯೋನಿರ್ಮಹಾಭೂತಂ ಪರಬ್ರಹ್ಮ ಸನಾತನಮ್ ।
ವಿಗ್ರಹಃ ಸರ್ವಭೂತಾನಾಮಾತ್ಮನಾಧಿಷ್ಠಿತಂ ಮಹತ್ ॥ ೮ ॥

ಅನಾದ್ಯಂತಮಜಂ ಸೂಕ್ಷ್ಮಂ ತ್ರಿಗುಣಂ ಪ್ರಭವಾಪ್ಯಯಮ್ ।
ಅಸಾಂಪ್ರತಮವಿಜ್ಞೇಯಂ ಬ್ರಹ್ಮಾಗ್ರೇ ಸಮವರ್ತತ ॥ ೯ ॥

ಗುಣಸಾಮ್ಯೇ ತದಾ ತಸ್ಮಿನ್ ಪುರುಷೇ ವಾತ್ಮನಿ ಸ್ಥಿತೇ।
ಪ್ರಾಕೃತಃ ಪ್ರಲಯೋ ಜ್ಞೇಯೋ ಯಾವದ್ವಿಶ್ವಸಮುದ್ಭವಃ ॥ ೧೦ ॥

---

೭. ಅಂತಹ ಪ್ರಧಾನವು ಗಂಧ, ರೂಪ, ರಸ, ಶಬ್ದ, ಸ್ಪರ್ಶಗಳೆಂಬ ಭೌತಿಕ ಗುಣಗಳಿಂದ ರಹಿತವೂ, ಜರಾವರ್ಜಿತವೂ, ಸ್ಥಿರವೂ, ಅಕ್ಷಯವೂ, ನಿತ್ಯವೂ ಆಗಿ ಸ್ವಾತ್ಮಸ್ವರೂಪದಲ್ಲಿ ಸ್ಥಿತಿಯನ್ನು ಹೊಂದಿರುವುದು.

೮. ಮತ್ತು ಆ ಪ್ರಧಾನ ತತ್ತ್ವವು ಜಗತ್ತಿಗೆ ಯೋನಿಯೂ, ಮಹಾಭೂತ ಸ್ವರೂಪವೂ, ಪರಬ್ರಹ್ಮ ಸ್ವರೂಪವೂ, ಸನಾತನವೂ, ಸರ್ವಭೂತಗಳ ವಿಗ್ರಹರೂಪವೂ, ಮಹತ್ತರವೂ ಆಗಿ ಆತ್ಮನಿಂದ ಅಧಿಷ್ಠಿತವಾಗಿರುವುದು.

೯. ಮತ್ತು ಆದಿ- ಅಂತವರ್ಜಿತವೂ, ಜನ್ಮರಹಿತವೂ, ಸೂಕ್ಷ್ಮವೂ, ಗುಣತ್ರಯಸಮಷ್ಟಿರೂಪವೂ, ಉತ್ಪತ್ತಿಲಯಾಧಾರವೂ, ತ್ರಿಕಾಲವ್ಯಾಪಿಯೂ ಮತ್ತು ದುರ್ಜ್ಞೇಯವೂ ಆಗಿರುವುದು. ಅದರಿಂದ ಮೊದಲು ಬ್ರಹ್ಮನು ಅಥವಾ ಮಹತ್ತತ್ತ್ವವು ಜನಿಸಿದೆ.

೧೦. ಗುಣತ್ರಯದ ಸಾಮ್ಯಾವಸ್ಥೆಯೆಂಬ ಪ್ರಧಾನವು ತನ್ನ ನಿಜಸ್ವರೂಪದಿಂದ ಆತ್ಮನಲ್ಲಿರುವಾಗ ಮತ್ತೆ ವಿಶ್ವವು ಹುಟ್ಟುವವರೆಗೆ ಪ್ರಾಕೃತ ಪ್ರಲಯವೆಂದು ತಿಳಿಯಬೇಕು.

ಬ್ರಾಹ್ಮೀ ರಾತ್ರಿರಿಯಂ ಪ್ರೋಕ್ತಾ ಹ್ಯಹಃ ಸೃಷ್ಟಿರುದಾಹೃತಾ ।
ಅಹರ್ನವಿದ್ಯತೇ ತಸ್ಯ ನ ರಾತ್ರಿರ್ಹ್ಯುಪಚಾರತಃ ॥ ೧೧ ॥

ನಿಶಾಂತೇ ಪ್ರತಿಬುದ್ಧೋಽಸೌ ಜಗದಾದಿರನಾದಿಮಾನ್ ।
ಸರ್ವಭೂತಮಯೋಽವ್ಯಕ್ತಾದಂತರ್ಯಾಮೀಶ್ವರಃ ಪರಃ ॥ ೧೨ ॥

ಪ್ರಕೃತಿಂ ಪುರುಷಂ ಚೈವ ಪ್ರವಿಶ್ಯಾಶು ಮಹೇಶ್ವರಃ ।
ಕ್ಷೋಭಯಾಮಾಸ ಯೋಗೇನ ಪರೇಣ ಪರಮೇಶ್ವರಃ ॥ ೧೩ ॥

ಯಥಾ ಮದೋ ನರಸ್ತ್ರೀಣಾಂ ಯಥಾ ವಾ ಮಾಧವೋಽನಿಲಃ ।
ಅನುಪ್ರವಿಷ್ಟಃ ಕ್ಷೋಭಾಯ ತಥಾಽಸೌ ಯೋಗಮೂರ್ತಿಮಾನ್ ॥೧೪॥

ಸ ಏವ ಕ್ಷೋಭಕೋ ವಿಪ್ರಾಃ ಕ್ಷೋಭ್ಯಶ್ಚ ಪರಮೇಶ್ವರಃ ।
ಸ ಸಂಕೋಚವಿಕಾಸಾಭ್ಯಾಂ ಪ್ರಧಾನತ್ವೇ ವ್ಯವಸ್ಥಿತಃ ॥ ೧೫ ॥

---

೧೧. ಇಂತಹ ಪ್ರಲಯವು ಬ್ರಹ್ಮನ ರಾತ್ರಿಯೆಂದು ಹೇಳಲ್ಪಟ್ಟಿದೆ. ಹಾಗೂ ಸೃಷ್ಟಿಯು ಅಹಸ್ಸು ಎಂದು ಗಣಿಸಲ್ಪಟ್ಟಿದೆ. ಬ್ರಹ್ಮನಿಗೆ ಅಹಸ್ಸು ರಾತ್ರಿ ಯಾವುದೂ ಇಲ್ಲ. ಇದೆಲ್ಲವೂ ಔಪಚಾರಿಕವಾದ ಕಲ್ಪನೆಯು.

೧೨. ಜಗತ್ತಿಗೆ ಆದಿಯಾದ, ಅನಾದಿಯಾದ ಮತ್ತು ಅವ್ಯಕ್ತದ ಮೂಲಕ ಸರ್ವಭೂತಗಳಿಗೆ ಅಂತರ್ಯಾಮಿಯಾದ ಪರಮಾತ್ಮನು ಆ ರಾತ್ರಿಯ ಅವಸಾನ ಕಾಲದಲ್ಲಿ ಪ್ರಬೋಧವನ್ನು ಹೊಂದುವನು.

೧೩. ಮಹೇಶ್ವರನು ಪ್ರಕೃತಿಯನ್ನು ಮತ್ತು ಪುರುಷನನ್ನು ಉತ್ತಮವಾದ ಯೋಗದಿಂದ ಶೀಘ್ರವಾಗಿ ಅಂತಃಪ್ರವೇಶಮಾಡಿ ಕ್ಷೋಭವನ್ನುಂಟುಮಾಡಿದನು.

೧೪. ಮದ್ಯಪಾನದಿಂದ ಉಂಟಾದ ಮದವು ಅಥವಾ ವಸಂತಮಾಸದ ಮಲಯಮಾರುತವು ಸ್ತ್ರೀಯರಲ್ಲಿ ಪ್ರವೇಶಿಸಿ ಕ್ಷೋಭವನ್ನು ಹುಟ್ಟಿಸುವಂತೆ ಯೋಗ ಮೂರ್ತಿಯುಳ್ಳ ಪರಮೇಶ್ವರನು ಪ್ರಕೃತಿ-ಪುರುಷರ ಕ್ಷೋಭಕ್ಕೆ ಕಾರಣನಾದನು.

೧೫. ವಿಪ್ರರೆ! ಆ ಮಹೇಶ್ವರನೇ ಕ್ಷೋಭಕನೂ, ಕ್ಷೋಭ್ಯನೂ ಆಗಿರುವನು. ಆ ಮಹೇಶ್ವನರು ಸಂಕೋಚ- ವಿಕಾಸ ಭಾವಗಳನ್ನು ಸ್ವಸಂಕಲ್ಪಮಾತ್ರದಿಂದ ಹೊಂದಿ ಪ್ರಧಾನರೂಪದಿಂದ ವ್ಯವಸ್ಥೆಯನ್ನು ಹೊಂದಿರುವನು.

ಪ್ರಧಾನಾತ್ ಕ್ಷೋಭ್ಯಮಾನಾಚ್ಚ ತಥಾ ಪುಂಸಃ ಪುರಾತನಾತ್ ।
ಪ್ರಾದುರಾಸೀನ್ಮಹದ್ಬೀಜಂ ಪ್ರಧಾನಪುರುಷಾತ್ಮಕಮ್ ॥ ೧೬ ॥

ಮಹಾನಾತ್ಮಾ ಮತಿರ್ಬ್ರಹ್ಮಾ ಪ್ರಬುದ್ಧಿಃ ಖ್ಯಾತಿರೀಶ್ವರಃ ।
ಪ್ರಜ್ಞಾ ಧೃತಿಃ ಸ್ಮೃತಿಃ ಸಂವಿದೇತಸ್ಮಾದಿತಿ ತತ್ ಸ್ಮೃತಮ್ ॥ ೧೭ ॥

ವೈಕಾರಿಕಸ್ತೈಜಸಶ್ಚ ಭೂತಾದಿಶ್ಚೈವ ತಾಮಸಃ ।
ತ್ರಿವಿಧೋಽಯಮಹಂಕಾರೋ ಮಹತಃ ಸಂಬಭೂವ ಹ ॥ ೧೮ ॥

ಅಹಂಕಾರೋಽಭಿಮಾನಶ್ಚ ಕರ್ತಾ ಮಂತಾ ಚ ಸ ಸ್ಮೃತಃ ।
ಆತ್ಮಾ ಚ ಮತ್ಪರೋ ಜೀವೋ ಗತಃ ಸರ್ವಾಃ ಪ್ರವೃತ್ತಯಃ ॥ ೧೯ ॥

---

೧೬. ಪುರಾತನನಾದ ಪುರುಷನಿಂದಲೂ ಕ್ಷೋಭಗೊಂಡಿರುವ ಪ್ರಧಾನದಿಂದಲೂ, ಪ್ರಧಾನ- ಪುರುಷರ ಅಂಶದ್ವಯಗರ್ಭಿತವಾದ ಮಹತ್ತತ್ತ್ವವೆಂಬ ಬೀಜವು ಪ್ರಾದುರ್ಭವಿಸಿತು.

೧೭. ಮಹತ್ತತ್ತ್ವವು ಸರ್ವಚೇತನಾಂಶ ಸಮಷ್ಟಿರೂಪದಿಂದ ಮಹತ್ತತ್ತ್ವ, ಆತ್ಮಾ, ಮನನಶಕ್ತಿ, ಮಹತ್ತರವಸ್ತು, ಪ್ರಬೋಧ, ಖ್ಯಾತಿ, ನಿಯಾಮಕ, ಪ್ರಜ್ಞಾ, ಧೃತಿ, ಸ್ಮೃತಿ, ಸಂವಿತ್ ಎಂಬ ಸಕಲ ಅಂಶಗಳು ಸ್ಫುರಿಸುವುವೆಂದು ಸ್ಮರಿಸಲ್ಪಟ್ಟಿದೆ.

೧೮. ಮುಂದೆ ಮಹತ್ತತ್ತ್ವದಿಂದ ವೈಕಾರಿಕ, ತೈಜಸ, ತಾಮಸವಾದ ಭೂತಾದಿ ಎಂಬುದಾಗಿ ಮೂರು ಪ್ರಭೇದಗಳಿಂದ ಕೂಡಿದ ಅಹಂಕಾರವು ಉತ್ಪನ್ನವಾಯಿತು.

೧೯. ಆ ಅಹಂಕಾರವು ಅಭಿಮಾನಸ್ವರೂಪವೂ, ಕರ್ತೃತ್ವ, ಮಂತೃತ್ವ ಮುಂತಾದ ಧರ್ಮಗಳುಳ್ಳದ್ದೂ ಆಗಿ ಸ್ಮರಿಸಲ್ಪಟ್ಟಿರುವುದು. ಆತ್ಮವು ಇಂತಹ ಅಹಂಕಾರ ಶರಣವಾಗಿ ತನ್ಮೂಲಕವಾಗಿ ಸಕಲ ಪ್ರವೃತ್ತಿಗಳಿಗೆ ಆಸ್ಪದವಾಗಿರುವುದು.

ಪಂಚಭೂತಾನ್ಯಹಂಕಾರಾತ್ತನ್ಮಾತ್ರಾಣಿ ಚ ಜಜ್ಞಿರೇ ।
ಇಂದ್ರಿಯಾಣಿ ಚ ಸರ್ವಾಣಿ ಸರ್ವಂ ತಸ್ಯಾತ್ಮಜಂ ಜಗತ್ ॥ ೨೦ ॥

ಮನಸ್ತ್ವವ್ಯಕ್ತಜಂ ಪ್ರೋಕ್ತಂ ವಿಕಾರಃ ಪ್ರಥಮಃ ಸ್ಮೃತಃ ।
ಯೇನಾಸೌ ಜಾಯತೇ ಕರ್ತಾ ಭೂತಾದೀಂಶ್ಚಾನುಪಶ್ಯತಿ ॥ ೨೧ ॥

ವೈಕಾರಿಕಾದಹಂಕಾರಾತ್ಸರ್ಗೋ ವೈಕಾರಿಕೋಽಭವತ್ ।
ತೈಜಸಾನೀಂದ್ರಿಯಾಣಿ ಸ್ಯುರ್ದೇವಾ ವೈಕಾರಿಕಾ ದಶ ॥ ೨೨ ॥

ಏಕಾದಶಂ ಮನಸ್ತತ್ರ ಸ್ವಗುಣೇನೋಭಯಾತ್ಮಕಮ್ ।
ಭೂತತನ್ಮಾತ್ರಸರ್ಗೋಽಯಂ ಭೂತಾದೇರಭವದ್ದ್ವಿಜಾಃ ॥ ೨೩ ॥

---

೨೦. ಆ ಅಹಂಕಾರದಿಂದ ಪಂಚಭೂತತನ್ಮಾತ್ರಗಳೂ ಮತ್ತು ಸಮಸ್ತ ಇಂದ್ರಿಯಗಳೂ ಹುಟ್ಟಿದುವು. ಸಾಮಾನ್ಯವಾಗಿ ಎಲ್ಲ ಜಗತ್ತು ಅಹಂಕಾರದ ಕಾರ್ಯ ರೂಪವಾಗಿರುವುದು.

೨೧. ಮನಸ್ಸು ಅವ್ಯಕ್ತತತ್ತ್ವದಿಂದ ಮೊದಲನೆಯ ವಿಕಾರ ರೂಪವಾಗಿ ಜನಿಸಿದೆಯೆಂದು ಸ್ಮರಿಸಲ್ಪಟ್ಟಿರುವುದು. ಅಂತಹ ಪ್ರಥಮ ವಿಕಾರಪರನಾದ ಆತ್ಮನು ಕರ್ತೃರೂಪದಿಂದ ಪರಿಣತನಾಗಿ ಭೂತಾದಿ ಮುಂತಾದುವುಗಳಿಗೆ ಸಾಕ್ಷಿಯಾಗುವನು.

೨೨. ವೈಕಾರಿಕವಾದ ಅಹಂಕಾರದಿಂದ ವೈಕಾರಿಕ ಸೃಷ್ಟಿಯು ಉಂಟಾಯಿತು. ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳೆಂಬ ತೈಜಸ ಪ್ರಕಾಶರೂಪವಾದ ಹತ್ತು ಇಂದ್ರಿಯಗಳು ವೈಕಾರಿಕ ಸೃಷ್ಟಿಯಲ್ಲಿ ಸೇರಿರುವುವು.

೨೩. ಹತ್ತು ಇಂದ್ರಿಯಗಳ ಸಮಷ್ಟಿಗೆ ಹನ್ನೊಂದನೆಯದಾದ ಮನಸ್ಸು ತನ್ನ ಅಸಾಧಾರಣ ಗುಣದಿಂದ ಜ್ಞಾನ, ಕ್ರಿಯಾ, ಶಕ್ತಿಗಳಿಂದ ಕೂಡಿದುದಾಯಿತು. ದ್ವಿಜರೆ! ಭೂತತನ್ಮಾತ್ರಗಳ ಸೃಷ್ಟಿಯು ಭೂತಾದಿ ಎಂಬ ಅಹಂಕಾರದಿಂದಜನಿಸಿತು.

ಭೂತಾದಿಸ್ತು ವಿಕುರ್ವಾಣಃ ಶಬ್ದಮಾತ್ರಂ ಸಸರ್ಜ ಹ ।
ಆಕಾಶೋ ಜಾಯತೇ ತಸ್ಮಾತ್ತಸ್ಯ ಶಬ್ದೋ ಗುಣೋ ಮತಃ ॥ ೨೪ ॥

ಆಕಾಶಸ್ತು ವಿಕುರ್ವಾಣಃ ಸ್ಪರ್ಶಮಾತ್ರಂ ಸಸರ್ಜ ಹ ।
ವಾಯುರುತ್ಪದ್ಯತೇ ತಸ್ಮಾತ್ತಸ್ಯ ಸ್ಪರ್ಶಂ ಗುಣಂ ವಿದುಃ ॥ ೨೫ ॥

ವಾಯುಶ್ಚಾಪಿ ವಿಕುರ್ವಾಣೋ ರೂಪಮಾತ್ರಂ ಸಸರ್ಜ ಹ ।
ಜ್ಯೋತಿರುತ್ಪದ್ಯತೇ ವಾಯೋಸ್ತದ್ರೂಪಗುಣಮುಚ್ಯತೇ ॥ ೨೬ ॥

ಜ್ಯೋತಿಶ್ಚಾಪಿ ವಿಕುರ್ವಾಣಂ ರಸಮಾತ್ರಂ ಸಸರ್ಜ ಹ ।
ಸಂಭವಂತಿ ತತೋಽಂಭಾಂಸಿ ರಸಾಧಾರಾಣಿ ತಾನಿ ಚ ॥ ೨೭ ॥

---

೨೪. ಭೂತಾದಿಯು ವಿಕಾರೋನ್ಮುಖವಾಗಿ ಶಬ್ದತನ್ಮಾತ್ರವನ್ನು ಸೃಷ್ಟಿ ಮಾಡಿತು. ಅದರಿಂದ ಆಕಾಶ ಮಹಾಭೂತವು ಜನಿಸುತ್ತದೆ. ಆದ್ದರಿಂದ ಆಕಾಶಕ್ಕೆ ಶಬ್ದವು ಸ್ವಗುಣವೆಂದು ಹೇಳಲ್ಪಟ್ಟಿದೆ.

೨೫. ಆಕಾಶವು ಕಾರ್ಯೋನ್ಮುಖವಾಗಿ ಸ್ಪರ್ಶತನ್ಮಾತ್ರವನ್ನು ಪ್ರಸವಿಸಿತು. ಅದರಿಂದ ವಾಯುಮಹಾಭೂತವು ಹುಟ್ಟಿತು. ಆದ್ದರಿಂದ ವಾಯುವಿಗೆ ಸ್ಪರ್ಶವು ಗುಣವೆಂದು ಅರಿಯುತ್ತಾರೆ.

೨೬. ವಾಯುವು ಕಾರ್ಯೋನ್ಮುಖವಾಗಿ ರೂಪತನ್ಮಾತ್ರವನ್ನು ಸೃಷ್ಟಿ ಮಾಡಿತು. ಆದ್ದರಿಂದ ವಾಯುವಿನಿಂದ ತೇಜಸ್ಸು ಹುಟ್ಟಿತು. ಅಂತಹ ತೇಜಸ್ಸಿಗೆ ರೂಪವು ಅಸಾಧಾರಣವಾದ ಗುಣವು.

೨೭. ತೇಜಸ್ಸು ವಿಕಾರ ಸೃಷ್ಟಿಯಲ್ಲಿ ಉನ್ಮುಖವಾಗಿ ರಸತನ್ಮಾತ್ರವನ್ನು ಸೃಷ್ಟಿಮಾಡಿತು. ಅಂತಹ ರಸತನ್ಮಾತ್ರದಿಂದ ವಿವಿಧ ಜಲಗಳು ಹುಟ್ಟಿದುವು. ಜಲಗಳು ರಸ ಗುಣಕ್ಕೆ ಆಧಾರವಾಗಿರುವುವು.

ಆಪಶ್ಚಾಪಿ ವಿಕುರ್ವಾಣಾ ಗಂಧಮಾತ್ರಂ ಸಸರ್ಜಿರೇ ।
ಸಂಘಾತೋ ಜಾಯತೇ ತಸ್ಮಾತ್ತಸ್ಯ ಗಂಧೋ ಗುಣೋ ಮತಃ ॥೨೮॥

ಆಕಾಶಂ ಶಬ್ದಮಾತ್ರಂ ತು ಸ್ಪರ್ಶಮಾತ್ರಂ ಸಮಾವೃಣೋತ್ ।
ದ್ವಿಗುಣಸ್ತು ತತೋ ವಾಯುಃ ಶಬ್ದಸ್ಪರ್ಶಾತ್ಮಕೋಽಭವತ್ ॥ ೨೯ ॥

ರೂಪಂ ತಥೈವಾವಿಶತಃ ಶಬ್ದಸ್ಪರ್ಶೌ ಗುಣಾವುಭೌ ।
ತ್ರಿಗುಣಃ ಸ್ಯಾತ್ತತೋ ವಹ್ನಿಃ ಸ ಶಬ್ದಸ್ಪರ್ಶರೂಪವಾನ್ ॥ ೩೦ ॥

ಶಬ್ದಃ ಸ್ಪರ್ಶಶ್ಚ ರೂಪಂ ಚ ರಸಮಾತ್ರಂ ಸಮಾವಿಶತ್ ।
ತಸ್ಮಾಚ್ಚತುರ್ಗಣಾ ಆಪೋ ವಿಜ್ಞೇಯಾಸ್ತು ರಸಾತ್ಮಿಕಾಃ ॥ ೩೧ ॥

---

೨೮. ಜಲಗಳು ಕಾರ್ಯಸೃಷ್ಟಿಯಲ್ಲಿ ಉನ್ಮುಖವಾಗಿ ಗಂಧತನ್ಮಾತ್ರವನ್ನು ಸೃಷ್ಟಿಸಿದುವು. ಆ ಗಂಧತನ್ಮಾತ್ರದಿಂದ ಕಾಠಿನ್ಯಗುಣವುಳ್ಳ ಪೃಥಿವಿಯೆಂಬ ಸಂಘಾತ ಮಹಾಭೂತವು ಜನಿಸಿತು. ಪೃಥಿವಿಗೆ ಗಂಧವು ಗುಣವೆಂದು ಸಮ್ಮತವಾಗಿದೆ.

೨೯. ಆಕಾಶದ ತತ್ತ್ವರೂಪವಾದ ಶಬ್ದತನ್ಮಾತ್ರವು ಸ್ಪರ್ಶತನ್ಮಾತ್ರವನ್ನು ಆವರಿಸಿತು. ಆದ್ದರಿಂದ ಅದರಿಂದ ಹುಟ್ಟಿದ ವಾಯುವು ಶಬ್ದ, ಸ್ಪರ್ಶಗಳೆಂಬ ಎರಡು ಗುಣಗಳುಳ್ಳದ್ದಾಯಿತು.

೩೦. ಹಾಗೆಯೇ ಶಬ್ದ-ಸ್ಪರ್ಶವೆಂಬ ಎರಡು ಗುಣಗಳು ರೂಪತನ್ಮಾತ್ರವನ್ನು ಆವರಿಸಿಕೊಂಡುವು. ಆದ್ದರಿಂದ ಅಗ್ನಿಯು ಶಬ್ದ, ಸ್ಪರ್ಶ, ರೂಪವೆಂಬ ಮೂರು ಗುಣಗಳ ಸಂಪರ್ಕವನ್ನು ಹೊಂದಿತು.

೩೧. ಶಬ್ದ, ಸ್ಪರ್ಶ, ರೂಪಗಳು ರಸತನ್ಮಾತ್ರವನ್ನು ಆವೇಶಮಾಡಿದುವು. ಆದ್ದರಿಂದ ರಸಗುಣಮಯವಾದ ಜಲಗಳು ಶಬ್ದ, ಸ್ಪರ್ಶ, ರೂಪ, ರಸವೆಂಬ ನಾಲ್ಕು ಗುಣಗಳಿಂದ ಕೂಡಿರುವುವು, ಎಂದು ಅರಿಯಬೇಕು.

ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗಂಧಂ ಸಮಾವಿಶತ್ ।
ತಸ್ಮಾತ್ಪಂಚ ಗುಣಾ ಭೂಮಿಃ ಸ್ಥೂಲಾ ಭೂತೇಷು ಶಬ್ದ್ಯತೇ ॥ ೩೨ ॥

ಶಾಂತಾ ಘೋರಾಶ್ಚ ಮೂಢಾಶ್ಚ ವಿಶೇಷಾಸ್ತೇನ ತೇ ಸ್ಮೃತಾಃ ।
ಪರಸ್ಪರಾನುಪ್ರವೇಶಾದ್ಧಾರಯಂತಿ ಪರಸ್ಪರಮ್ ॥ ೩೩ ॥

ಏತೇ ಸಪ್ತ ಮಹಾತ್ಮಾನೋ ಹ್ಯನ್ಯೋನ್ಯಸ್ಯ ಸಮಾಶ್ರಯಾತ್ ।
ನಾಶಕ್ನುವನ್ ಪ್ರಜಾಃ ಸ್ರಷ್ಟುಮಸಮಾಗಮ್ಯ ಕೃತ್ಸ್ನಶಃ ॥ ೩೪ ॥

ಪುರುಷಾಧಿಷ್ಠಿತತ್ವಾಚ್ಚ ಅವ್ಯಕ್ತಾನುಗ್ರಹೇಣ ಚ ।
ಮಹದಾದಯೋ ವಿಶೇಷಾಂತಾಃ ಹ್ಯಂಡಮುತ್ಪಾದಯಂತಿ ತೇ ॥ ೩೫ ॥

---

೩೨. ಹಾಗೆಯೇ ಶಬ್ದ, ಸ್ಪರ್ಶ, ರೂಪ, ರಸಗುಣಗಳು ಗಂಧತನ್ಮಾತ್ರವನ್ನು ಆವರಿಸಿದುವು. ಆದ್ದರಿಂದ ರಸಗುಣಮಯವಾದ ಜಲಗಳು ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧವೆಂಬ ಪಂಚಗುಣಗಳಿಂದ ಕೂಡಿದ ಪೃಥವಿಯು ಪಂಚಮಹಾಭೂತಗಳಲ್ಲಿ ಸ್ಥೂಲವೆಂದು ಕರೆಯಲ್ಪಡುತ್ತದೆ.

೩೩. ಈ ರೀತಿಯಾಗಿ ಹುಟ್ಟಿರುವ ವಿಶೇಷ ಅಥವಾ ವಿಕಾರಗಳು ಶಾಂತ, ಘೋರ ಮತ್ತು ಮೂಢ ಎಂದು ಮೂರು ಬಗೆಯಿಂದ ಸ್ಮರಿಸಲ್ಪಟ್ಟಿವೆ. ಇವುಗಳು ಪರಸ್ಪರ ಅನುಪ್ರವೇಶದಿಂದ ಪರಸ್ಪರ ತತ್ತ್ವಗಳನ್ನು ಧರಿಸಿಕೊಂಡಿವೆ.

೩೪. ಮಹತ್ತತ್ತ್ವ ಆದಿಯಾಗಿ ಭೂತಾಂತವಾದ ಈ ಏಳು ಮಹಾತತ್ತ್ವಗಳು ಅನ್ಯೋನ್ಯವಾಗಿ ಸಹಾಯಾಕಾಂಕ್ಷೆಯಿರುವುದರಿಂದ ಸಂಪೂರ್ಣ ಸಂಘಾತ ರೂಪವನ್ನು ಹೊಂದದೆ ಪ್ರಜೆಗಳನ್ನು ಸೃಷ್ಟಿಸಲು ಸಮರ್ಥಗಳಾಗಲಿಲ್ಲ.

೩೫. ಆದರೆ ಆ ಮಹದಾದಿ ವಿಶೇಷಾಂತ ತತ್ತ್ವಗಳು ಚೇತನನಿಂದ ಅಧಿಷ್ಠಿತವಾದದ್ದರಿಂದಲೂ ಮತ್ತು ಅವ್ಯಕ್ತತತ್ತ್ವದ ಅನುಗ್ರಹದಿಂದಲೂ ಅಂಡವನ್ನು ಸೃಷ್ಟಿಸುತ್ತವೆ.

ಏಕಕಾಲಸಮುತ್ಪನ್ನಂ ಜಲಬುದ್ಬುದವಚ್ಚ ತತ್ ।
ವಿಶೇಷೇಭ್ಯೋಽಂಡಮಭವತ್ ಬೃಹತ್ತದುದಕೇಶಯಮ್ ॥ ೩೬ ॥

ತಸ್ಮಿನ್ ಕಾರ್ಯಸ್ಯ ಕರಣಂ ಸಂಸಿದ್ಧಂ ಪರಮೇಷ್ಠಿನಃ ।
ಪ್ರಾಕೃತೇಽಂಡೇ ವಿವೃದ್ಧೇ ತು ಕ್ಷೇತ್ರಜ್ಞೋ ಬ್ರಹ್ಮಸಂಜ್ಞಿತಃ ॥ ೩೭ ॥

ಸ ವೈ ಶರೀರೀ ಪ್ರಥಮಃ ಸ ವೈ ಪುರುಷ ಉಚ್ಯತೇ ।
ಆದಿಕರ್ತಾ ಸ ಭೂತಾನಾಂ ಬ್ರಹ್ಮಾಗ್ರೇ ಸಮವರ್ತತ ॥ ೩೮ ॥

ಯಮಾಹುಃ ಪುರುಷಂ ಹಂಸಂ ಪ್ರಧಾನಾತ್ಪರತಃ ಸ್ಥಿತಮ್ ।
ಹಿರಣ್ಯಗರ್ಭಂ ಕಪಿಲಂ ಛಂದೋಮೂರ್ತಿಂ ಸನಾತನಮ್ ॥ ೩೯ ॥

---

೩೬. ಆಗ ಆ ವಿಶೇಷಗಳಿಂದ ಒಂದೇ ಕ್ಷಣದಲ್ಲಿ ಉತ್ಪನ್ನವಾಗಿಯೂ, ಜಲಬುದ್ಬುದದಂತಿರುವುದೂ, ಮಹಾಪರಿಣಾಮವುಳ್ಳದ್ದೂ ಮತ್ತು ನೀರಿನಲ್ಲಿ ವಾಸ ಮಾಡಿರುವುದೂ ಆದ ಅಂಡವು ಜನಿಸಿತು.

೩೭. ಆ ಅಂಡದಲ್ಲಿ ಪರಮೇಷ್ಠಿಯಾದ ಬ್ರಹ್ಮನ ಕಾರ್ಯ, ಕರಣಗಳು ಆವಿರ್ಭವಿಸಿದುವು. ಅಂತಹ ಪ್ರಾಕೃತವಾದ ಅಂಡವು ಬೆಳೆಯಲಾಗಿ ಬ್ರಹ್ಮ ಎಂಬ ಹೆಸರುಳ್ಳ ಕ್ಷೇತ್ರಜ್ಞನ ಆವಿರ್ಭಾವವಾಯಿತು.

೩೮. ಅಂತಹ ಬ್ರಹ್ಮನು ಪ್ರಥಮ ಶರೀರಿ, ಪುರುಷ ಎಂದು ಕರೆಯಲ್ಪಡುತ್ತಾನೆ. ಅವನು ಮುಂದೆ ಹುಟ್ಟುವ ಪ್ರಾಣಿಗಳಿಗೆ ಆದಿಕರ್ತನು. ಆ ಬ್ರಹ್ಮನು ಆದಿಯಲ್ಲಿ ಜನಿಸಿದನು.

೩೯. ಅಂತಹ ಬ್ರಹ್ಮದೇವನನ್ನು ಪುರುಷ, ಹಂಸ, ಪರರೂಪವಾದ ಪ್ರಧಾನಕ್ಕಿಂತ ಪರತರ, ಹಿರಣ್ಯಗರ್ಭ, ಕಪಿಲ, ಛಂದೋಮಯ ಮೂರ್ತಿಧರ ಮತ್ತು ಸನಾತನ ಮುಂತಾದ ಗುಣವಾಚಕ ಶಬ್ದಗಳಿಂದ ಪ್ರಶಂಸಿಸುತ್ತಾರೆ.

ಮೇರುರುಲ್ಬಮಭೂತ್ತಸ್ಯ ಜರಾಯುಶ್ಚಾಪಿ ಪರ್ವತಾಃ ।
ಗರ್ಭೋದಕಂ ಸಮುದ್ರಾಶ್ಚ ತಸ್ಯಾಸನ್ ಪರಮಾತ್ಮನಃ ॥ ೪೦ ॥

ತಸ್ಮಿನ್ ಅಂಡೇಽಭವದ್ವಿಶ್ವಂ ಸದೇವಾಸುರಮಾನುಷಮ್ ।
ಚಂದ್ರಾದಿತ್ಯೌ ಸನಕ್ಷತ್ರೌ ಸಗ್ರಹೌ ಸಹವಾಯುನಾ ॥ ೪೧ ॥

ಅದ್ಭಿರ್ದಶಗುಣಾಭಿಶ್ಚ ಬಾಹ್ಯತೋಽಂಡಂ ಸಮಾವೃತಮ್ ।
ಆಪೋ ದಶಗುಣೇನೈವ ತೇಜಸಾ ಬಾಹ್ಯತೋ ವೃತಾಃ ॥ ೪೨ ॥

ತೇಜೋ ದಶಗುಣೇನೈವ ಬಾಹ್ಯತೋ ವಾಯುನಾ ವೃತಮ್ ।
ಆಕಾಶೇನಾವೃತೋ ವಾಯುಃ ಖಂ ತು ಭೂತಾದಿನಾ ವೃತಮ್ ॥ ೪೩ ॥

ಭೂತಾದಿರ್ಮಹತಾ ತದ್ವದವ್ಯಕ್ತೇನಾವೃತೋ ಮಹಾನ್ ।
ಏತೇ ಲೋಕಾ ಮಹಾತ್ಮಾನಃ ಸರ್ವೇ ತತ್ತ್ವಾಭಿಮಾನಿನಃ ॥ ೪೪ ॥

---

೪೦. ಆ ಪ್ರಥಮಶರೀರಿಯೆಂಬ ಪರಮಾತ್ಮನಿಗೆ ಮೇರು ಪರ್ವತವು ಗರ್ಭಕೋಶವೂ ಮತ್ತು ಸಮುದ್ರಗಳು ಗರ್ಭೋದಕವೂ ಆಗಿದ್ದುವು.

೪೧. ಆ ಅಂಡದಲ್ಲಿ ದೇವ, ಅಸುರ, ಮತ್ತು ಮಾನುಷರಿಂದ ಕೂಡಿದ ವಿಶ್ವವು ಉತ್ಪನ್ನವಾಯಿತು ಮತ್ತು ಚಂದ್ರ ಆದಿತ್ಯ, ನಕ್ಷತ್ರ, ಗ್ರಹ ಗಣ ಎಂಬ ತೇಜೋಮಂಡಲ ಮತ್ತು ವಾಯು ಇವುಗಳು ಅಂಡದಿಂದ ಉತ್ಪನ್ನವಾದುವು.

೪೨. ಇಂತಹ ಅಂಡವು ಇದರ ದಶಗುಣಾಧಿಕವಾದ ಜಲಗಳಿಂದ ಬಾಹ್ಯ ಭಾಗದಲ್ಲಿ ಆವರಿಸಲ್ಪಟ್ಟಿದೆ, ಹಾಗೆಯೇ ಜಲವು ದಶಗುಣಾಧಿಕ ತೇಜೋಭಾಗದಿಂದ ಆವರಿಸಲ್ಪಟ್ಟಿರುವುದು.

೪೩. ತೇಜಸ್ಸಿಗೆ ದಶಗುಣವಾದ ವಾಯುಮಂಡಲದಿಂದ ಬಾಹ್ಯಪ್ರದೇಶದಲ್ಲಿ ತೇಜೋಭಾಗವು ವ್ಯಾಪಿಸಲ್ಪಟ್ಟಿದೆ. ವಾಯುವು ಆಕಾಶದ ವ್ಯಾಪ್ತಿಯಿಂದ ಆವರಿಸಲ್ಪಟ್ಟಿರುವುದು, ಆಕಾಶವು ಭೂತಾದಿಯಿಂದ ಸುತ್ತಲ್ಪಟ್ಟಿದೆ.

೪೪. ಹೀಗೆಯೇ ಭೂತಾದಿಯು ಮಹತ್ತತ್ತ್ವದಿಂದಲೂ ಮಹತ್ತತ್ತ್ವವು ಅವ್ಯಕ್ತತತ್ತ್ವದಿಂದಲೂ ವ್ಯಾಪಿಸಲ್ಪಟ್ಟಿದೆ. ಹೀಗೆ ಲೋಕತತ್ತ್ವಗಳಿಗೆ ಅಭಿಮಾನಿಗಳಾಗಿ ಅನೇಕಮಹಾತ್ಮರು ಪ್ರತಿಷ್ಠಾಪಕರಾಗಿರುವರು.

ವಸಂತಿ ತತ್ರ ಪುರುಷಾಸ್ತದಾತ್ಮಾನೋ ವ್ಯವಸ್ಥಿತಾಃ ।
ಈಶ್ವರಾ ಯೋಗಧರ್ಮಾಣೋ ಯೇ ಚಾನ್ಯೇ ತತ್ತ್ವಚಿಂತಕಾಃ ॥ ೪೫ ॥

ಸರ್ವಜ್ಞಾಃ ಶಾಂತರಜಸೋ ನಿತ್ಯಂ ಮುದಿತಮಾನಸಾಃ ।
ಏತೈರಾವರಣೈರಂಡಂ ಪ್ರಾಕೃತೈಃ ಸಪ್ತಭಿರ್ವೃತಮ್ ॥ ೪೬ ॥

ಏತಾವಚ್ಛಕ್ಯತೇ ವಕ್ತುಂ ಮಾಯೈಷಾ ಗಹನಾ ದ್ವಿಜಾಃ ।
ಏತತ್ಪ್ರಾಧಾನಿಕಂ ಕಾರ್ಯಂ ಯನ್ಮಯಾ ಬೀಜಮೀರಿತಮ್ ॥ ೪೭ ॥

ಪ್ರಜಾಪತೇಃ ಪರಾ ಮೂರ್ತಿರಿತೀಯಂ ವೈದಿಕೀ ಶ್ರುತಿಃ ।
ಬ್ರಹ್ಮಾಂಡಮೇತತ್ಸಕಲಂ ಸಪ್ತಲೋಕಬಲಾನ್ವಿತಮ್ ॥ ೪೮ ॥

---

೪೫. ಅವುಗಳಲ್ಲಿ ಚೇತನಾತ್ಮರಾದ ಪುರುಷರು ಆಯಾಯ ತತ್ತ್ವಾತ್ಮಕರಾಗಿ ವ್ಯವಸ್ಥೆಯಿಂದ ಇರುವರು, ಆ ಪುರುಷರು ಈಶ್ವರರೂಪರೂ, ಯೋಗಧರ್ಮಾವಲಂಬಿಗಳೂ ಮತ್ತು ತತ್ತ್ವಚಿಂತಕರೂ ಆಗಿರುವರು.

೪೬. ಮತ್ತು ಆ ಅಭಿಮಾನಿ ಪುರುಷರು ಸರ್ವಜ್ಞರೂ, ಶಾಂತವಾದ ರಜೋಗುಣ ಉಳ್ಳವರೂ, ಸಂತುಷ್ಟವಾದ ಮಾನಸವುಳ್ಳವರೂ ಆಗಿದ್ದಾರೆ. ಈ ಪ್ರಕೃತಿಧರ್ಮವಾದ ಏಳು ಆವರಣಗಳಿಂದ ಅಂಡವು ಆವೃತವಾಗಿರುವುದು.

೪೭. ದ್ವಿಜರೇ ! ಈ ಮಾಯಾಸ್ವರೂಪವು ಅತಿಗಹನವಾದುದರಿಂದ ಇಷ್ಟು ಮಾತ್ರ ವರ್ಣಿಸಲು ಶಕ್ಯವಾಗಿರುವುದು. ಹೀಗೆ ನನ್ನಿಂದ ಪ್ರಧಾನದ ಕಾರ್ಯಜಾಲವು ಬೀಜರೂಪವಾಗಿ ನಿರ್ದೇಶಿಸಲ್ಪಟ್ಟಿರುವುದು.

೪೮. ಈ ಪ್ರಾಧಾನಿಕ ಕಾರ್ಯವು ಪ್ರಜಾಪತಿಯ ಉತ್ಕೃಷ್ಟವಾದ ಮೂರ್ತಿಯು ಎಂದು ವೇದ ವಚನವು ಹೇಳುವುದು. ಸಪ್ತಲೋಕಗಳಿಂದ ಕೂಡಿದ ಈ ಸಕಲ ಬ್ರಹ್ಮಾಂಡವು ಒಂದು ಮೂರ್ತಿಯಾಗಿರುವುದು.

ದ್ವಿತೀಯಂ ತಸ್ಯ ದೇವಸ್ಯ ಶರೀರಂ ಪರಮೇಷ್ಠಿನಃ ।
ಹಿರಣ್ಯಗರ್ಭೋ ಭಗವಾನ್ ಬ್ರಹ್ಮಾ ವೈ ಕನಕಾಂಡಜಃ　　॥ ೪೯ ॥

ತೃತೀಯಂ ಭಗವದ್ರೂಪಂ ಪ್ರಾಹುರ್ವೇದಾರ್ಥವೇದಿನಃ ।
ರಜೋಗುಣಮಯಂ ಚಾನ್ಯದ್ರೂಪಂ ತಸ್ಯೈವ ಧೀಮತಃ　　॥ ೫೦ ॥

ಚತುರ್ಮುಖಸ್ತು ಭಗವಾನ್ ಜಗತ್ಸೃಷ್ಟೌ ಪ್ರವರ್ತತೇ ।
ಸೃಷ್ಟಂ ಚ ಪಾತಿ ಸಕಲಂ ವಿಶ್ವಾತ್ಮಾ ವಿಶ್ವತೋಮುಖಃ　　॥ ೫೧ ॥

ಸತ್ತ್ವಂ ಗುಣಮುಪಾಶ್ರಿತ್ಯ ವಿಷ್ಣುರ್ವಿಶ್ವೇಶ್ವರಃ ಸ್ವಯಮ್ ।
ಅಂತಕಾಲೇ ಸ್ವಯಂ ದೇವಃ ಸರ್ವಾತ್ಮಾ ಪರಮೇಶ್ವರಃ　　॥ ೫೨ ॥

---

೪೯. ಅದು ಪರಮಸ್ಥಾನದಲ್ಲಿರುವ ಬ್ರಹ್ಮದೇವನ ಎರಡನೆಯ ಮೂರ್ತಿಯೆಂದು ಗಣಿಸಲ್ಪಟ್ಟಿದೆ. ಮತ್ತು ಸುವರ್ಣದ ಅಂಡದಿಂದ ಹುಟ್ಟಿರುವ ಷಡ್ಗುಣೈಶ್ವರ್ಯ ಸಂಪನ್ನನಾದ ಹಿರಣ್ಯಗರ್ಭನು ಒಂದು ಭಗವದ್ರೂಪವು.

೫೦. ವೇದಾರ್ಥವನ್ನು ಅರಿತವರು ಅದನ್ನು ತೃತೀಯ ಭಗವದ್ರೂಪವೆಂದು ವರ್ಣಿಸುವರು. ಆ ಸರ್ವಜ್ಞನಾದ ಭಗವಂತನಿಗೆ ರಜೋಗುಣದಿಂದ ಪರಿಪೂರ್ಣವಾದ ಮತ್ತೊಂದು ರೂಪವು ಇರುವುದು.

೫೧. ಭಗವಂತನು ಆ ರೂಪದಿಂದ ಚತುರ್ಮುಖನಾಗಿದ್ದು ಪ್ರಪಂಚದ ಸೃಷ್ಟಿಯಲ್ಲಿ ಪ್ರವರ್ತಿಸುತ್ತಾನೆ. ಹೀಗೆ ಸೃಷ್ಟಿಮಾಡಿರುವ ಪ್ರಪಂಚವನ್ನು ವಿಶ್ವಾತ್ಮಕನೂ ವಿಶ್ವತೋಮುಖನೂ ಆದ ಪರಮಾತ್ಮನು ರಕ್ಷಣೆ ಮಾಡುತ್ತಾನೆ.

೫೨. ರಕ್ಷಣಾಧಿಕಾರದಲ್ಲಿರುವಾಗ ವಿಶ್ವೇಶ್ವರನು ಸತ್ತ್ವಗುಣವನ್ನು ಅವಲಂಬಿಸಿದವನೂ ವಿಷ್ಣು ಎಂಬ ವಿಶೇಷನಾಮಾಂಕಿತನೂ ಆಗಿರುವನು. ಸರ್ವಾತ್ಮಕನಾದ ಮತ್ತು ಪ್ರಕಾಶಮಯನಾದ ಆ ಪರಮೇಶ್ವರನು ಮತ್ತೆ ಅಂತಕಾಲದಲ್ಲಿ ಆ ವ್ಯಾಪಾರವನ್ನು ನಿರ್ವಹಿಸುವನು.

ತಮೋಗುಣಂ ಸಮಾಶ್ರಿತ್ಯ ರುದ್ರಃ ಸಂಹರತೇ ಜಗತ್ ।
ಏಕೋಽಪಿ ಸನ್ ಮಹಾದೇವಸ್ತ್ರಿಧಾಸೌ ಸಮವಸ್ಥಿತಃ ॥ ೫೩ ॥

ಸರ್ಗರಕ್ಷಾಲಯಗುಣೈರ್ನಿರ್ಗುಣೋಽಪಿ ನಿರಂಜನಃ ।
ಏಕಧಾ ಸ ದ್ವಿಧಾ ಚೈವ ತ್ರಿಧಾ ಚ ಬಹುಧಾ ಗುಣೈಃ ॥ ೫೪ ॥

ಯೋಗೇಶ್ವರಃ ಶರೀರಾಣಿ ಕರೋತಿ ವಿಕರೋತಿ ಚ ।
ನಾನಾಕೃತಿಕ್ರಿಯಾರೂಪನಾಮವಂತಿ ಸ್ವಲೀಲಯಾ ॥ ೫೫ ॥

ಹಿತಾಯ ಚೈವ ಭಕ್ತಾನಾಂ ಸ ಏವ ಗ್ರಸತೇ ಪುನಃ ।
ತ್ರಿಧಾ ವಿಭಜ್ಯ ಚಾತ್ಮಾನಂ ತ್ರೈಲೋಕ್ಯೇ ಸಂಪ್ರವರ್ತತೇ ॥ ೫೬ ॥

---

೫೩. ಆಗ ತಮೋಗುಣಮಯನಾಗಿ ರುದ್ರಮೂರ್ತಿಯನ್ನು ಸ್ವೀಕರಿಸಿ ಜಗತ್ತನ್ನು ಸಂಹರಿಸುತ್ತಾನೆ. ಹೀಗೆ ಸರ್ವದೇವೋತ್ತಮನಾದ ಪರಮಾತ್ಮನು ಒಬ್ಬನೇ ಮೂರು ಮೂರ್ತಿರೂಪದಿಂದ ವ್ಯವಸ್ಥಿತನಾಗಿರುವನು.

೫೪. ಹೀಗೆ ಮೂರು ಮೂರ್ತಿಗಳ ವಿಭಾಗವು ಜಗತ್ತಿನ ಸೃಷ್ಟಿ-ರಕ್ಷಣ ಲಯಗಳೆಂಬ ಕ್ರಿಯಾಧರ್ಮಗಳಿಂದ ನಿರ್ಗುಣನೂ ನಿರಂಜನನೂ ಆದ ಪರಮಾತ್ಮನಲ್ಲಿ ಕಾಣಿಸಿಕೊಂಡಿದೆ. ಆದರೆ ಆ ಪರಮಾತ್ಮನು ಸಂಕಲ್ಪಾನುಗುಣವಾಗಿ ಏಕರೂಪ, ದ್ವಿರೂಪ, ಅಥವಾ ಬಹುರೂಪನು ಗುಣ ಸಂಸರ್ಗ ನಿಮಿತ್ತದಿಂದ ಆಗಬಲ್ಲನು.

೫೫. ಭಗವಂತನಾದ ಯೋಗೇಶ್ವರನು ವಿವಿಧವಾದ ಆಕಾರ, ವ್ಯಾಪಾರ, ರೂಪ, ನಾಮಗಳಿಂದ ಕೂಡಿದ ಅನೇಕ ಶರೀರಗಳನ್ನು ಲೀಲಾಮಾತ್ರದಿಂದ ನಿರ್ಮಿಸುವನು ಮತ್ತು ಅದನ್ನು ವ್ಯಾಕರಣಮಾಡುವನು.

೫೬. ಹೀಗೆ ಲೀಲಾವಶದಿಂದ ಮೂರ್ತಿ ಭೇದವನ್ನು ಭಕ್ತರ ಹಿತಕ್ಕೋಸ್ಕರ ಸ್ವೀಕರಿಸುವನು. ಅದನ್ನು ಮತ್ತೆ ತಾನೆ ನುಂಗಿಬಿಡುವನು. ಪರಮಾತ್ಮನು ಆತ್ಮವನ್ನು ಮೂರಾಗಿ ವಿಂಗಡಿಸಿ ಮೂರು ಲೋಕದಲ್ಲಿ ಪ್ರವರ್ತಿಸುತ್ತಾನೆ.

ಸೃಜತೇ ಗ್ರಸತೇ ಚೈವ ವೀಕ್ಷತೇ ಚ ವಿಶೇಷತಃ ।
ಯಸ್ಮಾತ್ಸೃಷ್ಟ್ವಾನುಗೃಹ್ಣಾತಿ ಗ್ರಸತೇ ಚ ಪುನಃ ಪ್ರಜಾಃ　　॥ ೫೭ ॥

ಗುಣಾತ್ಮಕತ್ವಾತ್ತ್ರೈಕಾಲ್ಯೇ ತಸ್ಮಾದೇಕಃ ಸ ಉಚ್ಯತೇ ।
ಅಗ್ರೇ ಹಿರಣ್ಯಗರ್ಭಃ ಸ ಪ್ರಾದುರ್ಭೂತಃ ಸನಾತನಃ　　॥ ೫೮ ॥

ಆದಿತ್ವಾದಾದಿದೇವೋಽಸಾವಜಾತತ್ವಾದಜಃ ಸ್ಮೃತಃ ।
ಪಾತಿ ಯಸ್ಮಾತ್ಪ್ರಜಾಃ ಸರ್ವಾಃ ಪ್ರಜಾಪತಿರಿತಿ ಸ್ಮೃತಃ　　॥ ೫೯ ॥

ದೇವೇಷು ಚ ಮಹಾದೇವೋ ಮಹಾದೇವ ಇತಿ ಸ್ಮೃತಃ ।
ಬೃಹತ್ತ್ವಾಚ್ಚ ಸ್ಮೃತೋ ಬ್ರಹ್ಮಾ ಪರತ್ವಾತ್ಪರಮೇಶ್ವರಃ　　॥ ೬೦ ॥

---

೫೭. ಪರಮಾತ್ಮನು ಪ್ರಜೆಗಳನ್ನು ಸೃಷ್ಟಿಮಾಡಿ ಅನುಗ್ರಹತೋರಿಸಿ ಅಂತ್ಯದಲ್ಲಿ ಸಂಹಾರಮಾಡುವುದರಿಂದ ಪರಮಾತ್ಮನಿಗೆ ವಿಶೇಷವಾಗಿ ಸೃಷ್ಟಿ- ಸಂಹಾರ ಮತ್ತು ವಿಶೇಷ ವೀಕ್ಷಣದಿಂದ ರಕ್ಷಣವೆಂಬ ವ್ಯಾಪಾರಗಳು ಅಸಾಧಾರಣವಾಗಿವೆ.

೫೮. ಗುಣಾತ್ಮಕನಾಗಿ ಆಯಾಯ ಗುಣಸಂಬಂಧದಿಂದ ವಿಶೇಷ ವ್ಯಾಪಾರ ಗಳಿಗೆ ಕರ್ತನಾಗುವುದರಿಂದ ನಿರ್ಗುಣರೂಪದಿಂದ ಅವನು ಅದ್ವಿತೀಯನೆಂದು ಹೇಳಲ್ಪಡುತ್ತಾನೆ. ಅನಾದಿಯಾದ ಪರಮೇಶ್ವರನು ಸೃಷ್ಟಿಯ ಆದಿಯಲ್ಲಿ ಹಿರಣ್ಯ ಗರ್ಭರೂಪನಾಗಿ ಪ್ರಾದುರ್ಭವಿಸಿದನು.

೫೯. ಸಕಲವಸ್ತುಗಳಿಗೆ ಆದಿಯಾದುದರಿಂದ ಮಹೇಶ್ವರನು ಆದಿದೇವನೆಂದು ಕರೆಯಲ್ಪಡುವನು. ಜನ್ಮವಿಲ್ಲದ್ದರಿಂದ ಅಜನೆಂದು ಸ್ಮರಿಸಲ್ಪಟ್ಟಿರುವನು. ಸರ್ವ ಪ್ರಜೆಗಳನ್ನು ಪಾಲಿಸುವುದರಿಂದ ಪ್ರಜಾಪತಿಯೆಂದು ಸ್ಮರಿಸಲ್ಪಡುವನು.

೬೦. ದೇವತೆಗಳಲ್ಲಿ ಸರ್ವೋತ್ತಮನಾದ್ದರಿಂದ ಮಹಾದೇವನೆಂದು ಕರೆಯಲ್ಪ ಡುವನು. ಸಂಕೋಚವಿಲ್ಲದ ಪರಮಬೃಹತ್ತ್ವ=ವೃದ್ಧಿಯಿರುವುದರಿಂದ ಬ್ರಹ್ಮನೆಂದೂ ಸರ್ವಾಧಿಕತ್ವರೂಪವಾದ ಪರಮತ್ವವಿರುವುದರಿಂದ ಪರಮೇಶ್ವರನೆಂದೂ ಸ್ಮರಿಸ ಲ್ಪಡುವನು.

ವಶಿತ್ವಾದಪ್ಯವಶ್ಯತ್ವಾದೀಶ್ವರಃ ಪರಿಭಾಷಿತಃ ।
ಋಷಿಃ ಸರ್ವತ್ರಗತ್ವೇನ ಹರಿಃ ಸರ್ವಹರೋ ಯತಃ ॥ ೬೦ ॥

ಅನುತ್ಪಾದಾಚ್ಚ ಪೂರ್ವತ್ವಾತ್ಸ್ವಯಂಭೂರಿತಿ ಸ ಸ್ಮೃತಃ ।
ನರಾಣಾಮಯನಂ ಯಸ್ಮಾತ್ತೇನ ನಾರಾಯಣಃ ಸ್ಮೃತಃ ॥ ೬೨ ॥

ಹರಃ ಸಂಸಾರಹರಣಾದ್ವಿಭುತ್ವಾದ್ವಿಷ್ಣುರುಚ್ಯತೇ ।
ಭಗವಾನ್ ಸರ್ವವಿಜ್ಞಾನಾದವನಾದೋಮಿತಿ ಸ್ಮೃತಃ ॥ ೬೩ ॥

ಸರ್ವಜ್ಞಃ ಸರ್ವವಿಜ್ಞಾನಾತ್ ಸರ್ವಃ ಸರ್ವಮಯೋ ಯತಃ ।
ಶಿವಃ ಸ್ಯಾನ್ನಿರ್ಮಲೋ ಯಸ್ಮಾದ್ವಿಭುಃ ಸರ್ವಗತೋ ಯತಃ ॥ ೬೪ ॥

---

೬೧. ಸಕಲ ವಸ್ತುಗಳಿಗೆ ನಿಯಾಮಕನಾಗಿ ತಾನು ಯಾವುದೊಂದಕ್ಕೂ ವಶ್ಯನಲ್ಲದಿರುವುದರಿಂದ ಈಶ್ವರನೆಂದು ಸಂಕೇತಿಸಲ್ಪಟ್ಟಿರುವನು. ಸರ್ವವ್ಯಾಪಿಯಾಗಿರುವುದರಿಂದ ಋಷಿರೂಪನೂ ಸರ್ವವನ್ನು ಹರಣಮಾಡುವುದರಿಂದ ಹರಿಸ್ವರೂಪನೂ ಆಗಿರುವನು.

೬೨. ತನಗೆ ಪೂರ್ವವಾದ ಒಂದು ವಸ್ತುವಿನಿಂದ ಉತ್ಪನ್ನನಲ್ಲದ್ದರಿಂದ ಸ್ವಯಂಭು ಎಂದು ಆ ಪರಮಾತ್ಮನು ಸ್ಮರಿಸಲ್ಪಟ್ಟಿರುವನು. ಜೀವಾತ್ಮರಿಗೆ ಪರಮಗತಿರೂಪನಾದ್ದರಿಂದ ನಾರಾಯಣನೆಂದು ಸ್ಮರಿಸಲ್ಪಟ್ಟಿರುವನು.

೬೩. ಹಾಗೆಯೇ ಸಂಸಾರವೆಂಬ ದುಃಖವನ್ನು ಅಪಹರಿಸುವುದರಿಂದ ಹರನೆಂದೂ ಸರ್ವವ್ಯಾಪಿಯಾದ್ದರಿಂದ ವಿಭುವೆಂದೂ ಹೇಳಲ್ಪಡುವನು. ಮತ್ತು ಸರ್ವವಸ್ತುಗಳ ವಿಜ್ಞಾನದಿಂದ ಭಗವಂತನೆಂದೂ, ರಕ್ಷಣವ್ಯಾಪಾರದಿಂದ (ಓಂ) ರೂಪನೆಂದೂ ಸ್ಮರಿಸಲ್ಪಡುವನು.

೬೪. ಸರ್ವ ವಿಜ್ಞಾನದಿಂದ ಸರ್ವಜ್ಞನಾಗಿರುವನು, ಸರ್ವಾತ್ಮಕನಾಗಿರುವುದರಿಂದ ಸರ್ವ ಎಂದು ಅಂಕಿತನಾಗಿರುವನು, ನಿರ್ಮಲನಾದ್ದರಿಂದ ಶಿವರೂಪನಾಗಿರುವನು, ಸರ್ವ ವ್ಯಾಪಕನಾದ್ದರಿಂದ ವಿಭುವಾಗಿರುವನು.

ತಾರಣಾತ್ ಸರ್ವದುಃಖಾನಾಂ ತಾರಕಃ ಪರಿಗೀಯತೇ ।
ಬಹುನಾಽತ್ರ ಕಿಮುಕ್ತೇನ ಸರ್ವಂ ಬ್ರಹ್ಮಮಯಂ ಜಗತ್ ॥ ೬೫ ॥

ಅನೇಕಭೇದಭಿನ್ನಸ್ತು ಕ್ರೀಡತೇ ಪರಮೇಶ್ವರಃ ।
ಇತ್ಯೇಷ ಪ್ರಾಕೃತಃ ಸರ್ಗಃ ಸಂಕ್ಷೇಪಾತ್ ಕಥಿತೋ ಮಯಾ ।
ಅಬುದ್ಧಿಪೂರ್ವಿಕಾಂ ವಿಪ್ರಾ ಬ್ರಾಹ್ಮೀಂ ಸೃಷ್ಟಿಂ ನಿಬೋಧತ ॥ ೬೬ ॥

ಇತಿ ಶ್ರೀ ಕೂರ್ಮಪುರಾಣೇ ಚತುರ್ಥೋಽಧ್ಯಾಯಃ

---

೬೫. ಸರ್ವ ದುಃಖಗಳಿಂದ ತಾರಣಮಾಡಿಸುವವನಾದ್ದರಿಂದ ತಾರಕನೆಂದು ಕರೆಯಲ್ಪಡುವನು. ಇದನ್ನು ಹೆಚ್ಚು ಹೇಳಿ ಫಲವೇನು ? ಎಲ್ಲ ಜಗತ್ತು ಬ್ರಹ್ಮ ಮಯವಾದುದು.

೬೬. ಪರಮೇಶ್ವರನು ಅನೇಕ ವಿಧವಾದ ಭಿನ್ನಾಕಾರಗಳನ್ನು ತೆಗೆದುಕೊಂಡು ವಿಹರಿಸುತ್ತಿರುವನು. ಈ ರೀತಿಯಾಗಿ ಪ್ರಾಕೃತಸರ್ಗವು ನನ್ನಿಂದ ಸಂಗ್ರಹವಾಗಿ ಹೇಳಲ್ಪಟ್ಟಿದೆ. ವಿಪ್ರರೆ! ಇನ್ನು ಮುಂದೆ ಅಬುದ್ಧಿಪೂರ್ವಕವಾದ ಬ್ರಹ್ಮಸೃಷ್ಟಿ ಯನ್ನು ತಿಳಿಯಿರಿ.

ಕೂರ್ಮ ಪುರಾಣದಲ್ಲಿ ನಾಲ್ಕನೆಯ ಅಧ್ಯಾಯವು ಮುಗಿದುದು.



ಶ್ರೀಃ

# ಕೂರ್ಮಪುರಾಣಂ

---

## ಪಂಚಮೋಽಧ್ಯಾಯಃ

## (ಕಾಲಸಂಖ್ಯಾವಿವರಣಮ್)

ಕೂರ್ಮ ಉವಾಚ :—

ಅನುತ್ಪಾದಾಚ್ಚ ಪೂರ್ವಸ್ಮಾತ್ ಸ್ವಯಂಭೂರಿತಿ ಸ ಸ್ಮೃತಃ ।
ನರಾಣಾಮಯನಂ ಯಸ್ಮಾತ್ತೇನ ನಾರಾಯಣಃ ಸ್ಮೃತಃ ॥ ೧ ॥

ಹರಃ ಸಂಸಾರಹರಣಾದ್ವಿಭುತ್ವಾ ದ್ವಿಷ್ಣುರುಚ್ಯತೇ ।
ಭಗವಾನ್ ಸರ್ವವಿಜ್ಞಾನಾದವನಾದೋಮಿತಿಸ್ಮೃತಃ ॥ ೨ ॥

---

## ಐದನೆಯ ಅಧ್ಯಾಯವು

೧. ಕೂರ್ಮಮೂರ್ತಿಯು ಇಂತೆಂದನು :—ತನಗೆ ಪೂರ್ವದಲ್ಲಿದ್ದ ಒಂದು ಕಾರಣವಸ್ತುವಿನಿಂದ ಹುಟ್ಟದಿರುವುದರಿಂದ ಪರಮೇಶ್ವರನು ಸ್ವಯಂಭು ಎಂದು ಕರೆಯಲ್ಪಡುವನು. ಜೀವಭಾವವನ್ನು ಹೊಂದಿದ ವಿವಿಧ ಆತ್ಮರಿಗೆ ಪರಮಗತಿ ರೂಪನಾದ್ದರಿಂದ ನಾರಾಯಣನೆಂದು ಸ್ಮರಿಸಲ್ಪಟ್ಟಿರುವನು.

೨. ಮತ್ತು ಸಂಸಾರ ದುಃಖವನ್ನು ಅಪಹರಿಸುವುದರಿಂದ ಹರನೆಂದೂ ವಿಭುವಾದ್ದರಿಂದ ವಿಷ್ಣುವೆಂದೂ ಕರೆಯಲ್ಪಡುವನು. ಸರ್ವ ವಸ್ತುವಿಜ್ಞಾನವಿರುವುದರಿಂದ ಭಗವಂತನೆಂದೂ, ಅವನ ರಕ್ಷಣ ವ್ಯಾಪಾರದಿಂದ ಓಂಕಾರ ರೂಪಿಯೆಂದೂ ಸ್ಮರಿಸಲ್ಪಟ್ಟಿರುವನು.

ಸರ್ವಜ್ಞಃ ಸರ್ವವಿಜ್ಞಾನಾತ್ ಸರ್ವಃ ಸರ್ವಮಯೋ ಮತಃ ।
ಸ್ವಯಂಭುವೋ ನಿವೃತ್ತಸ್ಯ ಕಾಲಸಂಖ್ಯಾ ದ್ವಿಜೋತ್ತಮಾಃ ॥ ೩ ॥

ನ ಶಕ್ಯತೇ ಸಮಾಖ್ಯಾತುಂ ಬಹುವರ್ಷೈರಪಿ ಸ್ವಯಮ್ ।
ಕಾಲಸಂಖ್ಯಾ ಸಮಾಸೇನ ಪರಾರ್ಧದ್ವಯಕಲ್ಪಿತಾ ॥ ೪ ॥

ಸ ಏವ ಸ್ಯಾತ್ಪರಃ ಕಾಲಸ್ತದಂತೇ ಸೃಜ್ಯತೇ ಪುನಃ ।
ನಿಜೇನ ತಸ್ಯ ಮಾನೇನ ಹ್ಯಾಯುರ್ವರ್ಷಶತಂ ಸ್ಮೃತಮ್ ॥ ೫ ॥

ತತ್ಪರಾರ್ಧಂ ತದರ್ಧಂ ವಾ ಪರಾರ್ಧಮಭಿಧೀಯತೇ ।
ಕಾಷ್ಠಾ ಪಂಚದಶ ಖ್ಯಾತಾ ನಿಮೇಷಾ ದ್ವಿಜಸತ್ತಮಾಃ ॥೬ ॥

---

೩. ಸರ್ವ ವಿಜ್ಞಾನಕ್ಕೆ ಆಶ್ರಯನಾದ್ದರಿಂದ ಸರ್ವಜ್ಞರೂಪಿಯೆಂದೂ, ಸರ್ವಾತ್ಮಕನಾದ್ದರಿಂದ ಸರ್ವರೂಪಿಯೆಂದೂ ನಿರೂಪಿಸಲ್ಪಟ್ಟಿರುವನು. ದ್ವಿಜೋತ್ತಮರೇ! ಹಿಂದೆ ನಿವೃತ್ತಿ ಹೊಂದಿದ ಸ್ವಯಂಭುವಿನ ಕಾಲಗಣನೆಯು ಗಣನಾತೀತವಾಗಿರುವುದು.

೪. ಅನೇಕ ವರ್ಷ ಕಾಲ ಗಣಿಸಿದರೂ ಆ ಕಾಲ ಸಂಖ್ಯೆಯನ್ನು ಎಣಿಸಿ ಹೇಳಲು ಶಕ್ಯವಿಲ್ಲ. ಸಂಗ್ರಹವಾಗಿ ಕಾಲದ ವಿಭಾಗಗಣನೆಯು ಎರಡು ಪರಾರ್ಧ ರೂಪವಾಗಿ ಕಲ್ಪಿಸಲ್ಪಟ್ಟಿರುವುದು.

೫. ಪರಾರ್ಧವೆಂಬ ಆ ಕಾಲವು ಸ್ಥೂಲಮಾನದಲ್ಲಿ ಅತಿ ಮಹತ್ತಾದ ಕಾಲವು. ಅಷ್ಟು ಕಾಲ ಕಳೆದ ನಂತರ ಮತ್ತೆ ಸೃಷ್ಟಿಯಾಗುವುದು. ಆ ಕಾಲದ ಸಂಖ್ಯೆಯು ಬ್ರಹ್ಮನ ಆಯುರ್ಮಾನದಿಂದ ವರ್ಷವೆಂದು ಸ್ಮರಿಸಲ್ಪಟ್ಟಿದೆ.

೬. ಆ ಪರಾರ್ಧರೂಪವಾದ ಕಾಲಮಾನವು ಪರಾರ್ಧವೆಂದು ಅಥವಾ ಅರ್ಧ ಪರಾರ್ಧವೆಂದು ಕರೆಯಲ್ಪಡುವುದು. ದ್ವಿಜಶ್ರೇಷ್ಠರೆ! ಸೂಕ್ಷ್ಮಕಾಲವಾಗಿ ಗಣಿಸಲ್ಪಟ್ಟ ಹದಿನೈದು ನಿಮೇಷಗಳಿಂದ ಒಂದು ಕಾಷ್ಠಾತ್ಮಕ ಕಾಲವಾಗುವುದು.

ಕಾಷ್ಠಾ ತ್ರಿಂಶತ್ಕಲಾ ತ್ರಿಂಶತ್ ಕಲಾ ಮೌಹೂರ್ತಿಕೀ ಗತಿಃ ।
ತಾವತ್ಸಂಖ್ಯೈರಹೋರಾತ್ರಂ ಮುಹೂರ್ತೈರ್ಮಾನುಷಂ ಸ್ಮೃತಮ್ ॥

ಅಹೋರಾತ್ರಾಣಿ ತಾವಂತಿ ಮಾಸಃ ಪಕ್ಷದ್ವಯಾತ್ಮಕಃ ।
ತೈಃ ಷಡ್ಭಿರಯನಂ ವರ್ಷಂ ದ್ವೇಽಯನೇ ದಕ್ಷಿಣೋತ್ತರೇ ॥ ೮ ॥

ಅಯನಂ ದಕ್ಷಿಣಂ ರಾತ್ರಿರ್ದೇವಾನಾಮುತ್ತರಂ ದಿನಮ್ ।
ದಿವ್ಯೈರ್ವರ್ಷಸಹಸ್ರೈಸ್ತು ಕೃತತ್ರೇತಾದಿ ಸಂಜ್ಞಿತಮ್ ॥ ೯ ॥

ಚತುರ್ಯುಗಂ ದ್ವಾದಶಭಿಸ್ತದ್ವಿಭಾಗಂ ನಿಬೋಧತ ।
ಚತ್ವಾರ್ಯಾಯುಃ ಸಹಸ್ರಾಣಿ ವರ್ಷಾಣಾಂ ತತ್ಕೃತಂ ಯುಗಮ್॥೧೦॥

---

೭. ಮೂವತ್ತು ಕಾಷ್ಠಾ ಸಮೂಹವು ಒಂದು ಕಲಾತ್ಮಕ ಕಾಲವೂ ಅಂತಹ ಮೂವತ್ತು ಕಲೆಗಳಿಂದ ಒಂದು ಮುಹೂರ್ತರೂಪವಾದ ಕಾಲಗತಿಯೂ ಮೂವತ್ತು ಮುಹೂರ್ತಗಳಿಂದ ಮನುಷ್ಯಮಾನದ ಒಂದು ಅಹೋರಾತ್ರ ರೂಪವಾದ ದಿನವೂ ಆಗುವುದು.

೮. ಅಂತಹ ಮೂವತ್ತು ಅಹೋರಾತ್ರರೂಪವಾದ ದಿನಗಳು ಎರಡುಪಕ್ಷಗಳಿಂದ ಕೂಡಿದ ಒಂದು ಮಾಸವಾಗುವುದು. ಅವು ಆರು ಮಾಸಗಳಾದರೆ ಒಂದು ಅಯನವೂ ಅಂತಹ ದಕ್ಷಿಣ, ಉತ್ತರವೆಂಬ ಎರಡು ಅಯನಗಳಿಂದ ಒಂದು ವರ್ಷವೂ ಆಗುವುದು.

೯. ದೇವತೆಗಳಿಗೆ ದಕ್ಷಿಣಾಯನವು ಒಂದು ರಾತ್ರಿಯೂ, ಉತ್ತರಾಯಣವು ಒಂದು ಹಗಲೂ ಆಗುವುದು. ಇಂತಹ ದೇವಮಾನದಿಂದ ಸಹಸ್ರವರ್ಷಗಳು ಕಳೆದರೆ ಕೃತ, ತ್ರೇತಾ, ದ್ವಾಪರ ಮತ್ತು ಕಲಿ ಎಂಬ ಸಂಜ್ಞೆಯುಳ್ಳ ಚತುರ್ಯುಗ ಕಾಲವಾಗುವುದು.

೧೦. ಈ ಚತುರ್ಯುಗ ರೂಪವಾದ ಕಾಲವು ಹನ್ನೆರಡು ದಿವ್ಯ ವರ್ಷಾತ್ಮಕವಾಗಿ ಕಳೆದರೆ ಒಂದು ದೈವಯುಗವಾಗುವುದು. ಅದರಲ್ಲಿ ಈರೀತಿಯಾಗಿ ವಿಭಾಗವಿರುವುದು, ನಾಲ್ಕು ಸಹಸ್ರವರ್ಷಗಳು ಕೃತಯುಗರೂಪವಾಗುವವು.

ತಸ್ಯ ತಾವಚ್ಛತೀ ಸಂಧ್ಯಾ ಸಂಧ್ಯಾಂಶಶ್ಚ ತೃಕಸ್ಯತು ।
ತ್ರಿಶತೀ ದ್ವಿಶತೀ ಸಂಧ್ಯಾ ತಥಾ ಚೈಕಶತೀಕ್ರಮಾತ್ ॥ ೧೧ ॥

ಅಂಶಕಂ ಷಟ್ಛತಂ ತಸ್ಮಾತ್ಕೃತಸಂಧ್ಯಾಂಶಕೈರ್ವಿನಾ ।
ತ್ರಿದ್ವ್ಯೇಕಧಾ ಚ ಸಾಹಸ್ರಂ ವಿನಾ ಸಂಧ್ಯಾಂಶಕೇನ ತು ॥ ೧೨ ॥

ತ್ರೇತಾದ್ವಾಪರತಿಷ್ಯಾಣಾಂ ಕಾಲಜ್ಞಾನೇ ಪ್ರಕೀರ್ತಿತಮ್ ।
ಏತದ್ದ್ವಾದಶಸಾಹಸ್ರಂ ಸಾಧಿಕಂ ಪರಿಕಲ್ಪಿತಮ್ ॥ ೧೩ ॥

ತದೇಕಸಪ್ತತಿಗುಣಂ ಮನೋರಂತರಮುಚ್ಯತೇ ।
ಬ್ರಹ್ಮಣೋ ದಿವಸೇ ವಿಪ್ರಾ ಮನವಶ್ಚ ಚತುರ್ದಶ ॥ ೧೪ ॥

---

೧೧. ಆ ಕೃತಯುಗದ ಸಂಧ್ಯಾ ಮತ್ತು ಸಂಧ್ಯಾಂಶದ ಕಾಲವು ಒಟ್ಟು ಎಂಟು ನೂರು ವರ್ಷಗಳಾಗುವುವು. ಇದೇ ರೀತಿಯಲ್ಲಿ ತ್ರೇತಾ, ದ್ವಾಪರ, ಕಲಿಯುಗ ಗಳಲ್ಲಿ ಕ್ರಮವಾಗಿ ಸಂಧ್ಯಾಕಾಲವು ಮೂರುನೂರು, ಎರಡುನೂರು ಮತ್ತು ಒಂದು ನೂರು ವರ್ಷಗಳಾಗುವುವು.

೧೨. ಸಂಧ್ಯಾಂಶಕಾಲವು ಕೃತಯುಗದ ಸಂಧ್ಯಾಂಶವನ್ನು ಬಿಟ್ಟು ತ್ರೇತಾ ಯುಗದ ಸಂಧ್ಯಾಂಶವು ತ್ರಿಶತವೂ, ದ್ವಾಪರಯುಗದ ಸಂಧ್ಯಾಂಶವು ದ್ವಿಶತವೂ, ಮತ್ತು ಕಲಿಯುಗದ ಸಂಧ್ಯಾಂಶವು ಏಕಶತವೂ ಸೇರಿ ಆರುನೂರು ವರ್ಷಗಳಾಗುವುವು. ಸಂಧ್ಯಾಂಶವನ್ನು ಬಿಟ್ಟು ಮೂರು, ಎರಡು ಮತ್ತು ಒಂದು ಸಹಸ್ರವರ್ಷಗಳು ತ್ರೇತಾದಿಯುಗದ ಮಾನವು.

೧೩. ಈ ರೀತಿಯಾಗಿ ತ್ರೇತಾ, ದ್ವಾಪರ, ಕಲಿಯುಗಗಳ ಮಾನವು ಕಾಲ ಜ್ಞಾನಶಾಸ್ತ್ರದಲ್ಲಿ ನಿರೂಪಿಸಲ್ಪಟ್ಟಿದೆ. ಒಟ್ಟುಸೇರಿ ಹನ್ನೆರಡು ಸಹಸ್ರವರ್ಷ ದೀರ್ಘ ಕಾಲವು ದೈವಯುಗವೆಂದು ಗಣಿಸಲ್ಪಟ್ಟಿದೆ.

೧೪. ಇಂತಹ ದೈವಯುಗಗಳು ಎಪ್ಪತ್ತೊಂದು ಕಳೆದರೆ ಒಂದು ಮನ್ವಂತರ ವಾಗುವುದು. ಬ್ರಹ್ಮನ ಒಂದು ಹಗಲಿನಲ್ಲಿ ಅಂತಹ ಹದಿನಾಲ್ಕು ಮನ್ವಂತರ ಗಳಾಗುವುವು.

ಸ್ವಾಯಂಭುವಾದಯಃ ಸರ್ವೇ ತತಃ ಸಾವರ್ಣಿಕಾದಯಃ ।
ತೈರಿಯಂ ಪೃಥಿವೀ ಸರ್ವಾ ಸಪ್ತದ್ವೀಪಾ ಸಪರ್ವತಾ ॥ ೧೫ ॥

ಪೂರ್ಣಂ ಯುಗಸಹಸ್ರಂ ವೈ ಪರಿಪಾಲ್ಯಾ ನರೇಶ್ವರೈಃ ।
ಮನ್ವಂತರೇಣ ಚೈಕೇನ ಸರ್ವಾಣ್ಯೇವಾಂತರಾಣಿ ವೈ ॥ ೧೬ ॥

ವ್ಯಾಖ್ಯಾತಾನಿ ನ ಸಂದೇಹಃ ಕಲ್ಪೇ ಕಲ್ಪೇ ನ ಚೈವ ಹಿ ।
ಬ್ರಾಹ್ಮಮೇಕಮಹಃ ಕಲ್ಪಸ್ತಾವತೀ ರಾತ್ರಿರಿಷ್ಯತೇ ॥ ೧೭ ॥

ಚತುರ್ಯುಗಸಹಸ್ರಂ ತು ಕಲ್ಪಮಾಹುರ್ಮನೀಷಿಣಃ ।
ತ್ರೀಣಿ ಕಲ್ಪಶತಾನಿ ಸ್ಯುಸ್ತಥಾ ಷಷ್ಟಿರ್ದ್ವಿಜೋತ್ತಮಾಃ ॥ ೧೮ ॥

---

೧೫. ಆ ಮನುಗಳು ಸ್ವಾಯಂಭುವ, ಸಾವರ್ಣಿಕ ಮುಂತಾದವರು ಹದಿನಾಲ್ಕು ಮಂದಿಯಿರುವರು, ಆ ಮನುಗಳಿಂದ ಸಪ್ತದ್ವೀಪಗಳಿಂದಲೂ ಪರ್ವತಗಳಿಂದಲೂ ಕೂಡಿದ ಸಕಲ ಪೃಥಿವಿಯು ಆಳಲ್ಪಟ್ಟಿದೆ.

೧೬. ಮನುಗಳೆಂಬ ನರೇಶ್ವರರಿಂದ ಸಕಲ ಭೂಮಿಯು ಪೂರ್ಣಯುಗ ಸಹಸ್ರಪರ್ಯಂತವಾಗಿ ಪಾಲಿಸಲ್ಪಡುವುದು. ಅವುಗಳಲ್ಲಿ ಒಂದು ಮನ್ವಂತರಕ್ಕೆ ಸಮಾನವಾಗಿ ಮಿಕ್ಕ ಎಲ್ಲ ಮನ್ವಂತರಗಳಿರುವುವು.

೧೭. ಆದ್ದರಿಂದ ಒಂದು ಮನ್ವಂತರದ ವ್ಯಾಖ್ಯಾನದಿಂದ ಎಲ್ಲ ಮನ್ವಂತರಗಳು ವ್ಯಾಖ್ಯಾನ ಮಾಡಲ್ಪಟ್ಟಂತೆ ಆಗುವುವು. ಪ್ರತಿಯೊಂದು ಕಲ್ಪದ ವಿಷಯದಲ್ಲಿ ಯಾವುದೊಂದು ಸಂದೇಹವೂ ಇಲ್ಲ. ಬ್ರಹ್ಮನ ಒಂದು ಹಗಲು ಒಂದು ಕಲ್ಪವು. ರಾತ್ರಿಯು ಅಷ್ಟು ಪರಿಮಾಣವುಳ್ಳದ್ದಾಗಿದೆ.

೧೮. ವಿದ್ವಾಂಸರು ಚತುರ್ಯುಗ ಸಹಸ್ರಕಾಲವನ್ನು ಒಂದುದಿನ ಅಥವಾ ಕಲ್ಪವೆಂದು ಹೇಳುವರು. ಅಂತಹ ಕಲ್ಪಗಳು ಮುನ್ನೂರ ಅರವತ್ತು ಸೇರಿದರೆ ಒಂದು ವರ್ಷವಾಗುವುದು.

ಬ್ರಹ್ಮಣೋ ವತ್ಸರಸ್ತಜ್ಞೈಃ ಕಥಿತೋ ವೈ ದ್ವಿಜೋತ್ತಮಾಃ ।
ಸ ಚ ಕಾಲಃ ಶತಗುಣಃ ಪರಾರ್ಧಂ ಚೈವ ತದ್ವಿದುಃ　　　॥ ೧೯ ॥

ತಸ್ಯಾಂತೇ ಸರ್ವಸತ್ತ್ವಾನಾಂ ಸಹೇತೌ ಪ್ರಕೃತೌ ಲಯಃ ।
ತೇನಾಯಂ ಪ್ರೋಚ್ಯತೇ ಸದ್ಭಿಃ ಪ್ರಾಕೃತಃ ಪ್ರತಿಸಂಚರಃ　　　॥ ೨೦ ॥

ಬ್ರಹ್ಮನಾರಾಯಣೇಶಾನಾಂ ತ್ರಯಾಣಾಂ ಪ್ರಕೃತೌ ಲಯಃ ।
ಪ್ರೋಚ್ಯತೇ ಕಾಲಯೋಗೇನ ಪುನರೇವ ಚ ಸಂಭವಃ　　　॥ ೨೧ ॥

ಏವಂ ಬ್ರಹ್ಮಾ ಚ ಭೂತಾನಿ ವಾಸುದೇವೋಽಪಿ ಶಂಕರಃ ।
ಕಾಲೇನೈವ ತು ಸೃಜ್ಯಂತೇ ಸ ಏ ಗ್ರಸತೇ ಪುನಃ　　　॥ ೨೨ ॥

ಅನಾದಿರೇಷ ಭಗವಾನ್ ಕಾಲೋಽನಂತೋಽಜರೋಽಮರಃ ।
ಸರ್ವಗತ್ವಾತ್ ಸ್ವತಂತ್ರತ್ವಾತ್ ಸರ್ವಾತ್ಮತ್ವಾನ್ಮಹೇಶ್ವರಃ　　　॥ ೨೩ ॥

---

೧೯. ದ್ವಿಜೋತ್ತಮರೆ ! ಮುನ್ನೂರ ಅರವತ್ತು ಕಲ್ಪಗಳು ಸೇರಿ ಬ್ರಹ್ಮನ ಒಂದು ವರ್ಷವಾಗುವುದೆಂದು ಆ ಬ್ರಹ್ಮಮಾನವನ್ನು ತಿಳಿದವರು ಹೇಳುವರು. ಅಂತಹ ವರ್ಷಗಳು ಒಂದು ನೂರು ಕಳೆದರೆ ಒಂದು ಪರಾರ್ಧವೆಂದು ವಿದ್ವಾಂಸರು ಹೇಳುವರು.

೨೦. ಆ ಪರಾರ್ಧದ ಅಂತದಲ್ಲಿ ಸರ್ವಭೂತಗಳಿಗೆ ತಮ್ಮ ಕಾರಣ ಸಹಿತವಾಗಿ ಪ್ರಕೃತಿಯಲ್ಲಿ ಲಯವಾಗುವುದು. ಆದರಿಂದ ಆ ಲಯವನ್ನು ಸತ್ಪುರುಷರು ಪ್ರಾಕೃತ ಪ್ರಲಯವೆಂದು ವರ್ಣಿಸುವರು.

೨೧. ಕಾಲಯೋಗದಿಂದ ಬ್ರಹ್ಮ-ನಾರಾಯಣ- ಈಶ್ವರ ಈ ತ್ರಿಮೂರ್ತಿಗಳಿಗೆ ಪ್ರಕೃತಿಯಲ್ಲಿ ಲಯವೆಂದು ಪಂಡಿತರಿಂದ ಹೇಳಲ್ಪಟ್ಟಿದೆ. ಲಯವಾಗಿ ಕಾಲಯೋಗ ದಿಂದ ಪುನಃ ಉತ್ಪತ್ತಿಯು ಆಗುವುದು.

೨೨. ಈ ರೀತಿಯಾಗಿ ಬ್ರಹ್ಮ, ವಾಸುದೇವ, ಶಂಕರ ಮತ್ತು ಸಕಲ ಭೂತಗಳು ಕಾಲದಿಂದಲೆ ಸೃಷ್ಟಿಸಲ್ಪಡುವುವು. ಅಂತಹ ಕಾಲಾತ್ಮನೆ ಅವರನ್ನು ಸಂಹರಿಸುವನು.

೨೩. ಅಂತಹ ಕಾಲಾತ್ಮನು ಅನಾದಿಯೂ, ಷಡ್ಗುಣ-ಐಶ್ವರ್ಯಸಂಪನ್ನನೂ, ಅನಂತನೂ, ಜರಾವರ್ಜಿತನೂ, ಮರಣವರ್ಜಿತನೂ, ಆಗಿರುವನು. ಮತ್ತು ಸರ್ವವ್ಯಾಪಿ, ಸ್ವತಂತ್ರ ಮತ್ತು ಸರ್ವಾತ್ಮಕನಾಗಿರುವುದರಿಂದ ಮಹೇಶ್ವರನೆಂದು ಸ್ಮರಿಸಲಟ್ಟಿರುವನು.

ಬ್ರಹ್ಮಾಣೋ ಬಹವೋ ರುದ್ರಾ ಹ್ಯನ್ಯೇ ನಾರಾಯಣಾದಯಃ ।
ಏಕೋ ಹಿ ಭಗವಾನೀಶಃ ಕಾಲಃ ಕವಿರಿತಿ ಶ್ರುತಿಃ ॥ ೨೪ ॥

ಏಕಮತ್ರ ವ್ಯತೀತಂ ತು ಪರಾರ್ಧಂ ಬ್ರಹ್ಮಣೋ ದ್ವಿಜಾಃ ।
ಸಾಂಪ್ರತಂ ವರ್ತತೇ ತ್ವರ್ಧಂ ತಸ್ಯ ಕಲ್ಪೋಽಯಮಗ್ರಜಃ ॥ ೨೫ ॥

ಯೋಽತೀತಃ ಸೋಽನ್ತಿಮಃ ಕಲ್ಪಃ ಪಾದ್ಮ ಇತ್ಯುಚ್ಯತೇ ಬುಧೈಃ ।
ವಾರಾಹೋ ವರ್ತತೇ ಕಲ್ಪಸ್ತಸ್ಯ ವಕ್ಷ್ಯಾಮಿ ವಿಸ್ತರಮ್ ॥ ೨೬ ॥

ಇತಿ ಶ್ರೀ ಕೂರ್ಮಪುರಾಣೇ ಪಂಚಮೋಽಧ್ಯಾಯಃ

---

೨೪. ಹೀಗಿರಲು ಬ್ರಹ್ಮದೇವ, ನಾರಾಯಣ, ರುದ್ರ ಮುಂತಾದವರು ಬಹುಮಂದಿಯಾಗಿರುವರು. ಭಗವಂತನೂ, ಸರ್ವಜ್ಞನೂ, ಮತ್ತು ನಿಯಾಮಕನೂ ಆದ ಕಾಲಾತ್ಮನು ಒಬ್ಬನೇ ಇರುವನೆಂದು ಶ್ರುತಿಯು ವರ್ಣಿಸುವುದು.

೨೫. ದ್ವಿಜರೇ ! ಬ್ರಹ್ಮನ ಒಂದು ಪರಾರ್ಧವು ಈಗ ಕಳೆದಿರುವುದು. ಈಗ ಮುಂದಿನ ಮತ್ತೊಂದು ಅರ್ಧವು ನಡೆಯುತ್ತಿದೆ. ಅದರಲ್ಲಿಯೂ ಮೊದಲನೆಯ ಕಲ್ಪವು ಈಗ ಪರಿವರ್ತಿಸುತ್ತಿದೆ.

೨೬. ಹಿಂದೆ ಕಳೆದ ಕಡೆಯ ಕಲ್ಪವು ಪಾದ್ಮಕಲ್ಪನೆಂದು ಬುಧರಿಂದ ಹೇಳಲ್ಪಟ್ಟಿದೆ. ಈಗ ವಾರಾಹ ಕಲ್ಪವು ನಡೆಯುತ್ತಿರುವುದು. ಆ ಕಲ್ಪದ ವಿಸ್ತಾರವನ್ನು ವರ್ಣಿಸುತ್ತೇನೆ.

ಕೂರ್ಮಪುರಾಣದಲ್ಲಿ ಐದನೆಯ ಅಧ್ಯಾಯವು ಸಮಾಪ್ತವು.



ಶ್ರೀಃ

# ಕೂರ್ಮಪುರಾಣಂ

## ಷಷ್ಠೋಽಧ್ಯಾಯಃ

### ( ಪೃಥಿವ್ಯುದ್ಧಾರಃ ).

**ಕೂರ್ಮ ಉವಾಚ :—**

**ಆಸೀದೇಕಾರ್ಣವಂ ಘೋರಮವಿಭಾಗಂ ತಮೋಮಯಮ್ ।**
**ಶಾಂತವಾತಾದಿಕಂ ಸರ್ವಂ ನ ಪ್ರಾಜ್ಞಾಯತ ಕಿಂಚನ ॥ ೧ ॥**

**ಏಕಾರ್ಣವೇ ತದಾ ತಸ್ಮಿನ್ನಷ್ಟೇ ಸ್ಥಾವರ ಜಂಗಮೇ ।**
**ತದಾ ಸಮಭವದ್ಬ್ರಹ್ಮಾ ಸಹಸ್ರಾಕ್ಷಃ ಸಹಸ್ರಪಾತ್ ॥ ೨ ॥**

**ಸಹಸ್ರಶೀರ್ಷಾಪುರುಷೋ ರುಕ್ಮವರ್ಣೋ ಹ್ಯತೀಂದ್ರಿಯಃ ।**
**ಬ್ರಹ್ಮಾ ನಾರಾಯಣಾಖ್ಯಸ್ತು ಸುಷ್ವಾಪ ಸಲಿಲೇ ತದಾ ॥ ೩ ॥**

---

### ಆರನೆಯ ಅಧ್ಯಾಯವು.

೧. ಕೂರ್ಮಮೂರ್ತಿಯು ಇಂತೆಂದನು :—ಸರ್ಗಾದಿಯಲ್ಲಿ ಈ ಜಗತ್ತತ್ತ್ವವು ಒಂದೂ ಕಾಣಿಸದೆ ಘೋರವೂ, ವಿಭಾಗವಿಲ್ಲದ್ದೂ, ತಮೋಮಯವೂ, ಮತ್ತು ಶಾಂತವಾದ ಮಾರುತಾದಿ ಭೂತಗಳುಳ್ಳದ್ದೂ ಆಗಿ ಏಕ ಸಮುದ್ರಪ್ರಾಯವಾಗಿತ್ತು, ಯಾವ ತತ್ತ್ವವೂ ಕಾಣಿಸುತ್ತಿರಲಿಲ್ಲ.

೨. ಸ್ಥಾವರ ಜಂಗಮಗಳೆಲ್ಲ ನಾಶವಾಗಿ ಏಕಾರ್ಣವ ಪ್ರಾಯವಾಗಿರುವ ಆ ಸಮಯದಲ್ಲಿ ಬ್ರಹ್ಮನು ಸಹಸ್ರನೇತ್ರ, ಸಹಸ್ರಪಾದಗಳಿಂದ ಕೂಡಿ ಆವಿರ್ಭವಿಸಿದನು

೩. ಮತ್ತು ಬ್ರಹ್ಮದೇವನು ಸಹಸ್ರ ಶಿರಗಳಿಂದ ಕೂಡಿದವನೂ, ಪುರುಷಾಕಾರನೂ, ಸುವರ್ಣದಂತೆ ವರ್ಣವುಳ್ಳವನೂ, ಮತ್ತು ಅತೀಂದ್ರಿಯನೂ ಆಗಿದ್ದನು. ಅಂತಹ ನಾರಾಯಣನೆಂಬ ಸಂಜ್ಞಾಂಕಿತನಾದ ಬ್ರಹ್ಮನು ಆಗ ನೀರಿನಲ್ಲಿ ಮಲಗಿದನು.

ಇಮಂ ಚೋದಾಹರಂತ್ಯತ್ರ ಶ್ಲೋಕಂ ನಾರಾಯಣಂ ಪ್ರತಿ ।
ಬ್ರಹ್ಮಸ್ವರೂಪಿಣಂ ದೇವಂ ಜಗತಃ ಪ್ರಭವಾಪ್ಯಯಮ್ ॥ ೪ ॥

ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ ।
ಅಯನಂ ತಸ್ಯ ತಾ ಯಸ್ಮಾತ್ತೇನನಾರಾಯಣಃ ಸ್ಮೃತಃ ॥ ೫ ॥

ತುಲ್ಯಂ ಯುಗಸಹಸ್ರಸ್ಯ ನೈಶಂ ಕಾಲಮುಪಾಸ್ಯ ಸಃ ।
ಶರ್ವರ್ಯಂತೇ ಪ್ರಕುರುತೇ ಬ್ರಹ್ಮತ್ವಂ ಸರ್ಗಕಾರಣಾತ್ ॥ ೬ ॥

ತತಸ್ತು ಸಲಿಲೇ ತಸ್ಮಿನ್ ವಿಜ್ಞಾಯಾಂತರ್ಗತಾಂ ಮಹೀಮ್ ।
ಅನುಮಾನಾತ್ತದುದ್ಧಾರಂ ಕರ್ತುಕಾಮಃ ಪ್ರಜಾಪತಿಃ ॥ ೭ ॥

---

೪. ಬ್ರಹ್ಮಸ್ವರೂಪಿಯೂ ಜಗತ್ತಿನ ಸೃಷ್ಟಿ, ಲಯಗಳಿಗೆ ಕಾರಣನೂ, ಆದ ನಾರಾಯಣದೇವನನ್ನು ಕುರಿತು ಜಲದಲ್ಲಿ ಸುಪ್ತನಾಗಿದ್ದ ವಿಷಯದಲ್ಲಿ ಈ ಒಂದು ಪದ್ಯವನ್ನು ಉದಾಹರಿಸುತ್ತಾರೆ.

೫. ಜಲವು ನಾರ ಎಂಬ ಶಬ್ದದಿಂದ ಕರೆಯಲ್ಪಡುವುದು. ಅದಕ್ಕೆ ಜಲವು ನರರೂಪಿಯಾದ ಪರಮಾತ್ಮನಿಂದ ಹುಟ್ಟಿದೆಯೆಂಬುದು ಕಾರಣವು. ಅಂತಹ ನಾರವೆಂಬ ಜಲವು ಸಹಸ್ರಪಾದಾದಿ ರೂಪದಿಂದ ಆವಿರ್ಭವಿಸಿದ ಪರಮಾತ್ಮನಿಗೆ ಅಯನವಾದ್ದರಿಂದ ಆ ಪರಮಾತ್ಮನು ನಾರಾಯಣನೆಂದು ಸ್ಮರಿಸಲ್ಪಟ್ಟಿರುವನು.

೬. ಅವನು ಯುಗಸಹಸ್ರರೂಪವಾದ ದಿನಕ್ಕೆ ತುಲ್ಯವಾದ ರಾತ್ರಿಕಾಲವನ್ನು ಕಳೆದು ಆ ರಾತ್ರಿಯ ಅವಸಾನದಲ್ಲಿ ಸೃಷ್ಟಿಯಾಗುವುದಕ್ಕೋಸ್ಕರ ಬ್ರಹ್ಮದೇವನ ಅಧಿಕಾರವನ್ನು ಮಾಡುವನು.

೭. ಅನಂತರದಲ್ಲಿ ಪ್ರಜಾಪತಿಯು ಆ ಜಲರಾಶಿಯಲ್ಲಿ ಭೂಮಿಯು ಅಂತರ್ಗತವಾಗಿರುವುದನ್ನು ಅನುಮಾನದಿಂದ ತಿಳಿದು ಆ ಭೂಮಿಯ ಉದ್ಧಾರವನ್ನು ಮಾಡಬೇಕೆಂದು ಇಷ್ಟಪಟ್ಟನು.

ಜಲಕ್ರೀಡಾಸು ರುಚಿರಂ ವಾರಾಹಂ ರೂಪಮಾಸ್ಥಿತಃ ।
ಅಧೃಷ್ಯಂ ಮನಸಾಪ್ಯನ್ಯೈಃ ವಾಙ್ಮಯಂ ಬ್ರಹ್ಮಸಂಜ್ಞಿತಮ್ ॥ ೮ ॥

ಪೃಥಿವ್ಯುದ್ಧರಣಾರ್ಥಾಯ ಪ್ರವಿಶ್ಯ ಚ ರಸಾತಲಮ್ ।
ದಂಷ್ಟ್ರಯಾಭ್ಯುಜ್ಜಹಾರೈನಾ ಮಾತ್ಮಾಧಾರೋ ಧರಾಧರಃ ॥ ೯ ॥

ದೃಷ್ಟ್ವಾ ದಂಷ್ಟ್ರಾಗ್ರವಿನ್ಯಸ್ತಾಂ ಪೃಥ್ವೀಂ ಪ್ರಥಿತ ಪೌರುಷಮ್ ।
ಅಸ್ತುವನ್ ಜನಲೋಕಸ್ಥಾ ಸಿದ್ಧಾ ಬ್ರಹ್ಮರ್ಷಯೋ ಹರಿಮ್ ॥ ೧೦ ॥

ಋಷಯ ಊಚುಃ :—

ನಮಸ್ತೇ ದೇವದೇವಾಯ ಬ್ರಹ್ಮಣೇ ಪರಮೇಷ್ಠಿನೇ ।
ಪುರುಷಾಯ ಪುರಾಣಾಯ ಶಾಶ್ವತಾಯ ಜಯಾಯ ಚ ॥ ೧೧ ॥

---

೮. ಇತರರಿಂದ ಮನಸ್ಸಿನಿಂದ ಕೂಡ ಯೋಚಿಸಲಾಗದ, ವಾಙ್ಮಯ ಬ್ರಹ್ಮವೆಂಬ ಸಂಜ್ಞಾಂಕಿತವಾದ, ಮತ್ತು ಜಲಕ್ರೀಡಾ ಪ್ರಸಂಗದಲ್ಲಿ ಸುಂದರವಾದ ವರಾಹ ರೂಪವನ್ನು ಪ್ರಜಾಪತಿಯು ಧರಿಸಿದನು.

೯. ಭೂಮಿಯನ್ನು ಎತ್ತಿತಂದ ಆತ್ಮಾಧಾರನಾದ ಪರಮಾತ್ಮನು ಪೃಥಿವಿಯನ್ನು ಉದ್ಧಾರಮಾಡಲು ರಸಾತಲವನ್ನು ಪ್ರವೇಶಿಸಿ ಅದನ್ನು ಕೋರೆ ಹಲ್ಲಿನಿಂದ ಉದ್ಧಾರಮಾಡಿದನು.

೧೦. ಆಗ ಜನಲೋಕದಲ್ಲಿರುವ ಸಿದ್ಧಿಯನ್ನು ಹೊಂದಿರುವ ಬ್ರಹ್ಮರ್ಷಿಗಳು ಕೋರೆದವಡೆಯಲ್ಲಿ ಇರಿಸಿದ ಭೂವಿಯನ್ನು ನೋಡಿ ಪ್ರಸಿದ್ಧವಾದ ಪೌರುಷವುಳ್ಳ ಹರಿಯನ್ನು ಸ್ತುತಿಮಾಡಿದರು.

ಋಷಿಗಳು ಇಂತೆಂದರು :—

೧೧. ದೇವದೇವನೂ, ಪರಮಸ್ಥಾನದಲ್ಲಿರುವವನೂ ಪುರಾಣಪುರುಷನೂ, ಶಾಶ್ವತನೂ, ಮತ್ತು ಜಯಮೂರ್ತಿಯೂ ಆದ ಬ್ರಹ್ಮದೇವನಿಗೆ ನಮಸ್ಕಾರವು.

ನಮಃ ಸ್ವಯಂಭುವೇ ತುಭ್ಯಂ ಸ್ರಷ್ಟ್ರೇ ಸರ್ವಾರ್ಥವೇದಿನೇ ।
ನಮೋ ಹಿರಣ್ಯಗರ್ಭಾಯ ವೇಧಸೇ ಪರಮಾತ್ಮನೇ ॥ ೧೨ ॥

ನಮಸ್ತೇ ವಾಸುದೇವಾಯ ವಿಷ್ಣವೇ ವಿಶ್ವಯೋನಯೇ ।
ನಾರಾಯಣಾಯ ದೇವಾಯ ದೇವಾನಾಂ ಹಿತಕಾರಿಣೇ ॥ ೧೩ ॥

ನಮೋಽಸ್ತು ತೇ ಚತುರ್ವಕ್ತ್ರ ಶಾರ್ಙ್ಗಚಕ್ರಾಸಿಧಾರಿಣೇ ।
ಸರ್ವಭೂತಾತ್ಮಭೂತಾಯ ಕೂಟಸ್ಥಾಯ ನಮೋ ನಮಃ ॥ ೧೪ ॥

ನಮೋ ವೇದರಹಸ್ಯಾಯ ನಮಸ್ತೇ ವೇದಯೋನಯೇ ।
ನಮೋ ಬುದ್ಧಾಯ ಶುದ್ಧಾಯ ನಮಸ್ತೇ ಜ್ಞಾನರೂಪಿಣೇ ॥ ೧೫ ॥

---

೧೨. ಸಮಸ್ತ ಅರ್ಥಗಳನ್ನು ಅರಿತಿರುವ, ಮತ್ತು ಸೃಷ್ಟಿವ್ಯಾಪಾರವನ್ನು ಮಾಡುವ ಸ್ವಯಂಭುವಿಗೆ ನಮಸ್ಕಾರವು, ಹಿರಣ್ಯಗರ್ಭನೂ, ಸರ್ವವನ್ನು ವಿಧಿಸುವವನೂ, ಆದ ಪರಮಾತ್ಮನಿಗೆ ನಮಸ್ಕಾರವು.

೧೩. ವಾಸುದೇವಸ್ವರೂಪನೂ, ವ್ಯಾಪಕನೂ, ವಿಶ್ವಕ್ಕೆ ಕಾರಣನೂ, ದೇವತೆಗಳಿಗೆ ಹಿತವನ್ನು ಮಾಡುವವನೂ ಮತ್ತು ನಾರಾಯಣದೇವನೂ ಆದ ನಿನಗೆ ನಮಸ್ಕಾರವು.

೧೪. ನಾಲ್ಕು ಮುಖಗಳಿಂದ ರಾಜಿಸುವವನೇ ! ಶಂಖ-ಚಕ್ರ ಮತ್ತು ಖಡ್ಗಗಳನ್ನು ಧರಿಸಿದವನೂ ಸರ್ವಭೂತಗಳಿಗೆ ಆತ್ಮಭೂತನೂ. ಮತ್ತು ಕೂಟಸ್ಥನೂ ಆದ ನಿನಗೆ ನಮಸ್ಕಾರವು.

೧೫. ವೇದಗಳ ರಹಸ್ಯರೂಪನೂ, ವೇದಗಳಿಗೆ ಕಾರಣರೂಪನೂ, ಚೇತನರೂಪಿಯೂ, ನಿಷ್ಕಲಂಕನೂ, ಮತ್ತು ಜ್ಞಾನಪ್ರಕಾಶಸ್ವರೂಪನೂ ಆದ ನಿನಗೆ ವಂದಿಸುವೆನು.

ನಮೋಽಸ್ತ್ವಾನಂದರೂಪಾಯ ಸಾಕ್ಷಿಣೇ ಜಗತಾಂ ನಮಃ ।
ಅನಂತಾಯಾಪ್ರಮೇಯಾಯ ಕಾರ್ಯಾಯ ಕಾರಣಾಯ ಚ ॥ ೧೬ ॥

ನಮಸ್ತೇ ಪಂಚಭೂತಾಯ ಪಂಚಭೂತಾತ್ಮನೇ ನಮಃ ।
ನಮೋ ಮೂಲಪ್ರಕೃತಯೇ ಮಾಯಾರೂಪಾಯ ತೇ ನಮಃ ॥ ೧೭ ॥

ನಮೋಽಸ್ತು ತೇ ವರಾಹಾಯ ನಮಸ್ತೇ ಮತ್ಸ್ಯರೂಪಿಣೇ ।
ನಮೋ ಯೋಗಾಧಿಗಮ್ಯಾಯ ನಮಃ ಸಂಕರ್ಷಣಾಯ ತೇ ॥ ೧೮ ॥

ನಮಸ್ತ್ರಿಮೂರ್ತಯೇ ತುಭ್ಯಂ ತ್ರಿಧಾಮ್ನೇ ದಿವ್ಯತೇಜಸೇ ।
ನಮಃ ಸಿದ್ಧಾಯ ಪೂಜ್ಯಾಯ ಗುಣತ್ರಯವಿಭಾಗಿನೇ ॥ ೧೯ ॥

---

೧೬. ಆನಂದರೂಪನಿಗೆ ನಮಸ್ಕಾರವು. ಜಗತ್ತಿನ ಸಾಕ್ಷಿಸ್ವರೂಪನಿಗೆ ನಮಸ್ಕಾರವು. ಅಂತವಿಲ್ಲದವನೂ, ಪ್ರಮಾಣಾಗೋಚರನೂ, ಕಾರ್ಯಸ್ವರೂಪನೂ ಮತ್ತು ಕಾರಣಸ್ವರೂಪನೂ ಆದ ಪರಮಾತ್ಮನಿಗೆ ನಮಸ್ಕಾರವು.

೧೭. ಪೃಥಿವ್ಯಾದಿ ಪಂಚಭೂತಗಳ ರೂಪದಿಂದ ಪಂಚಸ್ವರೂಪವನ್ನು ಧರಿಸಿದ ಪರಮಾತ್ಮನಿಗೆ ನಮಸ್ಕಾರವು, ಮತ್ತು ಮಾಯಾರೂಪದಿಂದ ಸಕಲ ವಸ್ತುಗಳಿಗೆ ಮೂಲಪ್ರಕೃತಿಸ್ವರೂಪನಾದ ನಿನಗೆ ನಮಸ್ಕಾರವು.

೧೮. ವರಾಹರೂಪಿಯಾದ ನಿನಗೆ ನಮಸ್ಕಾರವು. ಮತ್ಸ್ಯರೂಪಿಯಾದ ನಿನಗೆ ನಮಸ್ಕಾರವು, ಯೋಗದಿಂದ ಅರಿಯಬೇಕಾದ ನಿನಗೆ ನಮಸ್ಕಾರವು, ಹಾಗು ಸಂಕರ್ಷಣನಾದ ನಿನಗೆ ನಮಸ್ಕಾರವು.

೧೯. ಧಾಮತ್ರಯದಿಂದ ಕೂಡಿದ ಮತ್ತು ದಿವ್ಯತೇಜಸ್ಸಿನಿಂದ ಕೂಡಿದ ತ್ರಿಮೂರ್ತಿ ಸ್ವರೂಪನಾದ ನಿನಗೆ ನಮಸ್ಕಾರವು ಮತ್ತು ಸಿದ್ಧನೂ ಪೂಜ್ಯನೂ ಗುಣತ್ರಯ ನಿಮಿತ್ತವಾದ ವಿಭಾಗವುಳ್ಳವನೂ ಆದ ನಿನಗೆ ನಮಸ್ಕಾರವು.

ನಮೋಽಸ್ತ್ವಾದಿತ್ಯರೂಪಾಯ ನಮಸ್ತೇ ಪದ್ಮಯೋನಯೇ ।
ನಮೋಽಮೂರ್ತಾಯ ಮೂರ್ತಾಯ ಮಾಧವಾಯ ನಮೋ ನಮಃ ॥

ತ್ವಯ್ಯೈವ ಸೃಷ್ಟಮಖಿಲಂ ತ್ವಯ್ಯೇವ ಸಕಲಂ ಸ್ಥಿತಮ್ ।
ಪಾಲಯ್ಯೈತಜ್ಜಗತ್ಸರ್ವಂ ತ್ರಾತಾ ತ್ವಂ ಶರಣಂ ಗತಿಃ ॥ ೨೧ ॥

ಇತ್ಥಂ ಸ ಭಗವಾನ್ ವಿಷ್ಣುಃ ಸನಕಾದ್ಯೈರಭಿಷ್ಟುತಃ ।
ಪ್ರಸಾದಮಕರೋತ್ತೇಷಾಂ ವರಾಹವಪುರೀಶ್ವರಃ ॥ ೨೨ ॥

ತತಃ ಸ್ವಸ್ಥಾನಮಾನೀಯ ಪೃಥಿವೀಂ ಪೃಥಿವೀಧರಃ ।
ಮುಮೋಚ ರೂಪಂ ಮನಸಾ ಧಾರಯಿತ್ವಾ ಧರಾಧರಃ ॥ ೨೩ ॥

---

೨೦. ಆದಿತ್ಯರೂಪನಾದ ನಿನಗೆ ನಮಸ್ಕಾರವು, ಪದ್ಮಗರ್ಭದಿಂದ ಹುಟ್ಟಿದ ಬ್ರಹ್ಮದೇವನಾದ ನಿನಗೆ ನಮಸ್ಕಾರವು ಮೂರ್ತ-ಅಮೂರ್ತಸ್ವರೂಪನೂ ಲಕ್ಷ್ಮೀ ಪತಿಯೂ ಆದ ನಿನಗೆ ನಮಸ್ಕಾರವು.

೨೧. ನಿನ್ನಿಂದಲೆ ನಿಖಿಲ ಜಗತ್ತು ಸೃಷ್ಟಿಯಾಗಿರುವುದು, ನಿನ್ನಲ್ಲಿಯೆ ಸಕಲವೂ ಇರುವುದು, ಈ ಎಲ್ಲ ಜಗತ್ತನ್ನು ಪಾಲಿಸು, ನೀನೆ ಪಾಲಕನು, ನೀನೇ ಪರಮಗತಿಯು.

೨೨. ಈ ರೀತಿಯಾಗಿ ಆ ಭಗವಂತನಾದ ವಿಷ್ಣುವು ಸನಕ ಮುಂತಾದ ಮಹರ್ಷಿಗಳಿಂದ ಸ್ತುತಿಸಲ್ಪಟ್ಟನು. ಆಗ ವರಾಹಮೂರ್ತಿಯಿಂದ ಇರುವ ಈಶ್ವರನು ಅವರಿಗೆ ಅನುಗ್ರಹಮಾಡಿದನು.

೨೩. ಅನಂತರದಲ್ಲಿ ಪೃಥವೀಧಾರಿಯಾದ ವಿಷ್ಣುವು ಪೃಥಿವಿಯನ್ನು ಸ್ವಸ್ಥಾನಕ್ಕೆ ತಂದು ಇರಿಸಿ ತನ್ನ ವರಾಹ ರೂಪವನ್ನು ತ್ಯಜಿಸಿದನು, ಮತ್ತು ಪೃಥಿವೀಧರನಾದ ವಿಷ್ಣುವು ಭೂಮಿಯನ್ನು ಮನಸ್ಸಿನಲ್ಲಿ ಧರಿಸಿದನು.

ತಸ್ಯೋಽಪರಿ ಜಲೌಘಸ್ಯ ಮಹತೋ ನೌರಿವ ಸ್ಥಿತಾ ।
ವಿತತತ್ವಾಚ್ಚ ದೇಹಸ್ಯ ನ ಮಹೀ ಯಾತಿ ಸಂಪ್ಲವಮ್ ॥ ೨೪ ॥

ಪೃಥಿವೀಂ ಸ ಸಮೀಕೃತ್ಯ ಪೃಥಿವ್ಯಾಂ ಸೋಽಚಿನೋದ್ಗಿರೀನ್ ।
ಪ್ರಾಕ್ಸರ್ಗದಗ್ಧಾನಖಿಲಾನ್ ತತಃ ಸರ್ಗೇಽದಧನ್ಮನಃ ॥ ೨೫ ॥

ಇತಿ ಶ್ರೀ ಕೂರ್ಮಪುರಾಣೇ ಷಷ್ಠೋಽಧ್ಯಾಯಃ

---

೨೪. ಆ ಮಹಾಜಲರಾಶಿಯ ಮೇಲುಗಡೆಯಲ್ಲಿ ದೋಣಿಯಂತೆ ಇರುವ ಭೂಮಿಯು ತನ್ನ ದೇಹವು ವಿಸ್ತಾರವಾಗಿರುವುದರಿಂದ ತೇಲಿಹೋಗಿ ನಾಶವನ್ನು ಹೊಂದುವುದಿಲ್ಲ.

೨೫. ಅನಂತರದಲ್ಲಿ ಆ ಪೃಥಿವಿಯನ್ನು ಸಮೀಕರಣಮಾಡಿ ಪರಮಾತ್ಮನು ಪೂರ್ವಸರ್ಗದಲ್ಲಿ ಸುಟ್ಟುಹೋದ ಸಕಲಗಿರಿಗಳನ್ನು ಸಂಗ್ರಹಿಸಿದನು. ಮತ್ತೆ ಸೃಷ್ಟಿಯ ರಚನೆಯ ಸಂಕಲ್ಪವನ್ನು ಮಾಡಿದನು.

ಕೂರ್ಮಪುರಾಣದಲ್ಲಿ ಆರನೆಯ ಅಧ್ಯಾಯವು ಸಮಾಪ್ತವು.



ಶ್ರೀಃ

# ಕೂರ್ಮಪುರಾಣಂ

## ಸಪ್ತಮೋಽಧ್ಯಾಯಃ

### (ಸೃಷ್ಟಿವರ್ಣನಮ್)

**ಕೂರ್ಮ ಉವಾಚ :—**

**ಸೃಷ್ಟಿಂ ಚಿಂತಯತಸ್ತಸ್ಯ ಕಲ್ಪಾದಿಷು ಯಥಾ ಪುರಾ ।**
**ಅಬುದ್ಧಿಪೂರ್ವಕಃ ಸರ್ಗಃ ಪ್ರಾದುರ್ಭೂತಸ್ತಮೋಮಯಃ ॥ ೧ ॥**

**ತಮೋ ಮೋಹೋ ಮಹಾಮೋಹಸ್ತಾಮಿಸ್ರಶ್ಚಾಂಧಸಂಜ್ಞಿತಃ।**
**ಅವಿದ್ಯಾ ಪಂಚಮೀ ತೇಷಾಂ ಪ್ರಾದುರ್ಭೂತಾ ಮಹಾತ್ಮನಃ ॥ ೨ ॥**

---

## ಏಳನೆಯ ಅಧ್ಯಾಯವು

ಕೂರ್ಮಮೂರ್ತಿಯು ಇಂತೆಂದನು :—

೧. ಪೂರ್ವಕಲ್ಪದಲ್ಲಿದ್ದ ಸೃಷ್ಟಿಕ್ರಮವನ್ನು ಪರಮಾತ್ಮನು ಚಿಂತಿಸುತ್ತಿರುವಾಗ ಈಕ್ಷಣವೆಂಬ ಬುದ್ಧಿಪೂರ್ವಕವಲ್ಲದ ತಮೋಮಯವಾದ ಸರ್ಗವು ಪ್ರಾದುರ್ಭವಿಸಿತು.

೨. ಆಗ ಆ ಮಹಾತ್ಮನಿಂದ ತಮಸ್ಸು, ಮೋಹ, ಮಹಾಮೋಹ, ತಾಮಿಸ್ರ ಮತ್ತು ಅಂಧತಾಮಿಸ್ರವೆಂಬ ಐದು ಗ್ರಂಥಿಗಳಿಂದ ಕೂಡಿದ ಅವಿದ್ಯೆಯು ಪ್ರಾದುರ್ಭವಿಸಿತು.

ಪಂಚಧಾವಸ್ಥಿತಃ ಸರ್ಗೋ ಧ್ಯಾಯತಃ ಸೋಽಭಿಮಾನಿನಃ ।
ಸಂವೃತಸ್ತಮಸಾ ಚೈವ ಬೀಜಕುಂಭವದಾವೃತಃ ॥ ೩ ॥

ಬಹಿರಂತಶ್ಚಾಪ್ರಕಾಶಃ ಸ್ತಬ್ಧೋ ನಿಃಸಂಗ ಏವ ಚ ।
ಮುಖ್ಯಾ ನಗಾ ಇತಿ ಪ್ರೋಕ್ತಾ ಮುಖ್ಯಸರ್ಗಸ್ತು ಸ ಸ್ಮೃತಃ ॥ ೪ ॥

ತಂ ದೃಷ್ಟ್ವಾಽಸಾಧಕಂ ಸರ್ಗಮಮನ್ಯದಪರಂ ಪ್ರಭುಃ ।
ತಸ್ಯಾಭಿಧ್ಯಾಯತಃ ಸರ್ಗಂ ತಿರ್ಯಕ್‌ಸ್ರೋತೋಽಭ್ಯವರ್ತತ ॥ ೫ ॥

ಯಸ್ಮಾತ್ತಿರ್ಯಕ್‌ಪ್ರವೃತ್ತಃ ಸ ತಿರ್ಯಕ್‌ಸ್ರೋತಸ್ತತಃ ಸ್ಮೃತಃ ।
ಪಶ್ವಾದಯಸ್ತೇ ವಿಖ್ಯಾತಾ ಉತ್ಪಥಗ್ರಾಹಿಣೋ ದ್ವಿಜಾಃ ॥ ೬ ॥

---

೩. ಸೃಷ್ಟಿಯ ಅಭಿಮಾನದಿಂದ ಧ್ಯಾನಾಸಕ್ತನಾದ ಆ ಪರಮಾತ್ಮನ ಸರ್ಗವು ಐದು ಬಗೆಯಾಗಿ ನಿಂತಿತು ಮತ್ತು ತಮಸ್ಸಿನಿಂದ ಆವರಿಸಲ್ಪಟ್ಟು ಕುಂಭದಲ್ಲಿ ಅಡಗಿದ ಬೀಜದಂತೆ ಅಪ್ರಕಾಶವಾಯಿತು.

೪. ಮತ್ತು ಕುಂಭಬೀಜದಂತೆ ಬಹಿರ್ಭಾಗ-ಅಂತರ್ಭಾಗಗಳಲ್ಲಿ ಅಪ್ರಕಾಶ ಪೂರ್ಣವೂ ಸ್ತಬ್ಧವೂ ನಿಃಸಂಗವೂ ಆಯಿತು. ಆಗ ಅವು ಮುಖ್ಯವಾದ ಪರ್ವತ ರೂಪಗಳಾದುವು. ಅದು ಮುಖ್ಯವಾದ ಸರ್ಗವೆಂದು ಸ್ಮರಿಸಲ್ಪಟ್ಟಿದೆ.

೫. ಆಗ ಆ ಸೃಷ್ಟಿಯನ್ನು ಅಸಂಪೂರ್ಣವೆನ್ನಾಗಿ ಕಂಡು ಪ್ರಭುವು ಮತ್ತೊಂದು ಸೃಷ್ಟಿಯನ್ನು ಚಿಂತಿಸಿದನು. ಹಾಗೆ ಸೃಷ್ಟಿಯನ್ನು ಧ್ಯಾನಿಸುತ್ತಿರುವ ಪರಮಾತ್ಮನಿಂದ ತಿರ್ಯಕ್ ಸ್ರೋತೋರೂಪವಾದ ಸೃಷ್ಟಿಯು ಉಂಟಾಯಿತು.

೬. ಆ ಸೃಷ್ಟಿಯು ಪೃಥಿವಿಯಲ್ಲಿ ತಿರ್ಯಗ್ಗತಿಯುಳ್ಳದ್ದಾದ್ದರಿಂದ ತಿರ್ಯಕ್ ಸ್ರೋತಸ್ಸರ್ಗವೆಂದು ಸ್ಮರಿಸಲ್ಪಟ್ಟಿದೆ. ದ್ವಿಜರೆ ! ಆ ಸೃಷ್ಟಿಯ ವ್ಯಕ್ತಿಗಳು ಉನ್ಮಾರ್ಗ ವನ್ನು ಹಿಡಿದು ಪಶ್ವಾದಿಸರ್ಗವೆಂದು ಖ್ಯಾತಿಹೊಂದಿವೆ.

ತಮಪ್ಯಸಾಧಕಂ ಜ್ಞಾತ್ವಾ ಸರ್ಗಮನ್ಯಂ ಸಸರ್ಜ ಹ ।
ಊರ್ಧ್ವಸ್ರೋತ ಇತಿ ಪ್ರೋಕ್ತೋ ದೇವಸರ್ಗಸ್ತು ಸಾತ್ತ್ವಿಕಃ ॥ ೭ ॥

ತೇ ಸುಖಪ್ರೀತಿಬಹುಲಾ ಬಹಿರಂತಸ್ತ್ವನಾವೃತಾಃ ।
ಪ್ರಕಾಶಾ ಬಹಿರಂತಶ್ಚ ಸ್ವಭಾವಾದ್ದೇವಸಂಜ್ಞಕಾಃ ॥ ೮ ॥

ತತೋಽಭಿಧ್ಯಾಯತಸ್ತಸ್ಯ ಸತ್ಯಾಭಿಧ್ಯಾಯಿನಸ್ತದಾ ।
ಪ್ರಾದುರಾಸೀತ್ತದಾವ್ಯಕ್ತಾದರ್ವಾಕ್ ಸ್ರೋತಸ್ತು ಸಾಧಕಃ ॥ ೯ ॥

ತತ್ರ ಪ್ರಕಾಶಬಹುಲಾಸ್ತಮೋದ್ರಿಕ್ತಾ ರಜೋಽಧಿಕಾಃ ।
ದುಃಖೋತ್ಕಟಾಃ ಸತ್ತ್ವಯುತಾ ಮನುಷ್ಯಾಃ ಪರಿಕೀರ್ತಿತಾಃ ॥ ೧೦ ॥

---

೭. ಸೃಷ್ಟಿಕರ್ತನು ಆ ಸೃಷ್ಟಿಯನ್ನು ಅಸಂಪೂರ್ಣವೆಂದು ತಿಳಿದು ಮತ್ತೊಂದು ಸೃಷ್ಟಿಯನ್ನು ರಚಿಸಿದನು. ಸತ್ತ್ವಗುಣ ಪರಿಪೂರ್ಣವಾದ ಆ ದೇವ ಸರ್ಗವು ಊರ್ಧ್ವಸ್ರೋತವೆಂದು ಹೇಳಲ್ಪಟ್ಟಿದೆ.

೮. ಆ ಸೃಷ್ಟಿಯ ವ್ಯಕ್ತಿಗಳು ಸುಖ ಪ್ರೀತಿಗಳಿಂದ ಪರಿಪೂರ್ಣವಾಗಿ, ಬಹಿರ್ಭಾಗ, ಅಂತರ್ಭಾಗಗಳಲ್ಲಿ ಆವರಣವಿಲ್ಲದೆ ಆ ಎಲ್ಲ ಭಾಗಗಳಲ್ಲಿ ಸ್ವಾಭಾವಿಕ ವಾಗಿಯೇ ಪ್ರಕಾಶಮಯರಾಗಿ ದೇವ ಎಂಬ ಸಂಕೇತವನ್ನು ಹೊಂದಿದರು.

೯. ತರುವಾಯ ಸೃಷ್ಟಿಧ್ಯಾನಮಾಡುವ ಮತ್ತು ಸತ್ಯಸಂಕಲ್ಪನಾದ ಆ ಪರಮಾತ್ಮನಿಂದ ಮತ್ತೊಂದು ಸೃಷ್ಟಿಯು ಆವಿರ್ಭಾವ ಹೊಂದಿತು. ಅವ್ಯಕ್ತ ತತ್ತ್ವ ಮೂಲಕವಾಗಿ ಆವಿರ್ಭವಿಸಿದ ಅರ್ವಾಕ್ ಸೃಷ್ಟಿಯು ಸಂಪೂರ್ಣವಾಯಿತು.

೧೦. ಆ ಸೃಷ್ಟಿವರ್ಗವು ಬಹುಲವಾದ ಪ್ರಕಾಶವುಳ್ಳ, ಉದ್ರೇಕಗೊಂಡ ತಮೋಗುಣವುಳ್ಳ, ಅಧಿಕರಜೋಗುಣದಿಂದ ಕೂಡಿದ, ಉತ್ಕಟವಾದ ದುಃಖದಿಂದ ಕೂಡಿದ ಮತ್ತು ಸತ್ತ್ವಗುಣಸಂಪರ್ಕವುಳ್ಳ ಮನುಷ್ಯರೆಂದು ಕೀರ್ತಿಸಲ್ಪಟ್ಟಿದೆ.

ತಂ ದೃಷ್ಟ್ವಾ ಚಾಪರಂ ಸರ್ಗಮಮನ್ಯದ್ಭಗವಾನಜಃ ।
ತಸ್ಯಾಭಿಧ್ಯಾಯತಃ ಸರ್ಗಂ ಸರ್ಗೋ ಭೂತಾದಿಕೋಽಭವತ್ ॥ ೧೧ ॥

ತೇ ಪರಿಗ್ರಹಿಣಃ ಸರ್ವೇ ಸಂವಿಭಾಗರತಾಃ ಪುನಃ ।
ಖಾದಿನಶ್ಚಾಪ್ಯಶಾಲಾಶ್ಚ ಭೂತಾದ್ಯಾಃ ಪರಿಕೀರ್ತಿತಾಃ ॥ ೧೨ ॥

ಇತ್ಯೇತೇ ಪಂಚ ಕಥಿತಾಃ ಸರ್ಗಾ ವೈ ದ್ವಿಜಪುಂಗವಾಃ ।
ಪ್ರಥಮೋ ಮಹತಃ ಸರ್ಗೋ ವಿಜ್ಞೇಯೋ ಬ್ರಹ್ಮಣಸ್ತು ಸಃ ॥ ೧೩ ॥

ತನ್ಮಾತ್ರಾಣಾಂ ದ್ವಿತೀಯಸ್ತು ಭೂತಸರ್ಗೋ ಹಿ ಸಂಸ್ಮೃತಃ ।
ವೈಕಾರಿಕಸ್ತೃತೀಯಸ್ತು ಸರ್ಗ ಐಂದ್ರಿಯಕಃ ಸ್ಮೃತಃ ॥ ೧೪ ॥

---

೧೧. ಆ ಮತ್ತೊಂದು ಸೃಷ್ಟಿಯನ್ನು ನೋಡಿ ಭಗವಂತನಾದ ಪರಮಾತ್ಮನು ಮತ್ತೆ ಸೃಷ್ಟಿಯಲ್ಲಿ ಉನ್ಮುಖನಾಗಿ ಭಾವಿಸಿದನು. ಸರ್ಗಚಿಂತೆಯಿಂದ ಧ್ಯಾನಿಸುವ ಪರಮಾತ್ಮನಿಂದ ಭೂತಾದಿ ಸರ್ಗವು ಉಂಟಾಯಿತು.

೧೨. ಆ ಭೂತಾದಿಗಳು ಅನೇಕ ಪರಿಗ್ರಹವುಳ್ಳವರೂ, ದ್ರವ್ಯ ಸಂವಿಭಾಗದಲ್ಲಿ ಆಸಕ್ತರೂ, ಆಹಾರವನ್ನು ಭುಂಜಿಸುವವರೂ ಮತ್ತು ವಾಸಗೃಹವಿಲ್ಲದವರೂ ಆಗಿ ಕೀರ್ತನಮಾಡಲ್ಪಟ್ಟಿರುವರು.

೧೩. ದ್ವಿಜೋತ್ತಮರೆ ! ಈ ರೀತಿಯಾಗಿ ಈ ಐದು ಸರ್ಗಗಳು ಹೇಳಲ್ಪಟ್ಟಿವೆ. ಮಹತ್ತತ್ತ್ವದ ಸರ್ಗವು ಬ್ರಹ್ಮನಿಂದ ಆದ ಮೊದಲನೆಯ ಸರ್ಗವೆಂದು ತಿಳಿಯಬೇಕಾದ್ದು.

೧೪. ಭೂತತನ್ಮಾತ್ರಗಳ ಸೃಷ್ಟಿಯು ದ್ವಿತೀಯವು. ಅದು ಭೂತಸೃಷ್ಟಿಯೆಂದು ಸ್ಮರಿಸಲ್ಪಟ್ಟಿದೆ. ಇಂದ್ರಿಯ ಸಂಬಂಧವಾದ ಸೃಷ್ಟಿಯು ಮೂರನೆಯ ಸರ್ಗವು. ಅದು ವೈಕಾರಿಕವೆಂದು ಕರೆಯಲ್ಪಟ್ಟಿದೆ.

ಇತ್ಯೇಷ ಪ್ರಾಕೃತಃ ಸರ್ಗಃ ಸಂಭೂತೋಽ ಬುದ್ಧಿಪೂರ್ವಕಃ ।
ಮುಖ್ಯಸರ್ಗಶ್ಚತುರ್ಥಸ್ತು ಮುಖ್ಯಾ ವೈ ಸ್ಥಾವರಾಃ ಸ್ಮೃತಾಃ ॥ ೧೫ ॥

ತಿರ್ಯಕ್‌ಸ್ರೋತಸ್ತು ಯಃ ಪ್ರೋಕ್ತಃ ತಿರ್ಯಗ್ಯೋನ್ಯಃ ಸಮಾಶ್ರಿತಃ
ತಥೋರ್ಧ್ವಸ್ರೋತಸಾಂ ಷಷ್ಠೋ ದೇವಸರ್ಗಸ್ತು ಸ ಸ್ಮೃತಃ ॥ ೧೬ ॥

ತತೋಽರ್ವಾಕ್‌ಸ್ರೋತಸಾಂ ಸರ್ಗಃ ಸಪ್ತಮಃ ಸ ತು ಮಾನುಷಃ ।
ಅಷ್ಟಮೋ ಭೌತಿಕಃ ಸರ್ಗೋ ಭೂತಾದೀನಾಂ ಪ್ರಕೀರ್ತಿತಃ ॥ ೧೭ ॥

ನವಮಶ್ಚೈವ ಕೌಮಾರಃ ಪ್ರಾಕೃತಾ ವೈಕೃತಸ್ತ್ವಿಮೇ ।
ಪ್ರಾಕೃತಾಸ್ತು ತ್ರಯಃ ಪೂರ್ವೇ ಸರ್ಗಾಸ್ತೇಽ ಬುದ್ಧಿಪೂರ್ವಕಾಃ ॥೧೮॥

---

೧೫. ಹೀಗೆ ಅಬುದ್ಧಿಪೂರ್ವಕವಾದ ಈ ಪ್ರಾಕೃತ ಸರ್ಗವು ಜನಿಸಿತು. ಮುಖ್ಯಸರ್ಗವು ನಾಲ್ಕನೆಯ ಸರ್ಗವು, ಇಲ್ಲಿ ಸ್ಥಾವರ ಜಾತಿಯು ಮುಖ್ಯವೆಂದು ಸ್ಮರಿಸಲ್ಪಟ್ಟಿದೆ.

೧೬. ಹಿಂದೆ ಹೇಳಲ್ಪಟ್ಟ ತಿರ್ಯಕ್ಸ್ರೋತೋವ್ಯಕ್ತಿಗಳ ಸರ್ಗವು ಐದನೆಯ ತೈರ್ಯಗ್ಯೋನವೆಂಬ ಸರ್ಗವು, ಹಾಗೆ ಊರ್ಧ್ವಸ್ರೋತಸ್ಸುಗಳ ಆರನೆಯ ಸೃಷ್ಟಿಯು ದೇವಸರ್ಗವೆಂದು ಸ್ಮರಿಸಲ್ಪಟ್ಟಿದೆ.

೧೭. ತರುವಾಯ ಉಂಟಾಗುವ ಅರ್ವಾಕ್ ಸ್ರೋತಸ್ಸುಗಳಾದ ಮನುಷ್ಯರ ಸೃಷ್ಟಿಯು ಏಳನೆಯ ಸರ್ಗವು. ಅದು ಮಾನುಷ ಸರ್ಗವೆಂದು ಗಣಿಸಲ್ಪಟ್ಟಿದೆ. ಭೂತಾದಿಗಳ ಅಷ್ಟಮಸರ್ಗವು ಭೌತಿಕವೆಂದು ಕೀರ್ತಿಸಲ್ಪಟ್ಟಿದೆ.

೧೮. ಕೌಮಾರವೆಂಬ ಸರ್ಗವು ಒಂಭತ್ತನೆಯ ಸರ್ಗವು. ಹೀಗೆ ಈ ಸರ್ಗಗಳು ಪ್ರಾಕೃತ, ಮತ್ತು ವೈಕೃತವೆಂದು ದ್ವಿವಿಧಗಳಾಗಿವೆ. ಇವುಗಳಲ್ಲಿ ಮೊದಲನೆಯ ಮೂರು ಸರ್ಗಗಳು ಅಬುದ್ಧಿಪೂರ್ವಕವಾದ ಪ್ರಾಕೃತಸರ್ಗಗಳು.

ಬುದ್ಧಿಪೂರ್ವಂ ಪ್ರವರ್ತಂತೇ ಮುಖ್ಯಾದ್ಯಾ ಮುನಿಪುಂಗವಾಃ ।
ಅಗ್ರೇ ಸಸರ್ಜ ವೈ ಬ್ರಹ್ಮಾ ಮಾನಸಾನಾತ್ಮನಃ ಸಮಾನ್ ॥ ೧೯ ॥

ಸನಕಂ ಸನಾತನಂ ಚೈವ ತಥೈವ ಚ ಸನಂದನಮ್ ।
ಕ್ರತುಂ ಸನತ್ಕುಮಾರಂ ಚ ಪೂರ್ವಮೇವ ಪ್ರಜಾಪತಿಃ ॥ ೨೦ ॥

ಪಂಚೈತೇ ಯೋಗಿನೋ ವಿಪ್ರಾಃ ಪರಂ ವೈರಾಗ್ಯಮಾಶ್ರಿತಾಃ ।
ಈಶ್ವರಾಸಕ್ತಮನಸೋ ನ ಸೃಷ್ಟೌ ದಧಿರೇ ಮತಿಮ್ ॥ ೨೧ ॥

ತೇಷ್ವೇವಂ ನಿರಪೇಕ್ಷೇಷು ಲೋಕಸೃಷ್ಟೌ ಪ್ರಜಾಪತಿಃ ।
ಮುಮೋಹ ಮಾಯಯಾ ಸದ್ಯೋ ಮಾಯಿನಃ ಪರಮೇಷ್ಠಿನಃ ॥೨೨॥

ಸಂಬೋಧಯಾಮಾಸ ಚ ತಂ ಜಗನ್ಮಾಯೋ ಮಹಾಮುನಿಃ ।
ನಾರಾಯಣೋ ಮಹಾಯೋಗೀ ಯೋಗಿಚಿತ್ತಾನುರಂಜನಃ ॥ ೨೩ ॥

---

೧೯. ಮುನಿಪುಂಗವರೆ! ಮುಖ್ಯ ಮೊದಲಾದ ಮುಂದಿನ ಸರ್ಗಗಳು ಬುದ್ಧಿ ಪೂರ್ವಕವಾಗಿ ಪ್ರವರ್ತಿಸುತ್ತವೆ. ಬ್ರಹ್ಮನು ಆದಿಯಲ್ಲಿ ತನಗೆ ಸಮಾನರಾದ ಮಾನಸಪುತ್ರರನ್ನು ಸೃಷ್ಟಿಸಿದನು.

೨೦. ಪ್ರಜಾಪತಿಯು ಸನಕ, ಸನಾತನ, ಸನಂದನ, ಕ್ರತು ಮತ್ತು ಸನತ್ಕು ಮಾರ ಎಂಬ ಸಂಜ್ಞಾಂಕಿತರಾದ ಮಾನಸ ಪುತ್ರರನ್ನು ಸೃಜಿಸಿದನು.

೨೧. ಯೋಗಿಗಳಾದ ಈ ಐದು ಮಂದಿ ವಿಪ್ರರು ಪರಮವೈರಾಗ್ಯವನ್ನು ಹೊಂದಿದವರಾಗಿ ಈಶ್ವರನಲ್ಲಿ ನಿರಂತರವಾಗಿ ಆಸಕ್ತವಾದ ಚಿತ್ತವುಳ್ಳವರಾಗಿ ಸೃಷ್ಟಿ ವ್ಯಾಪಾರದಲ್ಲಿ ಮನಸ್ಸನ್ನು ಇಡಲಿಲ್ಲ.

೨೨. ಆ ಮಾನಸಪುತ್ರರು ಹೀಗೆ ಲೋಕಸೃಷ್ಟಿಯಲ್ಲಿ ನಿರಪೇಕ್ಷರಾಗಲಾಗಿ ಪ್ರಜಾಪತಿಯು ಮಾಯಾವಿಯಾದ ಪರಮಾತ್ಮನ ಮಾಯೆಯಿಂದ ಕೂಡಲೆ ಮೋಹಗೊಂಡನು.

೨೩. ಜಗದ್ರೂಪವಾದ ಮಾಯಾಸಹಿತನೂ, ಮಹಾಮನನಶಕ್ತನೂ, ಮಹಾ ಯೋಗಿಯೂ ಮತ್ತು ಯೋಗಿಗಳ ಚಿತ್ತವನ್ನು ರಂಜನಮಾಡುವವನೂ ಆದ ನಾರಾಯಣನು ಪ್ರಬೋಧನವನ್ನು ಉಂಟುಮಾಡಿದನು.

ಬೋಧಿತಸ್ತೇನ ವಿಶ್ವಾತ್ಮಾ ತತಾಪ ಪರಮಂ ತಪಃ ।
ಸ ತಪ್ಯಮಾನೋ ಭಗವಾನ್ ನ ಕಿಂ ಚಿತ್ಪ್ರತ್ಯಪಗ್ಯತ ॥ ೨೪ ॥

ತತೋ ದೀರ್ಘೇಣ ಕಾಲೇನ ದುಃಖಾತ್ಕ್ರೋಧೋಽಭ್ಯಜಾಯತ।
ಕ್ರೋಧಾವಿಷ್ಟಸ್ಯ ನೇತ್ರಾಭ್ಯಾಂ ಪ್ರಾಪತನ್ನಶ್ರುಬಿಂದವಃ ॥ ೨೫ ॥

ಭ್ರುಕುಟೀಕುಟಿಲಾತ್ತಸ್ಯ ಲಲಾಟಾತ್ಪರಮೇಷ್ಠಿನಃ।
ಸಮುತ್ಪನ್ನೋ ಮಹಾದೇವಃ ಶರಣ್ಯೋ ನೀಲಲೋಹಿತಃ ॥ ೨೬ ॥

ಸ ಏವ ಭಗವಾನೀಶಸ್ತೇಜೋರಾಶಿಃ ಸನಾತನಃ ।
ಯಂ ಪ್ರಪಶ್ಯಂತಿ ವಿದ್ವಾಂಸಃ ಸ್ವಾತ್ಮಸ್ಥಂ ಪರಮೇಶ್ವರಮ್ ॥ ೨೭ ॥

ಓಂಕಾರಂ ಸಮನುಸ್ಮೃತ್ಯ ಪ್ರಣಮ್ಯ ಚ ಕೃತಾಂಜಲಿಃ ।
ತಮಾಹ ಭಗವಾನ್ ಬ್ರಹ್ಮಾ ಸೃಜೇಮಾ ವಿವಿಧಾಃ ಪ್ರಜಾಃ ॥ ೨೮ ॥

---

೨೪. ನಾರಾಯಣನಿಂದ ಬೋಧಿಸಲ್ಪಟ್ಟ ವಿಶ್ವಾತ್ಮನಾದ ಬ್ರಹ್ಮದೇವನು ಉತ್ತಮವಾದ ತಪವನ್ನು ಆಚರಿಸಿದನು. ತಪಸ್ಸನ್ನು ಆಚರಿಸುತ್ತಿದ್ದ ಆ ಭಗವಂತ ನಿಗೆ ಏನೊಂದು ವಸ್ತುವೂ ಸ್ಫುರಿಸಲಿಲ್ಲ.

೨೫. ಅನಂತರದಲ್ಲಿ ಹೀಗೆಯೇ ಅತಿದೀರ್ಘಕಾಲಕಳೆದು ದುಃಖದಿಂದ ಕ್ರೋಧವು ಉಂಟಾಯಿತು. ಕ್ರೋಧಾವಿಷ್ಟನಾದ ಆ ಬ್ರಹ್ಮನ ನೇತ್ರಗಳಿಂದ ಕಣ್ಣೀರಿನ ಬಿಂದುಗಳು ಕೆಳಕ್ಕೆ ಬಿದ್ದುವು.

೨೬. ಆಗ ಪರಮೇಷ್ಠಿಯು ಹುಬ್ಬುಗಂಟಿನಿಂದ ಭೀಷಣವಾದ ಲಲಾಟದಿಂದ ನೀಲಲೋಹಿತರೂಪಿಯಾದ, ಸಕಲಲೋಕರಕ್ಷಕನಾದ, ಮಹಾದೇವನು ಜನಿಸಿದನು.

೨೭. ತೇಜೋರಾಶಿಯೂ, ಅನಾದಿಯೂ ಮತ್ತು ಭಗವಂತನೂ ಆದ ಶಿವನೇ ಆ ಮಹಾದೇವನು, ಜ್ಞಾನಿಗಳು ಆ ಮಹಾದೇವನನ್ನು ಸ್ವಮಾನಸದಲ್ಲಿ ವಾಸಮಾಡುವ ಪರಮೇಶ್ವರನನ್ನಾಗಿ ಸಾಕ್ಷಾತ್ಕರಿಸುವರು.

೨೮. ಆಗ ಬ್ರಹ್ಮನು ಓಂಕಾರವನ್ನು ಸ್ಮರಿಸಿ ಮತ್ತು ಅಂಜಲಿಯನ್ನು ಕಟ್ಟಿಕೊಂಡು ನಮಸ್ಕಾರಮಾಡಿ ಈ ವಿವಿಧ ಪ್ರಜೆಗಳನ್ನು ಸೃಷ್ಟಿಮಾಡು ಎಂದು ಆ ಮಹಾದೇವನಿಗೆ ಆದೇಶಮಾಡಿದನು.

ನಿಶಮ್ಯ ಭಗವದ್ವಾಕ್ಯಂ ಶಂಕರೋ ಧರ್ಮವಾಹನಃ ।
ಆತ್ಮನಾ ಸದೃಶಾನ್ ರುದ್ರಾನ್ ಸಸರ್ಜ ಮನಸಾ ಶಿವಃ ।
ಕಪರ್ದಿನೋ ನಿರಾತಂಕಾಂಸ್ತ್ರಿನೇತ್ರಾನ್ನೀಲಲೋಹಿತಾನ್ ॥ ೨೯ ॥

ತಂ ಪ್ರಾಹ ಭಗವಾನ್ ಬ್ರಹ್ಮಾ ಜನ್ಮಮೃತ್ಯುಯುತಾಃ ಪ್ರಜಾಃ ।
ಸೃಜೇತಿ ಸೋಽಬ್ರವೀದೀಶೋ ನಾಹಂ ಮೃತ್ಯುಜರಾನ್ವಿತಾಃ ॥ ೩೦ ॥

ಪ್ರಜಾಃ ಸ್ರಕ್ಷ್ಯೇ ಜಗನ್ನಾಥ ಸೃಜ ತ್ವಮಶುಭಾಃ ಪ್ರಜಾಃ ।
ನಿವಾರ್ಯ ಸ ತದಾ ರುದ್ರಂ ಸಸರ್ಜ ಕಮಲೋದ್ಭವಃ ॥ ೩೧ ॥

ಸ್ಥಾನಾಭಿಮಾನಿನಃ ಸರ್ವಾನ್ ಗದತಸ್ತಾನ್ನಿಬೋಧತ ।
ಅಪೋಽಗ್ನಿರಂತರಿಕ್ಷಂ ಚ ದ್ಯೌರ್ವಾಯುಃ ಪೃಥಿವೀ ತಥಾ ॥ ೩೨ ॥

---

೧೯. ಧರ್ಮವಾಹಕನೂ ಶಂಕರನೂ ಆದ ಶಿವನು ಭಗವಂತನಾದ ಬ್ರಹ್ಮನ ವಚನವನ್ನು ಕೇಳಿ ತನಗೆ ಸದೃಶರಾಗಿಯೂ, ಜಟಾಜೂಟವುಳ್ಳವರಾಗಿಯೂ, ನಿರಾತಂಕರಾಗಿಯೂ, ನೇತ್ರತ್ರಯಾಲಂಕೃತರಾಗಿಯೂ ಮತ್ತು ನೀಲಲೋಹಿತ ರಾಗಿಯೂ ಇರುವರುದ್ರರನ್ನು ಮನಸ್ಸಿನಿಂದ ಸೃಷ್ಟಿಮಾಡಿದನು.

೩೦. ಭಗವಂತನಾದ ಬ್ರಹ್ಮದೇವನು ಶಂಕರನನ್ನು ಕುರಿತು ಜನ್ಮ-ಮರಣ ಗಳಿಂದ ಕೂಡಿದ ಪ್ರಜೆಗಳನ್ನು ಸೃಷ್ಟಿಮಾಡು ಎಂದು ಹೇಳಿದನು ಆದರೆ ಈಶ್ವರನು ಜನ್ಮ-ಮರಣಗಳಿಂದ ಕೂಡಿದ ಪ್ರಜಾಸೃಷ್ಟಿ ಮಾಡಲು ಒಪ್ಪಿಕೊಳ್ಳಲಿಲ್ಲ.

೩೧. ಜಗನ್ನಾಥನೆ ! ಅಂತಹ ಪ್ರಜೆಗಳನ್ನು ನಾನು ಸೃಷ್ಟಿಮಾಡಲಾರೆ. ಅಂತಹ ಅಶುಭರೂಪರಾದ ಪ್ರಜೆಗಳನ್ನು ನೀನು ಸೃಷ್ಟಿಮಾಡು, ಕಮಲದಲ್ಲಿ ಹುಟ್ಟಿದ ಬ್ರಹ್ಮನು ಆಗ ರುದ್ರನನ್ನು ತಡೆದು ತಾನು ಸೃಷ್ಟಿಯನ್ನು ಮಾಡಿದನು.

೩೨. ಆಯಾಯ ಸ್ಥಾನವಿಶೇಷದ ಅಭಿಮಾನವುಳ್ಳ ಎಲ್ಲ ಪ್ರಜೆಗಳನ್ನು ಸೃಷ್ಟಿಸಿದನು. ಅವರ ನಿರ್ದೇಶವನ್ನು ಹೇಳುವೆನು, ಕೇಳಿರಿ–ಜಲ, ಅಗ್ನಿ, ಅಂತರಿಕ್ಷ ದ್ಯುಲೋಕ, ವಾಯು ಮತ್ತು ಪೃಥಿವಿ ದೇವತೆಗಳು ಆ ಸ್ಥಾನಾಭಿಮಾನಿಗಳಲ್ಲಿ ಸೇರಿರುವರು.

ನದ್ಯಃ ಸಮುದ್ರಾಃ ಶೈಲಾಶ್ಚ ವೃಕ್ಷಾ ವೀರುಧ ಏವ ಚ ।
ಲವಾಃ ಕಾಷ್ಠಾಃ ಕಲಾಶ್ಚೈವ ಮುಹೂರ್ತಾ ದಿವಸಾಃ ಕ್ಷಪಾಃ ॥ ೩೩ ॥

ಅರ್ಧಮಾಸಾಶ್ಚ ಮಾಸಾಶ್ಚ ಅಯನಾಬ್ದಯುಗಾದಯಃ ।
ಸ್ಥಾನಾಭಿಮಾನಿನಃ ಸೃಷ್ಟ್ವಾ ಸಾಧಕಾನಸೃಜತ್ಪುನಃ ॥ ೩೪ ॥

ಮರೀಚಿಭೃಗ್ವಂಗಿರಸಃ ಪುಲಸ್ತ್ಯಂ ಪುಲಹಂ ಕ್ರತುಮ್ ।
ದಕ್ಷಮತ್ರಿಂ ವಸಿಷ್ಠಂ ಚ ಧರ್ಮಂ ಸಂಕಲ್ಪಮೇವ ಚ ॥ ೩೫ ॥

ಪ್ರಾಣಾದ್ಬ್ರಹ್ಮಾಸೃಜದ್ದಕ್ಷಂ ಚಕ್ಷುರ್ಭ್ಯಾಂ ಚ ಮರೀಚಿನಮ್ ।
ಶಿರಸೋಽಂಗಿರಸಂ ದೇವೋ ಹೃದಯಾದ್ಭೃಗುಮೇವ ಚ ॥ ೩೬ ॥

ನೇತ್ರಾಭ್ಯಾಮತ್ರಿನಾಮಾನಂ ಧರ್ಮಂ ಚ ವ್ಯವಸಾಯತಃ ।
ಸಂಕಲ್ಪಂ ಚೈವ ಸಂಕಲ್ಪಾತ್ಸರ್ವಲೋಕಪಿತಾಮಹಃ ॥ ೩೭ ॥

---

೩೩. ಮತ್ತು ನದೀ, ಸಮುದ್ರ, ಪರ್ವತ, ವೃಕ್ಷ, ಲತಾ, ಲವ, ಕಾಷ್ಠಾ, ಕಲಾ ಮುಹೂರ್ತ, ದಿನ ಮತ್ತು ರಾತ್ರಿ ಅಭಿಮಾನಿ ದೇವತೆಗಳು ಆ ಸೃಷ್ಟಿಯಲ್ಲಿ ಅಂತರ್ಗತರೆಂದು ತಿಳಿಯಬೇಕು.

೩೪. ಹಾಗು ಅರ್ಧಮಾಸ, ಮಾಸ, ಅಯನ, ವತ್ಸರ ಮತ್ತು ಯುಗ ಮುಂತಾದ ಸ್ಥಾನಾಭಿಮಾನಿಗಳನ್ನು ಸೃಷ್ಟಿಮಾಡಿ ಮತ್ತೆ ಸಾಧಕರನ್ನು ನಿರ್ಮಿಸಿದನು.

೩೫. ಮರೀಚಿ, ಭೃಗು, ಅಂಗಿರ, ಪುಲಸ್ತ್ಯ, ಪುಲಹ, ಕ್ರತು, ದಕ್ಷ, ಅತ್ರಿ, ವಸಿಷ್ಠ, ಧರ್ಮ ಮತ್ತು ಸಂಕಲ್ಪ ಎಂಬ ಸಾಧಕ ಪುರುಷರನ್ನು ಸೃಷ್ಟಿಮಾಡಿದನು.

೩೬. ಬ್ರಹ್ಮದೇವನು ಪ್ರಾಣದಿಂದ ದಕ್ಷ ಬ್ರಹ್ಮನನ್ನು, ಎರಡು ಕಣ್ಣುಗಳಿಂದ ಮರೀಚಿ ಪ್ರಜಾಪತಿಯನ್ನು, ಶಿರಸ್ಸಿನಿಂದ ಅಂಗಿರ ಮುನಿಯನ್ನು ಮತ್ತು ಹೃದಯ ದಿಂದ ಭೃಗುಮಹರ್ಷಿಯನ್ನು ಸೃಷ್ಟಿಮಾಡಿದನು.

೩೭. ಸಕಲಲೋಕಗಳಿಗೆ ಪಿತಾಮಹನಾದ ಬ್ರಹ್ಮನು ತನ್ನ ಸಂಕಲ್ಪದಿಂದ ಸಂಕಲ್ಪ ಪ್ರಜಾಪತಿಯನ್ನು, ಕಣ್ಣುಗಳಿಂದ ಅತ್ರಿ ಎಂಬ ನಾಮಾಂಕಿತನಾದ ಮುನಿಯನ್ನು ಮತ್ತುನಿಶ್ಚಯ ರೂಪವಾದ ಮನಸ್ಸಿನ ವೃತ್ತಿಯಿಂದ ಧರ್ಮಪ್ರಜಾಪತಿ ಯನ್ನು ಸೃಷ್ಟಿಮಾಡಿದನು.

ಪುಲಸ್ತ್ಯಂ ಚ ತಥೋದಾನಾದ್ವ್ಯಾನಾಚ್ಚ ಪುಲಹಂ ಮುನಿಮ್ ।
ಅಪಾನಾತ್ ಕ್ರತುಮವ್ಯಗ್ರಂ ಸಮಾನಾಚ್ಚ ವಸಿಷ್ಠಕಮ್ ॥ ೩೮ ॥

ಇತ್ಯೇತೇ ಬ್ರಹ್ಮಣಾ ಸೃಷ್ಟಾಃ ಸಾಧಕಾ ಗೃಹಮೇಧಿನಃ ।
ಆಸ್ಥಾಯ ಮಾನವಂ ರೂಪಂ ಧರ್ಮಸ್ತೈಃ ಸಂಪ್ರವರ್ತಿತಃ ॥ ೩೯ ॥

ತತೋ ದೇವಾಸುರಪಿತೄನ್ ಮನುಷ್ಯಾಂಶ್ಚ ಚತುಷ್ಟಯಮ್ ।
ಸಿಸೃಕ್ಷುರ್ಭಗವಾನೀಶಃ ಸ್ವಮಾತ್ಮಾನಮಯೋಜಯತ್ ॥ ೪೦ ॥

ಯುಕ್ತಾತ್ಮನಸ್ತಮೋಮಾತ್ರಾ ಹ್ಯುದ್ರಿಕ್ತಾಭೂತ್ಪ್ರಜಾಪತೇಃ ।
ತತೋಽಸ್ಯ ಜಘನಾತ್ಪೂರ್ವಮಸುರಾ ಜಜ್ಞಿರೇ ಸುತಾಃ ॥ ೪೧ ॥

---

೩೮. ಹಾಗೆ ಉದಾನ ವಾಯುವಿನಿಂದ ಪುಲಸ್ತ್ಯಮುನಿಯನ್ನು, ವ್ಯಾನವಾಯುವಿನಿಂದ ಪುಲಹಮಹರ್ಷಿಯನ್ನು, ಅಪಾನವಾಯುವಿನಿಂದ ವ್ಯಾಕುಲತೆಯಿಲ್ಲದ ಕ್ರತು ಎಂಬ ಋಷಿಯನ್ನು ಮತ್ತು ಸಮಾನವಾಯುವಿನಿಂದ ವಸಿಷ್ಠಮುನಿಯನ್ನು ಸೃಷ್ಟಿಸಿದನು.

೩೯. ಈ ರೀತಿಯಾಗಿ ಬ್ರಹ್ಮನಿಂದ ತನ್ನ ಅವಯವಗಳಿಂದ ಸೃಷ್ಟಿಸಲ್ಪಟ್ಟ ಗೃಹಸ್ಥಧರ್ಮಗಳೂ ಸಾಧಕೋತ್ತಮರೂ ಆದ ಈ ಮಹರ್ಷಿಗಳು ಮಾನವನ ರೂಪವನ್ನು ಧರಿಸಿ ಸನಾತನ ಧರ್ಮವನ್ನು ಪ್ರಚಾರಗೊಳಿಸಿದರು.

೪೦. ತರುವಾಯ ದೇವತೆ ಅಸುರ ಪಿತೃ ಮತ್ತು ಮನುಷ್ಯರೆಂಬ ನಾಲ್ಕು ವಿಧದ ಪ್ರಜೆಗಳನ್ನು ಸೃಷ್ಟಿಸಬೇಕೆಂಬ ದೃಢವಾದ ಸಂಕಲ್ಪದಿಂದ ಕೂಡಿದ ಷಡ್ಗುಣಪೂರ್ಣನಾದ ಬ್ರಹ್ಮನು ತನ್ನ ಅಂತಃಕರಣವನ್ನು ಜ್ಞಾನಮಯವಾದ ಸಮಾಧಿಯಲ್ಲಿರಿಸಿದನು.

೪೧. ಹಾಗೆ ಸಮಾಧಿಯಲ್ಲಿದ್ದ ಅಂತಃಕರಣದಿಂದ ಕೂಡಿದ ಬ್ರಹ್ಮನ ತಮೋಗುಣದ ಅಂಶವು ಉದ್ರೇಕಗೊಂಡಿತು. ಆಗ ಆ ಬ್ರಹ್ಮದೇವನ ಜಘನಭಾಗದಿಂದ ಮೊದಲು ಅಸುರರು ಪುತ್ರರಾಗಿ ಜನಿಸಿದರು.

ಉತ್ಸಸರ್ಜಾಸುರಾನ್ ಸೃಷ್ಟ್ವಾ ತಾಂ ತನುಂ ಪುರುಷೋತ್ತಮಃ ।
ಸಾ ಚೋತ್ಸೃಷ್ಟಾ ತನುಸ್ತೇನ ಸದ್ಯೋ ರಾತ್ರಿರಜಾಯತ ॥ ೪೨ ॥

ಸಾ ತಮೋಬಹುಲಾ ಯಸ್ಮಾತ್ಪ್ರಜಾಸ್ತಸ್ಯಾಂ ಸ್ವಪಂತ್ಯತಃ ।
ಸತ್ತ್ವಮಾತ್ರಾತ್ಮಿಕಾಂ ದೇವಸ್ತನುಮನ್ಯಾಂ ಗೃಹೀತವಾನ್ ॥ ೪೩ ॥

ತತೋಽಸ್ಯ ಮುಖತೋ ದೇವಾ ದೀವ್ಯತಃ ಸಂಪ್ರಜಜ್ಞಿರೇ ।
ತ್ಯಕ್ತಾ ಸಾಪಿ ತನುಸ್ತೇನ ಸತ್ತ್ವಪ್ರಾಯಮಭೂದ್ದಿನಮ್ ॥ ೪೪ ॥

ತಸ್ಮಾದಹೋ ಧರ್ಮಯುಕ್ತಾ ದೇವತಾಃ ಸಮುಪಾಸತೇ ।
ಸತ್ತ್ವಮಾತ್ರಾತ್ಮಿಕಾಮೇವ ತತೋಽನ್ಯಾಂ ಜಗೃಹೇ ತನುಮ್ ॥ ೪೫ ॥

---

೪೨. ಹೀಗೆ ಪುರುಷೋತ್ತಮನೆನಿಸಿದ ಆ ಸರ್ವೇಶ್ವರನು ಅಸುರರನ್ನು ಸೃಷ್ಟಿ ಮಾಡಿದ ಬಳಿಕ ಆ ದೇಹವನ್ನು ಪರಿತ್ಯಾಗಮಾಡಿದನು. ಬ್ರಹ್ಮದೇವನಿಂದ ಬಿಡಲ್ಪಟ್ಟ ಆ ದೇಹವು ತತ್‌ಕ್ಷಣದಲ್ಲಿಯೇ ರಾತ್ರಿಯರೂಪವಾಗಿ ಪರಿಣಮಿಸಿತು.

೪೩. ಆ ರಾತ್ರಿಯು ತಮೋಗುಣ-ಅಂಧಕಾರದಿಂದ ಪೂರ್ಣವಾದುದರಿಂದ ಆ ರಾತ್ರಿಯಲ್ಲಿ ಸರ್ವಪ್ರಜೆಗಳೂ ನಿದ್ರಾಸುಖವನ್ನು ಅನುಭವಿಸುತ್ತಾರೆ. ತರುವಾಯ ಸರ್ವೇಶ್ವರನು ಸತ್ವಗುಣದಿಂದ ಕೂಡಿದ ಮತ್ತೊಂದು ವಿಗ್ರಹವನ್ನು ಸ್ವೀಕರಿಸಿದನು.

೪೪. ಆಗ ಪ್ರಕಾಶಮಯನಾಗಿರುವ ಆ ಬ್ರಹ್ಮನ ಮುಖದಿಂದ ದೇವತೆಗಳು ಜನಿಸಿದರು. ಆಗ ಆ ದೇಹವೂ ಬ್ರಹ್ಮನಿಂದ ಬಿಡಲ್ಪಟ್ಟದ್ದಾಗಿ ಉತ್ತಮವಾದ ಸತ್ವಗುಣಪೂರ್ಣವಾದ ದಿನರೂಪವಾಗಿ ಪರಿಣಮಿಸಿತು.

೪೫. ಆದುದರಿಂದ ಪ್ರಜೆಗಳು ಅಹಃಕಾಲದಲ್ಲಿ ವಿಶೇಷವಾಗಿ ಧರ್ಮದಲ್ಲಿ ಆಸಕ್ತರಾಗಿ ದೇವತೆಗಳನ್ನು ಸೇವಿಸುತ್ತಾರೆ. ಆಮೇಲೆ ಸತ್ವಗುಣದಿಂದಲೇ ಕೂಡಿದ ಮತ್ತೊಂದು ದೇಹವನ್ನು ಪರಮಾತ್ಮನು ಸ್ವೀಕರಿಸಿದನು.

ಪಿತೃವನ್ಮನ್ಯಮಾನಸ್ಯ ಪಿತರಃ ಸಂಪ್ರಜಜ್ಞಿರೇ ।
ಉತ್ಸಸರ್ಜ ಪಿತೄನ್ ಸೃಷ್ಟ್ವಾ ತತಸ್ತಾಮಪಿ ವಿಶ್ವದೃಕ್ ॥ ೪೬ ॥

ಸಾಪವಿದ್ಧಾ ತನುಸ್ತೇನ ಸದ್ಯಃ ಸಂಧ್ಯಾ ವ್ಯಜಾಯತ ।
ತಸ್ಮಾದಹರ್ದೇವತಾನಾಂ ರಾತ್ರಿಃ ಸ್ಯಾದ್ದೇವವಿದ್ವಿಷಾಮ್ ॥ ೪೭ ॥

ತಯೋರ್ಮಧ್ಯೇ ಪಿತ್ರ್ಯಾಣಾಂ ತು ಮೂರ್ತಿಃ ಸಂಧ್ಯಾ ಗರೀಯಸೀ ।
ತಸ್ಮಾದ್ದೇವಾಸುರಾಃ ಸರ್ವೇ ಮುನಯೋ ಮಾನವಾಸ್ತದಾ ॥ ೪೮ ॥

ಉಪಾಸತೇ ಸದಾಯುಕ್ತಾ ರಾತ್ರ್ಯಹ್ನೋರ್ಮಧ್ಯಮಾಂ ತನುಮ್ ।
ರಜೋಮಾತ್ರಾತ್ಮಿಕಾಂ ಬ್ರಹ್ಮಾ ತನುಮನ್ಯಾಂ ತತೋಽಸೃಜತ್॥ ೪೯ ॥

---

೪೬. ಆ ವಿಗ್ರಹದಲ್ಲಿ ಪಿತನೆಂಬ ಅಭಿಮಾನದಿಂದಕೂಡಿದ ಬ್ರಹ್ಮದೇವನ ಜ್ಞಾನದಿಂದ ಪಿತೃದೇವತೆಗಳು ಹುಟ್ಟಿದರು. ಸರ್ವಪ್ರಪಂಚವನ್ನು ಸಾಕ್ಷಾತ್ಕರಿಸುತ್ತಿದ್ದ ಬ್ರಹ್ಮನು ಪಿತೃಗಳನ್ನು ಸೃಷ್ಟಿಮಾಡಿ ಆ ದೇಹವನ್ನು ತ್ಯಜಿಸಿದನು.

೪೭. ಬ್ರಹ್ಮನಿಂದ ತ್ಯಜಿಸಲ್ಪಟ್ಟ ಆ ದೇಹವು ಕೂಡಲೇ ಸಂಧ್ಯಾಕಾಲದ ರೂಪವನ್ನು ತಾಳಿತು. ಈ ಕಾರಣದಿಂದ ದೇವತೆಗಳಿಗೆ ದಿನದ ಸಮಯವೂ ದೇವತೆಗಳಲ್ಲಿ ದ್ವೇಷಭಾವನೆಯುಳ್ಳ ಅಸುರರಿಗೆ ರಾತ್ರಿಕಾಲವೂ ಅಭಿಮಾನಕ್ಕೆ ಪಾತ್ರವಾಗಿದೆ.

೪೮. ಆ ಹಗಲು ಮತ್ತು ರಾತ್ರಿಗಳ ಮಧ್ಯೆದಲ್ಲಿರುವ ಸಂಧ್ಯಾಕಾಲವು ಪಿತೃದೇವತೆಗಳಿಗೆ ಪೂಜ್ಯವಾದ ಮೂರ್ತಿಯಾಗಿರುವುದು. ಆದುದರಿಂದ ದೇವತೆ, ಅಸುರ, ಮಹರ್ಷಿ, ಮತ್ತು ಮಾನವರೆಂಬ ಸಮಸ್ತ ಪ್ರಜೆಗಳಿಗೆ ಆ ರಾತ್ರಿ ಸಮಯವು ವಂದನೀಯವಾಗಿದೆ.

೪೯. ಆ ಪ್ರಜೆಗಳು ಸಂತತವಾಗಿ ಚಿತ್ತದ ಏಕಾಗ್ರತೆಯಿಂದ ಕೂಡಿ ರಾತ್ರಿ ಹಗಲುಗಳ ಮಧ್ಯಕಾಲದ ಮೂರ್ತಿಯನ್ನು ಉಪಾಸನಮಾಡುತ್ತಾರೆ. ಅನಂತರದಲ್ಲಿ ಬ್ರಹ್ಮನು ರಜೋಗುಣದ ಅಂಶಮಯವಾದ ಮತ್ತೊಂದು ದೇಹವನ್ನು ತಾನು ಕಲ್ಪಿಸಿಕೊಂಡನು.

ತತೋಽಸ್ಯ ಜಜ್ಞಿರೇ ಪುತ್ರಾ ಮನುಷ್ಯಾ ರಜಸಾ ವೃತಾಃ ।
ತಾಮಥಾಶು ಸ ತತ್ಯಾಜ ತನುಂ ಸದ್ಯಃ ಪ್ರಜಾಪತಿಃ ॥ ೫೦ ॥

ಜ್ಯೋತ್ಸ್ನಾ ಸಾ ಚಾಭವದ್ವಿಪ್ರಾಃ ಪ್ರಾಕ್‌ಸಂಧ್ಯಾ ಯಾಭಿಧೀಯತೇ ।
ತತಃ ಸ ಭಗವಾನ್ ಬ್ರಹ್ಮಾ ಸಂಪ್ರಾಪ್ಯ ದ್ವಿಜಪುಂಗವಾಃ ॥ ೫೧ ॥

ಮೂರ್ತಿಂ ತಮೋರಜಃಪ್ರಾಯಾಂ ಪುನರೇವಾಭ್ಯಪೂಜಯತ್ ।
ಅಂಧಕಾರೇ ಕ್ಷುಧಾವಿಷ್ಟಾ ರಾಕ್ಷಸಾಸ್ತಸ್ಯ ಜಜ್ಞಿರೇ ॥ ೫೨ ॥

ಪುತ್ರಾಸ್ತಮೋರಜಃಪ್ರಾಯಾ ಬಲಿನಸ್ತೇ ನಿಶಾಚರಾಃ ।
ಸರ್ಪಾ ಯಕ್ಷಾಸ್ತಥಾ ಭೂತಾ ಗಂಧರ್ವಾಃ ಸಂಪ್ರಜಜ್ಞಿರೇ ॥ ೫೩ ॥

---

೫೦. ಆದರಿಂದ ರಜೋಗುಣದಿಂದ ಕೂಡಿರುವ ಮಾನವರು ಬ್ರಹ್ಮದೇವನಿಗೆ ಪುತ್ರರಾಗಿ ಜನಿಸಿದರು. ಪ್ರಜಾಪಾಲಕನಾದ ಬ್ರಹ್ಮನು ರಜೋಗುಣಮಯವಾದ ಆ ದೇಹವನ್ನು ಆಗಲೇ ಬಿಟ್ಟನು.

೫೧. ವಿಪ್ರೋತ್ತಮರೇ ! ಬ್ರಹ್ಮದೇವನಿಂದ ಬಿಡಲ್ಪಟ್ಟ ಆ ದೇಹವು ಚಂದ್ರಿಕೆಯ ರೂಪವನ್ನು ಧರಿಸಿತು. ಅದೇ ಪೂರ್ವಸಂಧ್ಯಾರೂಪವಾಗಿ ಕರೆಯಲ್ಪಡುತ್ತಿದೆ. ಅದಾದ ಬಳಿಕ ಪೂಜ್ಯನಾದ ಬ್ರಹ್ಮದೇವನು ಮತ್ತೊಂದು ದೇಹವನ್ನು ಸ್ವೀಕರಿಸಿದನು.

೫೨. ಮತ್ತೆ ತಮೋಗುಣ-ರಜೋಗುಣಗಳ ಸಂಸರ್ಗವುಳ್ಳ ವಿಗ್ರಹವನ್ನು ಹೊಂದಿ ಮಾಡಿದ ಸೃಷ್ಟಿಯಿಂದ ಅಂಧಕಾರದಲ್ಲಿ ಹಸಿವಿನಿಂದ ಪೀಡಿತರಾದ ರಾಕ್ಷಸರೆಂಬ ಪ್ರಜೆಗಳು ಜನಿಸಿದರು.

೫೩. ತಮಸ್ಸು ಮತ್ತು ರಜೋಗುಣಗಳಿಂದ ಪೂರ್ಣರೂ ಬಲಿಷ್ಠರೂ ಆದ ರಾತ್ರಿಂಚರರು, ಸರ್ಪಗಳು, ಯಕ್ಷರು, ಭೂತಗಳು ಮತ್ತು ಗಂಧರ್ವರು ಮುಂತಾದ ಅನೇಕ ಬಗೆಯ ಪುತ್ರರು ಜನಿಸಿದರು.

ರಜಸ್ತಮೋಽಭ್ಯಾಮಾವಿಷ್ಟಾಂಸ್ತತೋಽನ್ಯಾನಸೃಜತ್ಪ್ರಭುಃ ।
ವಯಾಂಸಿ ವಯಸಃ ಸೃಷ್ಟ್ವಾ ಅವೀನ್ ವೈ ವಕ್ಷಸೋಽಸೃಜತ್॥ ೫೪ ॥

ಮುಖತೋಽಜಾನ್ ಸಸರ್ಜಾನ್ಯಾನುದರಾದ್ಗಾಶ್ಚ ನಿರ್ಮಮೇ ।
ಪದ್ಭ್ಯಾಂ ಚಾಶ್ವಾನ್ ಸಮಾತಂಗಾನ್ ರಾಸಭಾನ್ ಗವಯಾನ್ಮೃಗಾನ್

ಉಷ್ಟ್ರಾನಶ್ವತರಾಂಶ್ಚೈವ ಅರತ್ನೀಶ್ಚ ಪ್ರಜಾಪತಿಃ ।
ಓಷಧ್ಯಃ ಫಲಮೂಲಾನಿ ರೋಮಭ್ಯಸ್ತಸ್ಯ ಜಜ್ಞಿರೇ　　　　॥ ೫೬ ॥

ಗಾಯತ್ರಂ ಚ ಋಚಶ್ಚೈವ ತ್ರಿವೃತ್‌ಸ್ತೋಮಂ ರಥಂತರಮ್ ।
ಅಗ್ನಿಷ್ಟೋಮಂ ಚ ಯಜ್ಞಾನಾಂ ನಿರ್ಮಮೇ ಪ್ರಥಮಾನ್ಮುಖಾತ್ ॥

---

೫೪. ಮತ್ತು ಸರ್ವೇಶ್ವರನು ರಜೋಗುಣ ಮತ್ತು ತಮೋಗುಣಗಳಿಂದ ಕೂಡಿದ ಇತರ ಪ್ರಜೆಗಳನ್ನೆಲ್ಲಾ ಸೃಷ್ಟಿಸಿದನು. ಹಾಗು ತನ್ನ ವಯಸ್ಸಿನಿಂದ ಪಕ್ಷಿಗಳನ್ನೂ ವಕ್ಷಸ್ಥಳದಿಂದ ಕುರಿಗಳನ್ನೂ ಸೃಷ್ಟಿಮಾಡಿದನು.

೫೫. ಮತ್ತು ಮುಖದಿಂದ ಆಡುಗಳನ್ನೂ, ಉದರದಿಂದ ಗೋವುಗಳನ್ನೂ ಮತ್ತು ಕಾಲುಗಳಿಂದ ಆನೆ, ಕುದುರೆ, ಕತ್ತೆ, ಗವಯ ಮತ್ತು ಜಿಂಕೆ- ಎಂಬ ಅನೇಕ ಪ್ರಾಣಿಗಳನ್ನೂ ನಿರ್ಮಾಣಮಾಡಿದನು.

೫೬. ಪ್ರಜಾಪತಿಯು ತನ್ನ ಮುಷ್ಟಿಯಿಂದ ಒಂಟೆ, ಹೇಸರುಗತ್ತೆಗಳನ್ನು ಸೃಷ್ಟಿಮಾಡಿದನು. ಆ ಬ್ರಹ್ಮನ ರೋಮಗಳಿಂದ ಔಷಧಿ, ಸಸ್ಯ, ಫಲ, ಮೂಲಗಳು ಹುಟ್ಟಿದುವು.

೫೭. ಮತ್ತು ಋಕ್‌ಮಂತ್ರಗಳನ್ನೂ, ಗಾಯತ್ರೀ ಛಂದಸ್ಸನ್ನೂ, ರಥನ್‌ತರ ಸಾಮಗಳನ್ನೂ, ತ್ರಿವೃತ ಎಂಬ ಸ್ತೋತ್ರಮಾಡುವ ಋಕ್ ಮಂತ್ರಗಳ ಸಂಖ್ಯೆಯನ್ನೂ ಯಜ್ಞಗಳಲ್ಲಿ ಉತ್ತಮವಾದ ಅಗ್ನಿಷ್ಟೋಮ ಯಜ್ಞವನ್ನೂ ಮೊದಲನೆಯ ಮುಖದಿಂದ ನಿರ್ಮಿಸಿದನು.

ಯಜೂಂಷಿ ತ್ರೈಷ್ಟುಭಂ ಛಂದಃ ಸ್ತೋಮಂ ಪಂಚದಶಂ ತಥಾ ।
ಬೃಹತ್ಸಾಮ ತಥೋಕ್ಥಂ ಚ ದಕ್ಷಿಣಾದಸೃಜನ್ಮುಖಾತ್ ॥ ೫೮ ॥

ಸಾಮಾನಿ ಜಾಗತಂ ಛಂದಃ ಸ್ತೋಮಂ ಸಪ್ತದಶಂ ತಥಾ ।
ವೈರೂಪಮತಿರಾತ್ರಂ ಚ ಪಶ್ಚಿಮಾದಸೃಜನ್ಮುಖಾತ್ ॥ ೫೯ ॥

ಏಕವಿಂಶಮಥರ್ವಾಣಮಾಪ್ತೋರ್ಯಾಮಣಮೇವ ಚ ।
ಅನುಷ್ಟುಭಂ ಸವೈರಾಜಂ ಉತ್ತರಾದಸೃಜನ್ಮುಖಾತ್ ॥ ೬೦ ॥

ಉಚ್ಚಾವಚಾನಿ ಭೂತಾನಿ ಗಾತ್ರೇಭ್ಯಸ್ತಸ್ಯ ಜಜ್ಞಿರೇ ।
ಬ್ರಹ್ಮಣೋ ಹಿ ಪ್ರಜಾಸರ್ಗಂ ಸೃಜತಸ್ತು ಪ್ರಜಾಪತೇಃ ॥ ೬೧ ॥

---

೫೮. ಯಜುರ್ವೇದ, ತ್ರಿಷ್ಟುಪ ಛಂದಸ್ಸು, ಪಂಚದಶವೆಂಬ ಋಕ್ ಸಂಖ್ಯೆ, ಬೃಹತ್ ಎಂಬ ಸಾಮ ಮತ್ತು ಉಕ್ಥ ಸಂಸ್ಥೆಯ ಜ್ಯೋತಿಷ್ಟೋಮ ಯಾಗ ಇವುಗಳನ್ನು ದಕ್ಷಿಣದಿಕ್ಕಿನ ಮುಖದಿಂದ ಸೃಷ್ಟಿಮಾಡಿದನು.

೫೯. ಸಾಮವೇದ, ಜಗತೀ ಛಂದಸ್ಸು, ಸಪ್ತದಶವೆಂಬ ಸಂಖ್ಯೆ, ವೈರೂಪ ಸಾಮ ಮತ್ತು ಅತಿರಾತ್ರವೆಂಬ ಸಂಸ್ಥೆಯಿಂದ ಕೂಡಿದ ಜ್ಯೋತಿಷ್ಟೋಮಯಾಗ ಇವುಗಳನ್ನು ಬ್ರಹ್ಮನು ಪಶ್ಚಿಮದಿಕ್ಕಿನ ಮುಖದಿಂದ ನಿರ್ಮಾಣ ಮಾಡಿದನು.

೬೦. ಹಾಗೆ ಅಥರ್ವವೇದ, ಏಕವಿಂಶವೆಂಬ ಸಂಖ್ಯೆ, ಅಪ್ತೋರ್ಯಾಮ ಸಂಸ್ಥೆಯ ಜ್ಯೋತಿಷ್ಟೋಮಯಾಗ, ಅನುಷ್ಟುಪ ಛಂದಸ್ಸು ಮತ್ತು ವೈರಾಜ ಸಾಮಗಳನ್ನು ಉತ್ತರದ ಕಡೆಯ ಮುಖದಿಂದ ಸೃಜಿಸಿದನು.

೬೧. ಹೀಗೆ ಪ್ರಜೆಗಳ ಸೃಷ್ಟಿಕಾರ್ಯವನ್ನು ನಿರ್ವಹಿಸುತ್ತಿದ್ದ ಸೃಷ್ಟಿಕರ್ತನಾದ ಬ್ರಹ್ಮದೇವನ ಆಯಾಯ ಅವಯವಗಳಿಂದ ಅನೇಕಾನೇಕ ಪಂಗಡಗಳಿಂದ ಕೂಡಿದ ಪ್ರಾಣಿಗಳು ಜನಿಸಿದುವು.

ಯಕ್ಷಾನ್ ಪಿಶಾಚಾನ್ ಗಂಧರ್ವಾನ್ ತಥೈವಾಪ್ಸರಸಃ ಶುಭಾಃ ।
ಸೃಷ್ಟ್ವಾ ಚತುಷ್ಟಯಂ ಸರ್ಗಂ ದೇವರ್ಷಿಪಿತೃಮಾನುಷಮ್ ॥ ೬೨ ॥

ತತೋಽಸೃಜಚ್ಚ ಭೂತಾನಿ ಸ್ಥಾವರಾಣಿ ಚರಾಣಿ ಚ ।
ನರಕಿನ್ನರರಕ್ಷಾಂಸಿ ವಯಃಪಶುಮೃಗೋರಗಾನ್ ॥ ೬೩ ॥

ಅವ್ಯಯಂ ಚ ವ್ಯಯಂ ಚೈವ ದ್ವಯಂ ಸ್ಥಾವರಜಂಗಮಮ್ ।
ತೇಷಾಂ ಯೇ ಯಾನಿ ಕರ್ಮಾಣಿ ಪ್ರಾಕ್ ಸೃಷ್ಟೇಃ ಪ್ರತಿಪೇದಿರೇ ॥೬೪॥

ತಾನ್ಯೇವ ತೇ ಪ್ರಪದ್ಯಂತೇ ಸೃಜ್ಯಮಾನಾಃ ಪುನಃ ಪುನಃ ।
ಹಿಂಸ್ರಾಹಿಂಸ್ರೇ ಮೃದುಕ್ರೂರೇ ಧರ್ಮಾಧರ್ಮಾವೃತಾನೃತೇ ॥ ೬೫ ॥

---

೬೨. ಯಕ್ಷ, ಪಿಶಾಚ, ಗಂಧರ್ವ ಮತ್ತು ಅಪ್ಸರ ಸ್ತ್ರೀ ಎಂಬ ಮಂಗಳ ಕರವಾದ ಸೃಷ್ಟಿಯನ್ನು ನೆರವೇರಿಸಿದುದಲ್ಲದೆ ದೇವ-ಋಷಿ-ಪಿತೃ ಮತ್ತು ಮಾನುಷ ರೆಂಬ ನಾಲ್ಕುವಿಧ ಸೃಷ್ಟಿಯನ್ನು ರಚಿಸಿದನು.

೬೩. ಆಮೇಲೆ ಸ್ಥಾವರ ಮತ್ತು ಜಂಗಮ ಪ್ರಾಣಿಗಳನ್ನೂ ಮಾನವ ಕಿನ್ನರ ಮತ್ತು ರಾಕ್ಷಸರನ್ನೂ ಪಕ್ಷಿ, ಪಶು, ಮೃಗ ಮತ್ತು ಸರ್ಪಗಳನ್ನೂ, ಸೃಷ್ಟಿಮಾಡಿದನು.

೬೪. ಬ್ರಹ್ಮದೇವನಿಂದ ಸೃಷ್ಟಿಯಾದ ಸ್ಥಾವರ ಮತ್ತು ಜಂಗಮವೆಂಬ ಪ್ರಾಣಿವರ್ಗದಲ್ಲಿ ಬೇಗ ನಾಶವಾಗುವ ಶೀಲ ವುಳ್ಳದ್ದು ಮತ್ತು ನಾಶರಹಿತವಾದುದು ವ್ಯಯ ಮತ್ತು ಅವ್ಯಯವೆಂದು ಕರೆಯಲ್ಪಡುವುವು. ಅವುಗಳಲ್ಲಿ ಪ್ರತಿಯೊಂದು ಪ್ರಾಣಿಯೂ ಪೂರ್ವಜನ್ಮದಲ್ಲಿ ಕರ್ಮವಿಶೇಷವನ್ನು ಹೊಂದಿಕೊಂಡಿರುವುದು.

೬೫. ಮತ್ತೆ ಮತ್ತೆ ಸೃಷ್ಟಿಸಲ್ಪಡುವ ಆ ಪ್ರಾಣಿಗಳು ಹಿಂಸಾಮಯ, ಹಿಂಸಾ ರಹಿತ, ಮೃದು, ಕ್ರೂರ, ಧರ್ಮ, ಅಧರ್ಮ ಮತ್ತು ಸತ್ಯ ಅಥವಾ ಅನೃತ ರೂಪವಾದ ಪ್ರಾಚೀನ ಕರ್ಮಗಳನ್ನು ಮತ್ತೆ ಹೊಂದುವರು.

ತದ್ಭಾವಿತಾಃ ಪ್ರಪದ್ಯಂತೇ ತಸ್ಮಾತ್ತತ್ತಸ್ಯ ರೋಚತೇ ।
ಮಹಾಭೂತೇಷು ನಾನಾತ್ವಮಿಂದ್ರಿಯಾರ್ಥೇಷು ಮೂರ್ತಿಷು ॥ ೬೬ ॥

ವಿನಿಯೋಗಂ ಚ ಭೂತಾನಾಂ ಧಾತ್ಯೈವ ವ್ಯದಧಾತ್ ಸ್ವಯಮ್ ।
ನಾಮ ರೂಪಂ ಚ ಭೂತಾನಾಂ ಪ್ರಾಕೃತಾನಾಂ ಪ್ರಪಂಚನಮ್ ॥ ೬೭ ॥

ವೇದಶಬ್ದೇಭ್ಯ ಏವಾದೌ ನಿರ್ಮಮೇ ಸ ಮಹೇಶ್ವರಃ ।
ಆರ್ಷಾಣಿ ಚೈವ ನಾಮಾನಿ ಯಾಶ್ಚ ವೇದೇಷು ಸೃಷ್ಟಯಃ ॥ ೬೮ ॥

ಶರ್ವರ್ಯಂತೇ ಪ್ರಸೂತಾನಾಂ ತಾನ್ಯೇವೈಭ್ಯೋ ದದಾತ್ಯಜಃ ।
ಯಾವಂತಿ ಪ್ರತಿಲಿಂಗಾನಿ ನಾನಾರೂಪಾಣಿ ಪರ್ಯಯೇ ॥ ೬೯ ॥

---

೬೬. ಆ ಪ್ರಾಣಿಗಳು ಪೂರ್ವಕರ್ಮದ ವಾಸನಾಮಯರಾಗಿ ಉತ್ಪತ್ತಿಯನ್ನು ಹೊಂದುವುದರಿಂದ, ಆಯಾಯ ಸಂಸ್ಕಾರವನ್ನು ಅನುಸರಿಸಿ ಆಯಾಯ ಕರ್ಮವು ಆಯಾಯ ಪ್ರಾಣಿಗೆ ರುಚಿಸುತ್ತದೆ. ಹೀಗೆ ಮಹಾ ಭೂತಗಳಲ್ಲಿ ಅನೇಕ ಪಂಗಡಗಳೂ ಇಂದ್ರಿಯ ವಿಷಯಗಳಲ್ಲಿ ಅನೇಕ ಸಂಖ್ಯೆಯೂ ಬ್ರಹ್ಮ ಸೃಷ್ಟಿಯಿಂದ ಬಂದಿರುವುದು.

೬೭. ಪ್ರಾಣಿಯು ತನ್ನ ಕರ್ಮಾನುಸಾರವಾಗಿ ಆಯಾಯ ವಿಷಯಾನುಭವವನ್ನು ಹೊಂದಬೇಕೆಂದು ಬ್ರಹ್ಮನು ತಾನಾಗಿ ನಿಯಮಿಸಿರುವನು. ಹೀಗೆ ಭೂತಗಳ ನಾಮ ಮತ್ತು ರೂಪಗಳನ್ನೂ ಪ್ರಕೃತಿವಶ್ಯವಾದ ಅವುಗಳ ಪ್ರಸಾರವನ್ನೂ ಬ್ರಹ್ಮನು ಮಾಡಿರುವನು.

೬೮. ಸರ್ವೇಶ್ವರನಾದ ಆ ಬ್ರಹ್ಮದೇವನು ಮಹರ್ಷಿಗಳ ದರ್ಶನ ವಿಶೇಷ ಸ್ಮರಣಗಳನ್ನೂ ವೇದಗತವಾದ ಅನೇಕ ಸೃಷ್ಟಿಗಳನ್ನೂ ವೇದ ಶಬ್ದಗಳ ಮೂಲಕವಾಗಿ ನಿರ್ಮಾಣಮಾಡಿದನು.

೬೯. ಜನ್ಮ-ಮರಣ ರಹಿತನಾದ ಬ್ರಹ್ಮನು ಕಲ್ಪಾಂತದಲ್ಲಿ ಲಯಹೊಂದಿ ಪುನಃ ಸೃಷ್ಟಿಯಲ್ಲಿ ಹುಟ್ಟಿದ ಆಯಾಯ ಭೂತಗಳಿಗೆ ಅಸಾಧಾರಣವಾದ ನಾನಾ ರೂಪವಾದ ನಾಮರೂಪಗಳನ್ನು ಕೊಡುವನು.

**ದೃಶ್ಯಂತೇ ತಾನಿ ತಾನ್ಯೇವ ತಥಾ ಭಾವಾ ಯುಗಾದಿಷು　　॥ ೭೦ ॥**

**ಇತಿ ಶ್ರೀ ಕೂರ್ಮಪುರಾಣೇ ಸಪ್ತಮೋಽಧ್ಯಾಯಃ**

---

೭೦. ಹಿಂದಿನ ಕಲ್ಪದಲ್ಲಿ ಯಾವ ಪ್ರಾಣಿಗೆ ಯಾವ ವಿಧದ ನಾಮರೂಪ ಮತ್ತು ಭಾವನೆಗಳು ಇದ್ದುವೋ ಈ ಕಲ್ಪದ ಆದಿಯಲ್ಲಿ ಜನಿಸಿದ ಪ್ರಾಣಿಗಳಿಗೆ ಅದೇ ನಾಮರೂಪ ಭಾವನೆಗಳು ಕಾಣುತ್ತವೆ.

ಕೂರ್ಮಪುರಾಣದಲ್ಲಿ ಏಳನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಕೂರ್ಮಪುರಾಣಂ

## ಅಷ್ಟಮೋಽಧ್ಯಾಯಃ

### (ಮುಖ್ಯಾದಿಸರ್ಗಕಥನಮ್)

**ಕೂರ್ಮ ಉವಾಚ :—**

**ಏವಂ ಭೂತಾನಿ ಸೃಷ್ಟಾನಿ ಸ್ಥಾವರಾಣಿ ಚರಾಣಿ ಚ ।**
**ಯದಾಸ್ಯ ತಾಃ ಪ್ರಜಾಃ ಸೃಷ್ಟಾ ನ ವ್ಯವರ್ಧಂತ ಧೀಮತಃ ॥ ೧ ॥**

**ತಮೋಮಾತ್ರಾವೃತೋ ಬ್ರಹ್ಮಾ ತದಾಽಶೋಚತ ದುಃಖಿತಃ ।**
**ತತಃ ಸ ವಿದಧೇ ಬುದ್ಧಿಮರ್ಥನಿಶ್ಚಯಗಾಮಿನೀಮ್ ॥ ೨ ॥**

**ಅಥಾತ್ಮನಿ ಸಮದ್ರಾಕ್ಷೀತ್ತಮೋಮಾತ್ರಾಂ ನಿಯಾಮಿಕಾಮ್ ।**
**ರಜಃ ಸತ್ತ್ವಂ ಚ ಸಂವೃತ್ತಂ ವರ್ತಮಾನಂ ಸ್ವಧರ್ಮತಃ ॥ ೩ ॥**

---

## ಎಂಟನೆಯ ಅಧ್ಯಾಯವು.

ಕೂರ್ಮಮೂರ್ತಿ ಇಂತೆಂದನು:—

೧. ಈರೀತಿಯಾಗಿ ಸ್ಥಾವರ-ಜಂಗಮ ಭೂತಗಳು ಬ್ರಹ್ಮದೇವನಿಂದ ಸೃಷ್ಟಿಸಲ್ಪಟ್ಟಿದ್ದರೂ ಸೃಷ್ಟಿಯನ್ನು ಹೆಚ್ಚಿಸಬೇಕೆಂದಿರುವ ಬ್ರಹ್ಮದೇವನ ಸಂಕಲ್ಪವನ್ನನುಸರಿಸಿ ಆ ಪ್ರಜೆಗಳು ವೃದ್ಧಿಯನ್ನು ಹೊಂದಲಿಲ್ಲ.

೨. ಆಗ ಬ್ರಹ್ಮನು ತಮೋಗುಣದಿಂದ ಹೆಚ್ಚು ಆವರಿಸಲ್ಪಟ್ಟವನಾಗಿ ದುಃಖದಿಂದ ಶೋಕಪಟ್ಟನು. ಕಡೆಯಲ್ಲಿ ಆ ಬ್ರಹ್ಮನು ಕರ್ತವ್ಯಾರ್ಥದ ನಿರ್ಣಯವನ್ನು ಸೂಚಿಸುವ ಒಂದು ಬುದ್ಧಿವೃತ್ತಿಯನ್ನು ಹೊಂದಿದನು.

೩. ಅನಂತರದಲ್ಲಿ ತನ್ನ ಚಿತ್ತದಲ್ಲಿ ರಜೋಗುಣ ತಮೋಗುಣಗಳನ್ನು ತಮ್ಮ ತಮ್ಮ ವ್ಯಾಪಾರದಿಂದ ನಿವೃತ್ತಿಹೊಂದುವಂತೆ ಅವುಗಳನ್ನು ಆವರಿಸಿ ತಮೋಗುಣವು ಉದ್ರೇಕದಿಂದ ತನ್ನ ಕಾರ್ಯಕ್ಕೆ ನಿಯಾಮಕವಾಗಿರುವುದನ್ನು ಕಂಡನು.

ತಮಸ್ತು ವ್ಯನುದತ್ಪಶ್ಚಾದ್ರಜಃಸತ್ತ್ವೇನ ಸಂಯುತಃ ।
ತತ್ತಮಃ ಪ್ರತಿನುನ್ನಂ ವೈ ಮಿಥುನಂ ಸಮಜಾಯತ ॥ ೪ ॥

ಅಧರ್ಮಾಚರಣೋ ವಿಪ್ರಾ ಹಿಂಸಾ ಚಾಶುಭಲಕ್ಷಣಾ ।
ಸ್ವಾಂ ತನುಂ ಸ ತತೋ ಬ್ರಹ್ಮಾ ತಾಮಪೋಹತ ಭಾಸ್ವರಾಮ್ ॥ ೫ ॥

ದ್ವಿಧಾಕರೋತ್ಪುನರ್ದೇಹಮರ್ಧೇನ ಪುರುಷೋಽಭವತ್ ।
ಅರ್ಧೇನ ನಾರೀ ಪುರುಷೋ ವಿರಾಜಮಸೃಜತ್ಪ್ರಭುಃ ॥ ೬ ॥

ನಾರೀಂ ಚ ಶತರೂಪಾಖ್ಯಾಂ ಯೋಗಿನೀಂ ಸಸೃಜೇ ಶುಭಾಮ್ ।
ಸಾ ದಿವಂ ಪೃಥಿವೀಂ ಚೈವ ಮಹಿಮ್ನಾ ವ್ಯಾಪ್ಯ ಸಂಸ್ಥಿತಾ ॥ ೭ ॥

---

೪. ಆಗ ರಜೋಗುಣ ಸತ್ವಗುಣಗಳ ಆಧಿಕ್ಯದಿಂದ ಕೂಡಿದ ಬ್ರಹ್ಮನು ತಮೋಗುಣವನ್ನು ಹಿಮ್ಮೆಟ್ಟಿಸಿದನು. ಹಿಂದಕ್ಕೆ ಒತ್ತಲ್ಪಟ್ಟ ಆ ತಮೋಗುಣವು ಯುಗ್ಮರೂಪವನ್ನು ತಾಳಿತು.

೫. ವಿಪ್ರರೇ ! ಅಧರ್ಮಾಚರಣೆಯನ್ನು ಪ್ರೇರೇಪಿಸುವ ಹಿಂಸಾಕರ್ಮವು ಅಮಂಗಳರೂಪವಾದುದು. ತರುವಾಯ ಆ ಬ್ರಹ್ಮನು ಪ್ರಕಾಶಿಸುತ್ತಿರುವ ತನ್ನ ಆ ದೇಹವನ್ನು ಪ್ರವೇಶಿಸಿದನು.

೬. ಮೆತ್ತು ಆ ದೇಹವನ್ನು ಮತ್ತೆ ಎರಡಾಗಿ ಭಾಗಿಸಿ ಒಂದು ಅರ್ಧಭಾಗದಿಂದ ಪುರುಷಸ್ವರೂಪನೂ ಮತ್ತೊಂದು ಅರ್ಧಭಾಗದಿಂದ ಸ್ತ್ರೀ ರೂಪನೂ ಆಗಿ ಪೂರ್ಣನೂ ಸರ್ವೇಶ್ವರನೂ ಆದ ಬ್ರಹ್ಮನು ವಿರಾಟ ಪುರುಷನನ್ನು ಸೃಷ್ಟಿಮಾಡಿದನು.

೭. ಮತ್ತು ದ್ಯಾವಾಪೃಥಿವಿಗಳನ್ನು ವ್ಯಾಪಿಸಿ ಅತ್ಯಂತ ಮಹಿಮೆಯಿಂದ ಕೂಡಿರುವಳೂ ಶತರೂಪಾ ಎಂಬ ನಾಮಾಂಕಿತಳೂ ಯೋಗಾಭ್ಯಾಸಶೀಲಳೂ ಮತ್ತು ಕಲ್ಯಾಣಪೂರ್ಣಳೂ ಆದ ನಾರಿಯನ್ನು ಸೃಷ್ಟಿಮಾಡಿದನು.

ಯೋಗೈಶ್ವರ್ಯಬಲೋಪೇತಜ್ಞಾನವಿಜ್ಞಾನಸಂಯುತಾ ।
ಯೋಽಭವತ್ಪುರುಷಾತ್ಪುತ್ರೋ ವಿರಾಡವ್ಯಕ್ತಜನ್ಮನಃ ॥ ೮ ॥

ಸ್ವಾಯಂಭುವೋ ಮನುರ್ದೇವಃ ಸೋಽಭವತ್ಪುರುಷೋ ಮುನಿಃ ।
ಸಾ ದೇವೀ ಶತರೂಪಾಖ್ಯಾ ತಪಃ ಕೃತ್ವಾ ಸುದುಶ್ಚರಮ್ ॥ ೯ ॥

ಭರ್ತಾರಂ ದೀಪ್ತಯಶಸಂ ಮನುಮೇವಾನ್ವಪದ್ಯತ ।
ತಸ್ಮಾಚ್ಚ ಶತರೂಪಾ ಸಾ ಪುತ್ರದ್ವಯಮಸೂಯತ ॥ ೧೦ ॥

ಪ್ರಿಯವ್ರತೋತ್ತಾನಪಾದೌ ಕನ್ಯಾದ್ವಯಮನುತ್ತಮಮ್ ।
ತಯೋಃ ಪ್ರಸೂತಿಂ ದಕ್ಷಾಯ ಮನುಃ ಕನ್ಯಾಂ ದದೌ ಪುನಃ ॥ ೧೧॥

---

೮. ಮತ್ತು ಆ ನಾರಿಯು ಯೋಗಮಹಿಮೆ ಈಶ್ವರತ್ವ ಶಕ್ತಿ ಜ್ಞಾನ ವಿಜ್ಞಾನ ಗಳಿಂದ ಕೂಡಿದವಳಾಗಿದ್ದಳು. ಅವ್ಯಕ್ತರೂಪದಿಂದ ಜನಿಸಿದ ಬ್ರಹ್ಮದೇವನಿಂದ ಮೊದಲು ವಿರಾಟ್ ಪುರುಷನು ಪುತ್ರನಾಗಿ ಜನಿಸಿದನು.

೯. ಅವನು ಸ್ವಯಂಭುದೇವನ ಪುತ್ರನಾಗಿ ಜನಿಸಿ ಮನು ಎಂಬ ದೇವಋಷಿ ಯಾದನು. ಆತನನ್ನು ಪತಿಯನ್ನಾಗಿ ಹೊಂದಲು ಶತರೂಪಾ ಎಂಬ ದೇವಿಯು ಅತ್ಯಂತ ಕಠಿಣವಾದ ತಪವನ್ನು ಆಚರಿಸಿದಳು.

೧೦. ಶತರೂಪಾದೇವಿಯು ತಪೋಬಲದಿಂದ ಪ್ರಖ್ಯಾತವಾದ ಕೀರ್ತಿಪ್ರಪಂಚ ವುಳ್ಳ ಆ ಮನುವನ್ನು ಪತಿಯನ್ನಾಗಿ ಹೊಂದಿದಳು. ಆ ಪತಿಯಿಂದ ಶತರೂಪಾ ದೇವಿಯು ಇಬ್ಬರು ಪುತ್ರರನ್ನು ಪ್ರಸವಿಸಿದಳು.

೧೧. ಆ ಪುತ್ರರು ಪ್ರಿಯವ್ರತ ಮತ್ತು ಉತ್ತಾನಪಾದ ಎಂಬ ನಾಮಾಂ ಕಿತರಾಗಿದ್ದರು. ಅವರಿಗೆ ನಿರುಪಮರಾದ ಇಬ್ಬರು ಕನ್ಯೆಯರು ಸಹೋದರಿಯರಾಗಿ ಜನಿಸಿದರು. ಮನುರಾಜನು ಅವರಿಬ್ಬರಲ್ಲಿ ಪ್ರಸೂತಿ ಎಂಬ ಕನ್ಯೆಯನ್ನು ದಕ್ಷಬ್ರಹ್ಮನಿಗೆ ಕೊಟ್ಟನು.

ಪ್ರಜಾಪತಿರಥಾಕೂತಿಂ ಮಾನಸೋ ಜಗೃಹೇ ರುಚಿಃ ।
ಆಕೂತ್ಯಾ ಮಿಥುನಂ ಜಜ್ಞೇ ಮಾನಸಸ್ಯ ರುಚೇಃ ಶುಭಮ್ ॥ ೧೨ ॥

ಯಜ್ಞಸ್ಯ ದಕ್ಷಿಣಾಂ ಚೈವ ಯಾಭ್ಯಾಂ ಸಂವರ್ಧಿತಂ ಜಗತ್ ।
ಯಜ್ಞಸ್ಯ ದಕ್ಷಿಣಾಯಾಂ ಚ ಯಾಮಾ ದ್ವಾದಶ ಜಜ್ಞಿರೇ ॥ ೧೩ ॥

ಯಾಮಾ ಇತಿ ಸಮಾಖ್ಯಾತಾ ದೇವಾಃ ಸ್ವಾಯಂಭುವೇಽಂತರೇ ।
ಪ್ರಸೂತ್ಯಾಂ ಚ ತಥಾ ದಕ್ಷಶ್ಚತಸ್ರೋ ವಿಂಶತಿಂ ತಥಾ ॥ ೧೪ ॥

ಸಸರ್ಜ ಕನ್ಯಾನಾಮಾನಿ ತಾಸಾಂ ಸಮ್ಯಕ್ ನಿಬೋಧತ ।
ಶ್ರದ್ಧಾ ಲಕ್ಷ್ಮೀರ್ಧೃತಿಸ್ತುಷ್ಟಿಃ ಪುಷ್ಟಿರ್ಮೇಧಾ ಕ್ರಿಯಾ ತಥಾ ॥ ೧೫ ॥

---

೧೨. ಬ್ರಹ್ಮಮಾನಸಪುತ್ರನಾದ ರುಚಿ ಎಂಬ ಪ್ರಜಾಪತಿಯು ಆಕೂತಿ ಎಂಬುವಳನ್ನು ಪರಿಗ್ರಹಿಸಿದನು. ಆ ಆಕೂತಿಯಲ್ಲಿ ಮಾನಸಪುತ್ರನಾದ ರುಚಿ ಪ್ರಜಾಪತಿಗೆ ಮಂಗಳಮೂರ್ತಿಯಾದ ಒಂದು ಯುಗ್ಮವು ಜನಿಸಿತು.

೧೩. ಯಜ್ಞಮೂರ್ತಿಗೆ ದಕ್ಷಿಣಾದೇವಿಯು ಪತ್ನಿಯಾಗಿ ಅವರಿಂದ ಜಗತ್ತು ವೃದ್ಧಿಗೊಳಿಸಲ್ಪಟ್ಟಿತು. ಯಜ್ಞಮೂರ್ತಿಗೆ ದಕ್ಷಿಣಾದೇವಿಯಲ್ಲಿ ಹನ್ನೆರಡು ಮಂದಿ ಪುತ್ರರು ಜನಿಸಿದರು.

೧೪. ಅವರು ಯಾಮ ಎಂಬ ನಾಮಾಂಕನದಿಂದ ಪ್ರಸಿದ್ಧರಾಗಿ ಸ್ವಾಯಂಭುವ ಮನ್ವಂತರದಲ್ಲಿ ದೇವತೆಗಳಾಗಿದ್ದರು. ದಕ್ಷ ಪ್ರಜಾಪತಿಯು ಹಾಗೆ ಇಪ್ಪತ್ತು ನಾಲ್ಕು ಮಂದಿ ಕನ್ನಿಕೆಯರನ್ನು ಹೊಂದಿದನು.

೧೫. ದಕ್ಷಬ್ರಹ್ಮನಿಂದ ಹುಟ್ಟಿದ ಇಪ್ಪತ್ತನಾಲ್ಕು ಮಂದಿ ಕನ್ಯೆಯರ ಹೆಸರನ್ನು ತಿಳಿಯಿರಿ. ಶ್ರದ್ಧಾ, ಲಕ್ಷ್ಮೀ, ಧೃತಿ, ತುಷ್ಟಿ, ಪುಷ್ಟಿ, ಮೇಧಾ ಮತ್ತು ಕ್ರಿಯಾ ಎಂದು ಮೊದಲನೆಯ ಏಳುಮಂದಿಯ ಹೆಸರು.

ಬುದ್ಧಿರ್ಲಜ್ಜಾ ವಪುಃ ಶಾಂತಿಃ ಸಿದ್ಧಿಃ ಕೀರ್ತಿಸ್ತ್ರಯೋದಶೀ ।
ಪತ್ನ್ಯರ್ಥಂ ಪ್ರತಿಜಗ್ರಾಹ ಧರ್ಮೋ ದಾಕ್ಷಾಯಣೀಃ ಶುಭಾಃ ॥ ೧೬ ॥

ತಾಭ್ಯಃ ಶಿಷ್ಟಾ ಯವೀಯಸ್ಯ ಏಕಾದಶ ಸುಲೋಚನಾಃ ।
ಖ್ಯಾತಿಃ ಸತ್ಯಾಥ ಸಂಭೂತಿಃ ಸ್ಮೃತಿಃ ಪ್ರೀತಿಃ ಕ್ಷಮಾ ತಥಾ ॥ ೧೭ ॥

ಸಂತತಿಶ್ಚಾನಸೂಯಾ ಚ ಊರ್ಜಾ ಸ್ವಾಹಾ ಸ್ವಧಾ ತಥಾ ।
ಭೃಗುರ್ಭವೋ ಮರೀಚಿಶ್ಚ ತಥಾ ಚೈವಾಂಗಿರಾ ಮುನಿಃ ॥ ೧೮ ॥

ಪುಲಸ್ತ್ಯಃ ಪುಲಹಶ್ಚೈವ ಕ್ರತುಃ ಪರಮಧರ್ಮವಿತ್ ।
ಅತ್ರಿರ್ವಸಿಷ್ಠೋ ವಹ್ನಿಶ್ಚ ಪಿತರಶ್ಚ ಯಥಾಕ್ರಮಮ್ ॥ ೧೯ ॥

---

೧೬. ಬುದ್ಧಿ, ಲಜ್ಜಾ, ವಪು, ಶಾಂತಿ, ಸಿದ್ಧಿ ಮತ್ತು ಕೀರ್ತಿಯಿಂದ ಕೂಡಿ ಹದಿಮೂರುಮಂದಿ ಮಂಗಳ ಮಯರಾದ ದಕ್ಷಬ್ರಹ್ಮನ ಕನ್ಯೆಯರನ್ನು ಧರ್ಮ ಪ್ರಜಾಪತಿಯು ಪತ್ನೀರೂಪವಾಗಿ ಪರಿಗ್ರಹಿಸಿದನು.

೧೭. ಈ ಹದಿಮೂರು ಮಂದಿಗಿಂತ ಕಿರಿಯರಾದ ಮಿಕ್ಕ ಹನ್ನೊಂದು ಮಂದಿ ಸುಂದರಿಯರಾದ ದಕ್ಷ ಕನ್ಯೆಯರ ಹೆಸರನ್ನು ಕೇಳಿರಿ. ಖ್ಯಾತಿ, ಸತಿ, ಸಂಭೂತಿ, ಸ್ಮೃತಿ, ಪ್ರೀತಿ ಮತ್ತು ಕ್ಷಮಾ ಎಂದು ಕೆಲವರ ಹೆಸರು.

೧೮. ಮತ್ತು ಸಂತತಿ, ಅನಸೂಯಾ, ಊರ್ಜಾ, ಸ್ವಾಹಾ ಸ್ವಧಾ, ಎಂದು ನಾಮಾಂಕಿತರಾಗಿದ್ದರು. ಭೃಗು, ಭವ, ಮರೀಚಿ ಮತ್ತು ಅಂಗಿರಮುನಿಗಳು ಕ್ರಮವಾಗಿ ಮೊದಲನೆಯ ನಾಲ್ಕು ಕನ್ಯೆಯರನ್ನು ಪರಿಗ್ರಹಿಸಿದರು.

೧೯. ಪುಲಸ್ತ್ಯ, ಪುಲಹ, ಧಾರ್ಮಿಕೋತ್ತಮನಾದ ಕ್ರತು, ಅತ್ರಿ, ವಸಿಷ್ಠ, ವಹ್ನಿ ಮತ್ತು ಪಿತೃದೇವತೆಗಳು ಕ್ರಮವಾಗಿ ಮಿಕ್ಕ ಕನ್ಯೆಯರನ್ನು ಪಾಣಿಗ್ರಹಣ ಮಾಡಿದರು.

ಖ್ಯಾತ್ಯಾದ್ಯಾ ಜಗೃಹುಃ ಕನ್ಯಾ ಮುನಯೋ ಜ್ಞಾನಸತ್ತಮಾಃ ।
ಶ್ರದ್ಧಾಯಾ ಆತ್ಮಜಃ ಕಾಮೋ ದರ್ಪೋ ಲಕ್ಷ್ಮೀಸುತಃ ಸ್ಮೃತಃ ॥ ೨೦ ॥

ಧೃತ್ಯಾಸ್ತು ನಿಯಮಃ ಪುತ್ರಸ್ತುಷ್ಟ್ಯಾಃ ಸಂತೋಷ ಉಚ್ಯತೇ ।
ಪುಷ್ಟ್ಯಾ ಲಾಭಃ ಸುತಶ್ಚಾಪಿ ಮೇಧಾಪುತ್ರಃ ಶಮಸ್ತಥಾ ॥ ೨೧ ॥

ಕ್ರಿಯಾಯಾಶ್ಚಾಭವತ್ಪುತ್ರೋ ದಂಡಶ್ಚ ನಯ ಏವ ಚ ।
ಬುದ್ಧ್ಯಾ ಬೋಧಃ ಸುತಸ್ತದ್ವದಪ್ರಮಾದೋऽಪ್ಯಜಾಯತ ॥ ೨೨ ॥

ಲಜ್ಜಾಯಾ ವಿನಯಃ ಪುತ್ರೋ ವಪುಷೋ ವ್ಯವಸಾಯಕಃ ।
ಕ್ಷೇಮಃ ಶಾಂತಿಸುತಶ್ಚಾಪಿ ಸಿದ್ಧಃ ಸಿದ್ಧೇರಜಾಯತ ॥ ೨೩ ॥

ಯಶಃ ಕೀರ್ತಿಸುತಸ್ತದ್ವದಿತ್ಯೇತೇ ಧರ್ಮಸೂನವಃ ।
ಕಾಮಸ್ಯ ಹರ್ಷಃ ಪುತ್ರೋऽಭೂದ್ದೇವಾನಂದೋऽಪ್ಯಜಾಯತ ॥ ೨೪ ॥

---

೨೦. ಜ್ಞಾನಿಗಳಲ್ಲಿ ಶ್ರೇಷ್ಠರೆನಿಸಿದ ಭೃಗು ಮುಂತಾದ ಮುನಿಗಳು ಹೀಗೆ ಖ್ಯಾತಿ ಮುಂತಾದ ಕನ್ಯೆಯರನ್ನು ಸ್ವೀಕರಿಸಿದರು. ಕಾಮನು ಶ್ರದ್ಧಾ ದೇವಿಯ ಪುತ್ರನೆಂದೂ ದರ್ಪವು ಲಕ್ಷ್ಮೀದೇವಿಯ ಪುತ್ರನೆಂದೂ ಸ್ಮರಿಸಲ್ಪಟ್ಟಿರುವರು.

೨೧. ಧೃತಿದೇವಿಗೆ ನಿಯಮ, ತುಷ್ಟಿಗೆ ಸಂತೋಷ, ಪುಷ್ಟಿಗೆ ಲಾಭ ಮತ್ತು ಮೇಧಾದೇವಿಗೆ ಶಮ ಎಂಬ ರತ್ನಪ್ರಾಯರಾದ ಪುತ್ರರು ಜನಿಸಿದರು.

೨೨. ಕ್ರಿಯಾದೇವಿಯಲ್ಲಿ ದಂಡ-ನಯ ಎಂಬ ಇಬ್ಬರು ಪುತ್ರರೂ, ಬುದ್ಧಿದೇವಿಯಲ್ಲಿ ಬೋಧ ಪ್ರಮಾದ ಎಂಬ ಪುತ್ರರೂ ಜನಿಸಿರುವರು.

೨೩. ಲಜ್ಜಾದೇವಿಗೆ ವಿನಯ, ವಪುಃ ಎಂಬುವಳಿಗೆ ವ್ಯವಸಾಯ, ಶಾಂತಿ ದೇವಿಗೆ ಕ್ಷೇಮ ಮತ್ತು ಸಿದ್ಧಿಗೆ ಸಿದ್ಧ ಎಂಬ ಉತ್ತಮ ಪುತ್ರರು ಕ್ರಮವಾಗಿ ಜನಿಸಿದರು.

೨೪. ಯಶ ಎಂಬುವನು ಹಾಗೆಯೇ ಕೀರ್ತಿದೇವಿಯ ಮಗನಾಗಿ ಹುಟ್ಟಿದನು. ಹೀಗೆ ಇವರೆಲ್ಲರೂ ಧರ್ಮಪ್ರಜಾಪತಿಯ ಪುತ್ರರಾಗಿರುವರು, ಕಾಮನಿಗೆ ಹರ್ಷ ಮತ್ತು ದೇವಾನಂದ ಎಂಬ ಪುತ್ರರು ಜನಿಸಿದರು.

ಇತ್ಯೇಷ ವೈ ಸುಖೋದರ್ಕಃ ಸರ್ಗೋ ಧರ್ಮಸ್ಯ ಕೀರ್ತಿತಃ ।
ಜಜ್ಞೇ ಹಿಂಸಾ ತ್ವಧರ್ಮಾದ್ವೈ ನಿಕೃತಿಂ ಚಾನೃತಂ ಸುತಮ್ ॥ ೨೫ ॥

ನಿಕೃತೇಸ್ತನಯೋ ಜಜ್ಞೇ ಭಯಂ ನರಕಮೇವ ಚ ।
ಮಾಯಾ ಚ ವೇದನಾ ಚೈವ ಮಿಥುನಂ ತ್ವಿದಮೇತಯೋಃ ॥ ೨೬ ॥

ಭಯಾಜ್ಜಜ್ಞೇಽಥ ವೈ ಮಾಯಾ ಮೃತ್ಯುಂ ಭೂತಾಪಹಾರಿಣಮ್ ।
ವೇದನಾ ಚ ಸುತಂ ಚಾಪಿ ದುಃಖಂ ಜಜ್ಞೇಽಥ ರೌರವಾತ್ ॥ ೨೭ ॥

ಮೃತ್ಯೋರ್ವ್ಯಾಧಿರ್ಜರಾಶೋಕೌ ತೃಷ್ಣಾ ಕ್ರೋಧಶ್ಚ ಜಜ್ಞಿರೇ ।
ದುಃಖೋತ್ತರಾಃ ಸ್ಮೃತಾ ಹ್ಯೇತೇ ಸರ್ವೇ ಚಾಧರ್ಮಲಕ್ಷಣಾಃ ॥೨೮॥

ನೈಷಾಂ ಭಾರ್ಯಾಸ್ತಿ ಪುತ್ರೋ ವಾ ಸರ್ವೇ ತೇ ಹ್ಯೂರ್ಧ್ವರೇತಸಃ ।
ಇತ್ಯೇಷ ತಾಮಸಃ ಸರ್ಗೋ ಜಜ್ಞೇ ಧರ್ಮನಿಯಾಮಕಃ ॥ ೨೯ ॥

---

೨೫. ಧರ್ಮಪ್ರಜಾಪತಿಯ ಸಂತತಿಯಲ್ಲಿ ಹುಟ್ಟಿದ ಸುಖಪರಿಣಾಮವುಳ್ಳ ಸೃಷ್ಟಿ ಪರಂಪರೆಯು ಈರೀತಿಯಾಗಿ ಹೇಳಲ್ಪಟ್ಟಿದೆ. ಹಿಂಸೆ ಎಂಬುವಳು ಅಧರ್ಮದಿಂದ ನಿಕೃತಿ ಮತ್ತು ಅನೃತ ಪುತ್ರರನ್ನು ಪ್ರಸವಿಸಿದಳು.

೨೬. ನಿಕೃತಿಗೆ ಭಯ, ನರಕಗಳು ಪುತ್ರರಾಗಿ ಜನಿಸಿದರು. ಈ ಭಯ ನರಕರಿಗೆ ಮಾಯಾ ಮತ್ತು ವೇದನಾ ಎಂಬುವರು ಸೇರಿ ಎರಡು ದಂಪತಿಗಳಾದರು.

೨೭. ಮಾಯೆಯು ಭಯದಿಂದ ಸರ್ವಭೂತಗಳನ್ನು ಕೊನೆಗಾಣಿಸುವ ಮೃತ್ಯುವನ್ನು ಪ್ರಸವಿಸಿತು. ಹಾಗೆ ವೇದನಾ ಎಂಬಾಕೆಯು ರೌರವ ನರಕದಸಂಗದಿಂದ ದುಃಖವೆಂಬ ಪುತ್ರರನ್ನು ಹೊಂದಿತು.

೨೮. ಮೃತ್ಯುವಿಗೆ ವ್ಯಾಧಿ, ಮುಪ್ಪು, ಶೋಕ, ಆಸೆ ಮತ್ತು ಕೋಪ ಎಂಬ ಪುತ್ರರು ಜನಿಸಿದರು. ಈ ಪುತ್ರರೆಲ್ಲರೂ ಹೆಚ್ಚಿನ ದುಃಖಮಯರಾಗಿಯೂ ಅಧರ್ಮ ಸ್ವರೂಪ ವುಳ್ಳವರಾಗಿಯೂ ಸ್ಮರಿಸಲ್ಪಟ್ಟಿರುವರು.

೨೯. ಇವರಿಗೆ ಭಾರ್ಯೆಯು ಅಥವಾ ಪುತ್ರನು ಇಲ್ಲ. ಇವರೆಲ್ಲರೂ ಊರ್ಧ್ವ ರೇತಸ್ಸುಗಳೆಂದು ಪ್ರಸಿದ್ಧರಾಗಿರುವರು. ಹೀಗೆ ಧರ್ಮವನ್ನು ನಿಯಮಿಸುವ ತಮೋ ಗುಣದ ವಿಕಾರವಾದ ಸೃಷ್ಟಿಯು ಪ್ರಾವರ್ಭವಿಸಿತು.

ಸಂಕ್ಷೇಪೇಣ ಮಯಾ ಪ್ರೋಕ್ತಾ ವಿಸೃಷ್ಟಿರ್ಮುನಿಪುಂಗವಾಃ ॥ ೩೦ ॥

ಇತಿ ಶ್ರೀ ಕೂರ್ಮಪುರಾಣೇ ಽಷ್ಟಮೋಽಧ್ಯಾಯಃ

---

೩೦. ಮುನಿವರ್ಯರೇ ! ಈರೀತಿಯಾಗಿ ಪುರಾಣಪ್ರಸಿದ್ಧವಾದ ಸೃಷ್ಟಿ ಮತ್ತು ವಿಸೃಷ್ಟಿಗಳು ಕ್ರಮವಾಗಿಯೂ ತಾತ್ವಿಕವಾಗಿಯೂ ಹೇಳಲ್ಪಟ್ಟವೆ.

ಕೂರ್ಮ ಪುರಾಣದಲ್ಲಿ ಎಂಟನೆಯ ಅಧ್ಯಾಯವು ಮುಗಿದುದು .

ಶ್ರೀಃ

# ಕೂರ್ಮಪುರಾಣಂ

## ನವಮೋಽಧ್ಯಾಯಃ

### (ಪದ್ಮೋದ್ಭವಪ್ರಾದುರ್ಭಾವಃ)

ಸೂತ ಉವಾಚ :—

ಏತಚ್ಛ್ರುತ್ವಾ ತು ವಚನಂ ನಾರದಾದ್ಯಾ ಮಹರ್ಷಯಃ ।
ಪ್ರಣಮ್ಯ ವರದಂ ವಿಷ್ಣುಂ ಪಪ್ರಚ್ಛುಃ ಸಂಶಯಾನ್ವಿತಾಃ ॥ ೧ ॥

ಮುನಯ ಊಚುಃ :—

ಕಥಿತೋ ಭವತಾ ಸರ್ಗೋ ಮುಖ್ಯಾದೀನಾಂ ಜನಾರ್ದನ ।
ಇದಾನೀಂ ಸಂಶಯಂ ಚೇಮಮಸ್ಮಾಕಂ ಛೇತ್ತುಮರ್ಹಸಿ ॥ ೨ ॥

---

## ಒಂಭತ್ತನೆಯ ಅಧ್ಯಾಯವು

೧. ಸೂತ ಮುನಿಯು ಇಂತೆಂದನು:–ನಾರದರೇ ಆದಿಯಾದ ಮಹರ್ಷಿಗಳ ಈ ವಚನವನ್ನು ಕೇಳಿ ಕಾಂಕ್ಷಿತ ವರಗಳನ್ನು ನೀಡುವ ವಿಷ್ಣು ಪರಮಾತ್ಮನನ್ನು ವಂದಿಸಿ ಸಂಶಯಾನ್ವಿತರಾಗಿ ಮತ್ತೆ ಪ್ರಶ್ನೆ ಮಾಡಿದರು.

೨. ಮುನಿಗಳು ಇಂತೆಂದರು:–ಜನಾರ್ದನಸ್ವಾಮಿಯೇ ! ಮುಖ ಮುಂತಾದ ಅವಯವಗಳಿಂದ ಜನಿಸಿದ ಪ್ರಾಣಿಸರ್ಗವು ನಿನ್ನಿಂದ ಹೇಳಲ್ಪಟ್ಟಿದೆ. ಈಗ ಮುಂದೆ ವಿವರಿಸುವ ನಮ್ಮ ಸಂಶಯವನ್ನು ಉಚಿತ ಸಮಾಧಾನಗಳಿಂದ ನಿವಾರಿಸಲು ಅರ್ಹನಾಗಿದ್ದೀ.

ಕಥಂ ಸ ಭಗವಾನೀಶಃ ಪೂರ್ವಜೋಽಪಿ ಪಿನಾಕಧೃಕ್ ।
ಪುತ್ರತ್ವಮಗಮಚ್ಛಂಭುರ್ಬ್ರಹ್ಮಣೋಽವ್ಯಕ್ತಜನ್ಮನಃ ॥ ೩ ॥

ಕಥಂ ಚ ಭಗವಾನ್ ಜಜ್ಞೇ ಬ್ರಹ್ಮಾ ಲೋಕಪಿತಾಮಹಃ ।
ಅಂಡತೋ ಜಗತಾಮೀಶಸ್ತನ್ನೋ ವಕ್ತುಮಿಹಾರ್ಹಸಿ ॥ ೪ ॥

ಕೂರ್ಮ ಉವಾಚ :—

ಶೃಣುಧ್ವಮೃಷಯಃ ಸರ್ವೇ ಶಂಕರಸ್ಯಾಮಿತೌಜಸಃ ।
ಪುತ್ರತ್ವಂ ಬ್ರಹ್ಮಣಸ್ತಸ್ಯ ಪದ್ಮಯೋನಿತ್ವಮೇವ ಚ ॥ ೫ ॥

ಅತೀತಕಲ್ಪಾವಸಾನೇ ತಮೋಭೂತಂ ಜಗತ್ತ್ರಯಮ್ ।
ಆಸೀದೇಕಾರ್ಣವಂ ಘೋರಂ ನ ದೇವಾದ್ಯಾ ನ ಚರ್ಷಯಃ ॥ ೬ ॥

---

೩. ಷಡ್ಗುಣ ಸಂಪನ್ನನೂ ಎಲ್ಲಾ ಪ್ರಪಂಚಕ್ಕೆ ಆದಿಯಲ್ಲಿದ್ದವನೂ ಪಿನಾಕ ಆಯುಧವನ್ನು ಧರಿಸಿದವನೂ ಆದ ಈಶ್ವರನು ಅವ್ಯಕ್ತ ತತ್ವದಿಂದ ಜನಿಸಿರುವ ಬ್ರಹ್ಮದೇವನಿಗೆ ಹೇಗೆ ಪುತ್ರನಾದನು ?

೪. ಮತ್ತು ಪೂಜ್ಯನೂ ಸರ್ವಲೋಕಪಿತಾಮಹನೂ ಮತ್ತು ಜಗತ್ತಿಗೆ ಈಶ್ವರನೂ ಆದ ಬ್ರಹ್ಮದೇವನು ಅಂಡದಿಂದ ಹೇಗೆ ಜನಿಸಿದನು ? ಇದನ್ನು ನಮಗೆ ಹೇಳಲು ಅರ್ಹನಾಗಿದ್ದಿ.

೫. ಕೂರ್ಮಮೂರ್ತಿಯು ಇಂತೆಂದನು:–ಸಮಸ್ತ ಮಹರ್ಷಿಗಳೇ ! ಅಗಣ್ಯವಾದ ತೇಜಸ್ಸಿನಿಂದ ಕೂಡಿದ ಈಶ್ವರನು ಬ್ರಹ್ಮನಿಗೆ ಪುತ್ರನಾದುದನ್ನು ಮತ್ತು ಆ ಬ್ರಹ್ಮದೇವನು ಪದ್ಮದಿಂದ ಪ್ರಾದುರ್ಭಾವ ಹೊಂದಿದುದನ್ನು ಸಾವಧಾನವಾಗಿ ಶ್ರವಣ ಮಾಡಿರಿ.

೬. ಹಿಂದಿನ ಕಲ್ಪದ ಅವಸಾನದಲ್ಲಿ ಪ್ರಳಯದಶೆಯಲ್ಲಿ ಈ ಮೂರು ಲೋಕಗಳೂ ಘೋರವಾದ ಅಂಧಕಾರಮಯವಾಗಿ ಜಲಪೂರ್ಣತೆಯಿಂದ ಏಕಾರ್ಣವದಂತಾಯಿತು. ಆಗ ದೇವತೆ-ಋಷಿ ಮುಂತಾದವರಾರೂ ಇರಲಿಲ್ಲ.

ತತ್ರ ನಾರಾಯಣೋ ದೇವೋ ನಿರ್ಜನೇ ನಿರುಪಪ್ಲವೇ ।
ಆಶ್ರಿತ್ಯ ಶೇಷಶಯನಂ ಸುಷ್ವಾಪ ಪುರುಷೋತ್ತಮಃ ॥ ೭ ॥

ಸಹಸ್ರಶೀರ್ಷಾ ಭೂತ್ವಾ ಸ ಸಹಸ್ರಾಕ್ಷಃ ಸಹಸ್ರಪಾತ್ ।
ಸಹಸ್ರಬಾಹುಃ ಸರ್ವಜ್ಞಶ್ಚಿಂತ್ಯಮಾನೋ ಮನೀಷಿಭಿಃ ॥ ೮ ॥

ಪೀತವಾಸಾ ವಿಶಾಲಾಕ್ಷೋ ನೀಲ ಜೀಮೂತಸನ್ನಿಭಃ ।
ತತೋ ವಿಭೂತಿಯೋಗಾತ್ಮಾ ಯೋಗಿನಾಂ ತು ದಯಾಪರಃ ॥ ೯ ॥

ಕದಾಚಿತ್ತಸ್ಯ ಸುಪ್ತಸ್ಯ ಲೀಲಾರ್ಥಂ ದಿವ್ಯಮದ್ಭುತಮ್ ।
ತ್ರೈಲೋಕ್ಯಸಾರಂ ವಿಮಲಂ ನಾಭ್ಯಾಂ ಪಂಕಜಮುದ್ಬಭೌ ॥ ೧೦ ॥

---

೭. ಆ ಸಮಯದಲ್ಲಿ ಪುರುಷೋತ್ತಮನಾದ ನಾರಾಯಣಸ್ವಾಮಿಯು ಜನರ ಹಿತವೂ ಸರ್ವೋಪದ್ರವಶೂನ್ಯವೂ ಆದ ಆ ಏಕಾರ್ಣವದಲ್ಲಿ ಶೇಷಶಯನವನ್ನು ಆಶ್ರಯಿಸಿ ನಿದ್ದೆ ಮಾಡಿದನು.

೮. ಆ ಸ್ವಾಮಿಯು ಸಹಸ್ರಾರು ಸಂಖ್ಯೆಯ ತಲೆ ಕಣ್ಣು ಪಾದ ಮತ್ತು ಬಾಹುಗಳಿಂದ ಕೂಡಿದವನೂ ಸರ್ವಜ್ಞನೂ ಮತ್ತು ವಿಶ್ವರೂಪದಿಂದ ಜ್ಞಾನಿಗಳಿಗೆ ಧ್ಯಾನಗಮ್ಯನೂ ಆಗಿದ್ದನು.

೯. ಮತ್ತು ಪೀತಾಂಬರಧಾರಿ, ವಿಶಾಲವಾದ ನೇತ್ರಕಾಂತಿ ನೀಲ ಮೇಘದ ಶ್ಯಾಮವರ್ಣ, ಈ ಸುಂದರ ಗುಣಗಳಿಂದ ಕೂಡಿದವನೂ, ತನ್ನ ವಿಭೂತಿ ವಿಶೇಷದಿಂದ ಕೂಡಿದಸ್ವರೂಪ ವುಳ್ಳವನೂ ಮತ್ತು ಯೋಗಿಗಳಲ್ಲಿ ದಯಾಮಯನೂ ಆಗಿದ್ದನು.

೧೦. ಒಂದು ಸಮಯದಲ್ಲಿ ನಿದ್ರಾ ಸುಖವನ್ನು ಅನುಭವಿಸುತ್ತಿದ್ದ ಆ ಸ್ವಾಮಿಯ ವಿನೋದಕ್ಕೋಸ್ಕರ ದಿವ್ಯವೂ, ಅದ್ಭುತಪ್ರಾಯವೂ, ತ್ರಿಲೋಕಗಳ ಸಾರಾಂಶರೂಪವೂ ಮತ್ತು ನಿರ್ಮಲವೂ ಆದ ಒಂದು ಕಮಲವು ನಾಭಿಯಲ್ಲಿ ಜನಿಸಿತು.

ಶತಯೋಜನವಿಸ್ತೀರ್ಣಂ ತರುಣಾದಿತ್ಯಸನ್ನಿಭಮ್ ।
ದಿವ್ಯಗಂಧಮಯಂ ಪುಣ್ಯಂ ಕರ್ಣಿಕಾಕೇಸರಾನ್ವಿತಮ್ ॥ ೧೧ ॥

ತಸ್ಯೈವಂ ಸುಚಿರಂ ಕಾಲಂ ವರ್ತಮಾನಸ್ಯ ಶಾರ್ಙ್ಗಿಣಃ ।
ಹಿರಣ್ಯಗರ್ಭೋ ಭಗವಾಂ ಸ್ತಂ ದೇಶಮುಪಚಕ್ರಮೇ ॥ ೧೨ ॥

ಸ ತಂ ಕರೇಣ ವಿಶ್ವಾತ್ಮಾ ಸಮುತ್ಥಾಪ್ಯ ಸನಾತನಮ್ ।
ಪ್ರೋವಾಚ ಮಧುರಂ ವಾಕ್ಯಂ ಮಾಯಯಾ ತಸ್ಯ ಮೋಹಿತಃ ॥ ೧೩ ॥

ಅಸ್ಮಿನ್ನೇಕಾರ್ಣವೇ ಘೋರೇ ನಿರ್ಜನೇ ತಮಸಾ ವೃತೇ ।
ಏಕಾಕೀ ಕೋ ಭವಾಂಶ್ಶೇತಿ ಬ್ರೂಹಿ ಮೇ ಪುರುಷರ್ಷಭ ॥ ೧೪ ॥

---

೧೧. ಆ ಕಮಲವು ನೂರು ಯೋಜನ ವಿಸ್ತಾರದ ಪರಿಮಾಣ, ಪ್ರೌಢನಾದ ಸೂರ್ಯನಂತೆ ಉಜ್ವಲಕಾಂತಿ, ಪವಿತ್ರವಾದ ದಿವ್ಯಗಂಧ ಮತ್ತು ನಡುವೆ ಕರ್ಣಿಕಾ ಕೇಸರ ಮುಂತಾದ ಗುಣಗಳಿಂದ ರಮ್ಯವಾಗಿತ್ತು.

೧೨. ಶಾರ್ಙ್ಗ ಆಯುಧವನ್ನು ಧರಿಸಿದ ಆ ವಿಷ್ಣು ಪರಮಾತ್ಮನು ಬಹಳ ಹೊತ್ತು ಈ ರೀತಿಯಾಗಿ ನಿದ್ರಾಸುಖದಲ್ಲಿ ಲೀನನಾಗಿರಲು ಪೂಜ್ಯನಾದ ಬ್ರಹ್ಮದೇವನು ಮೆಲ್ಲಗೆ ಆ ಸ್ಥಳಕ್ಕೆ ಬಂದು ಸೇರಿದನು.

೧೩. ವಿಶ್ವರೂಪಿಯಾದ ಆ ಬ್ರಹ್ಮನು ತನ್ನ ಹಸ್ತಸ್ಪರ್ಶದಿಂದ ಪುರಾಣ ಪುರುಷನಾದ ಆ ವಿಷ್ಣುವನ್ನು ಪ್ರಬೋಧಗೊಳಿಸಿ ವಿಷ್ಣುಮಾಯೆಯಿಂದ ಮೋಹಗೊಂಡವನಾಗಿ ಮಧುರವಾದ ಈ ವಾಕ್ಯವನ್ನು ಆಡಿದನು.

೧೪. ಪುರುಷೋತ್ತಮನೇ ! ಅಂಧಕಾರದಿಂದ ತುಂಬಿ ಜನ ಶೂನ್ಯವಾಗಿ ಘೋರರೂಪವಾಗಿ ಕಾಣಿಸುವ ಈ ಏಕಾರ್ಣವದಲ್ಲಿ ಏಕಾಕಿಯಾಗಿ ಶಯನಮಾಡಿರುವ ನೀನು ಯಾರು ? ಇದನ್ನು ನನಗೆ ಹೇಳು.

ತಸ್ಯ ತದ್ವಚನಂ ಶ್ರುತ್ವಾ ವಿಹಸ್ಯ ಗರುಡಧ್ವಜಃ ।
ಉವಾಚ ದೇವಂ ಬ್ರಹ್ಮಾಣಂ ಮೇಘಗಂಭೀರನಿಸ್ಸ್ವನಃ ॥ ೧೫ ॥

ಭೋ ಭೋ ನಾರಾಯಣಂ ದೇವ ಲೋಕಾನಾಂ ಪ್ರಭವಾಪ್ಯಯಮ್ ।
ಮಹಾಯೋಗೀಶ್ವರಂ ಮಾಂ ವೈ ಜಾನೀಹಿ ಪುರುಷೋತ್ತಮಮ್ ॥೧೬॥

ಮಯಿ ಪಶ್ಯ ಜಗತ್ ಕೃತ್ಸ್ನಂ ತ್ವಂ ಚ ಲೋಕಪಿತಾಮಹಃ ।
ಸಪರ್ವತಮಹಾದ್ವೀಪಂ ಸಮುದ್ರೈಃ ಸಪ್ತಭಿರ್ವೃತಮ್ ॥ ೧೭ ॥

ಏವಮಾಭಾಷ್ಯ ವಿಶ್ವಾತ್ಮಾ ಪ್ರೋವಾಚ ಪುರುಷಂ ಹರಿಃ ।
ಜಾನನ್ನಪಿ ಮಹಾಯೋಗೀ ಕೋ ಭವಾನಿತಿ ವೇಧಸಮ್ ॥ ೧೮ ॥

---

೧೫. ಬ್ರಹ್ಮದೇವನ ಆ ವಾಣಿಯನ್ನು ಕೇಳಿ ಧ್ವಜದಲ್ಲಿ ಗರುಡಲಾಂಛನವುಳ್ಳ ಆ ವಿಷ್ಣುವು ಮಂದಹಾಸಮಾಡಿ ಮೇಘದಂತೆ ಗಂಭೀರವಾದ ವಾಣಿಯಿಂದ ಬ್ರಹ್ಮದೇವನನ್ನು ಕುರಿತು ಪ್ರತ್ಯುತ್ತರ ವಿತ್ತನು.

೧೬. ಎಲೈ ಬ್ರಹ್ಮದೇವನೇ! ಲೋಕಗಳ ಸೃಷ್ಟಿಸಂಹಾರಗಳಿಗೆ ಕಾರಣನಾಗಿಯೂ ಮಹಾಯೋಗಿಗಳಿಗೆ ಈಶ್ವರನಾಗಿಯೂ ಮತ್ತು ಪುರುಷೋತ್ತಮನಾಗಿಯೂ ಇರುವ ನನ್ನನ್ನು ನಾರಾಯಣಸ್ವಾಮಿ ಎಂದು ತಿಳಿ.

೧೭. ನೀನು ನನ್ನಲ್ಲಿ ಅಡಗಿರುವ ಮಹತ್ತಾದ ಪರ್ವತ- ದ್ವೀಪ ಮತ್ತು ಸಪ್ತ ಸಮುದ್ರಗಳಿಂದ ಆವರಿಸಲ್ಪಟ್ಟ ಸಮಸ್ತ ಜಗತ್ತನ್ನೂ ಪ್ರತ್ಯಕ್ಷವಾಗಿ ನೋಡು. ನೀನು ಈ ಲೋಕಗಳಿಗೆ ಪಿತಾಮಹನಾಗಿರುವೆ.

೧೮. ವಿಶ್ವರೂಪನಾದ ಹರಿಯು ಎದುರಿಗಿರುವ ಬ್ರಹ್ಮನನ್ನು ಕುರಿತು ಈ ರೀತಿಯಾಗಿ ಹೇಳಿ ತಾನು ಮಹಾಯೋಗಿಯೂ ಸರ್ವಜ್ಞನೂ ಆಗಿದ್ದರೂ ನೀನು ಯಾರೆಂದು ಮತ್ತೆ ಬ್ರಹ್ಮದೇವನನ್ನು ಪ್ರಶ್ನಿಸಿದನು.

ತತಃ ಪ್ರಹಸ್ಯ ಭಗವಾನ್ ಬ್ರಹ್ಮಾ ವೇದನಿಧಿಃ ಪ್ರಭುಃ ।
ಪ್ರತ್ಯುವಾಚಾಂಬುಜಾಭಾಕ್ಷಂ ಸಸ್ಮಿತಂ ಶ್ಲಕ್ಷ್ಣಯಾ ಗಿರಾ ॥ ೧೯ ॥

ಅಹಂ ಧಾತಾ ವಿಧಾತಾ ಚ ಸ್ವಯಂಭೂಃ ಪ್ರಪಿತಾಮಹಃ ।
ಮಯ್ಯೇವ ಸಂಸ್ಥಿತಂ ವಿಶ್ವಂ ಬ್ರಹ್ಮಾಹಂ ವಿಶ್ವತೋಮುಖಃ ॥ ೨೦ ॥

ಶ್ರುತ್ವಾ ವಾಚಂ ಸ ಭಗವಾನ್ ವಿಷ್ಣುಃ ಸತ್ಯಪರಾಕ್ರಮಃ ।
ಅನುಜ್ಞಾಪ್ಯಾಥ ಯೋಗೇನ ಪ್ರವಿಷ್ಟೋ ಬ್ರಹ್ಮಣಸ್ತನುಮ್ ॥ ೨೧ ॥

ತ್ರೈಲೋಕ್ಯಮೇತತ್ಸಕಲಂ ಸದೇವಾಸುರಮಾನುಷಮ್ ।
ಉದರೇ ತಸ್ಯ ದೇವಸ್ಯ ದೃಷ್ಟ್ವಾ ವಿಸ್ಮಯಮಾಗತಃ ॥ ೨೨ ॥

---

೧೯. ಆಗ ವೇದಗಳಿಗೆ ನಿಧಿಯೂ, ಜಗತ್ತಿಗೆ ಪ್ರಭುವೂ ಮತ್ತು ಪೂಜ್ಯನೂ ಆದ ಬ್ರಹ್ಮನು ನಕ್ಕು ಕಮಲದಂತೆ ರಮ್ಯವಾದ ಕಣ್ಣುಗಳುಳ್ಳ ವಿಷ್ಣುವನ್ನು ಕುರಿತು ಮಧುರವಾದ ವಾಣಿಯಿಂದ ಮುಗುಳ್ನಗೆಯಿಂದ ಕೂಡಿ ಪ್ರತ್ಯುತ್ತರ ಹೇಳಿದನು.

೨೦. ನಾನು ಸೃಷ್ಟಿಕರ್ತನೂ ಲೋಕನಿಯಾಮಕನೂ, ಸ್ವತಂತ್ರವಾಗಿಯೇ ಆವಿರ್ಭವಿಸಿದವನೂ ಮತ್ತು ಪ್ರಪಿತಾ ಮಹನೂ ಆಗಿರುವೆನು. ಈಸಮಸ್ತ ಪ್ರಪಂಚವೂ ನನ್ನಲ್ಲಿ ಅಡಗಿರುವುದು. ನಾನು ವಿಶ್ವತೋಮುಖನಾದ ಬ್ರಹ್ಮದೇವನು.

೨೧. ಭಗವಂತನೂ, ಸತ್ಯವಾದ ಪರಾಕ್ರಮ ವುಳ್ಳವನೂ ಆದ ವಿಷ್ಣುವು ಬ್ರಹ್ಮನ ಆ ವಚನವನ್ನು ಕೇಳಿ ಅವನ ಸಮ್ಮತಿಯನ್ನು ತೆಗೆದುಕೊಂಡು ಯೋಗ ಮಹಿಮೆಯಿಂದ ಬ್ರಹ್ಮದೇವನ ವಿಗ್ರಹವನ್ನು ಪ್ರವೇಶಿಸಿದನು.

೨೨. ಆಗ ದೇವತೆ, ಅಸುರ ಮತ್ತು ಮಾನವರಿಂದ ಕೂಡಿದ ಈ ಸಮಸ್ತ ತ್ರೈಲೋಕ್ಯವನ್ನೂ ಆ ಬ್ರಹ್ಮದೇವನ ಉದರದಲ್ಲಿ ನೋಡಿ ಪರಮಾಶ್ಚರ್ಯವನ್ನು ಹೊಂದಿದನು.

ತದಾಸ್ಯ ವಕ್ತ್ರಾನ್ನಿಷ್ಕ್ರಮ್ಯ ಪನ್ನಗೇಂದ್ರನಿಕೇತನಃ ।
ಅಥಾಪಿ ಭಗವಾನ್ ವಿಷ್ಣುಃ ಪಿತಾಮಹಮಥಾಬ್ರವೀತ್ ॥ ೨೩ ॥

ಭವಾನಪ್ಯೇವಮೇವಾದ್ಯ ಶಾಶ್ವತಂ ಹಿ ಮಮೋದರಮ್ ।
ಪ್ರವಿಶ್ಯ ಲೋಕಾನ್ ಪಶ್ಯೈತಾನ್ ವಿಚಿತ್ರಾನ್ ಪುರುಷರ್ಷಭ ॥ ೨೪ ॥

ತತಃ ಪ್ರಹ್ಲಾದಿನೀಂ ವಾಣೀಂ ಶ್ರುತ್ವಾ ತಸ್ಯಾಭಿನಂದ್ಯ ಚ ।
ಶ್ರೀಪತೇರುದರಂ ಭೂಯಃ ಪ್ರವಿವೇಶ ಕುಶಧ್ವಜಃ ॥ ೨೫ ॥

ತಾನೇವ ಲೋಕಾನ್ ಗರ್ಭಸ್ಥಾನಪಶ್ಯತ್ಸತ್ಯವಿಕ್ರಮಃ ।
ಪರ್ಯಟಿತ್ವಾಥ ದೇವಸ್ಯ ದದೃಶೇಽಂತಂ ನ ವೈ ಹರೇಃ ॥ ೨೬ ॥

---

೨೩. ತರುವಾಯ ಶೇಷಶಾಯಿಯಾದ ವಿಷ್ಣುವು ಬ್ರಹ್ಮದೇವನ ಮುಖದಿಂದ ಹೊರಕ್ಕೆ ಬಂದನು. ಮತ್ತು ಪೂಜ್ಯನಾದ ವಿಷ್ಣುಪರಮಾತ್ಮನು ಲೋಕಗಳ ಪಿತಾಮಹನಾದ ಬ್ರಹ್ಮದೇವನಿಗೆ ಹೀಗೆ ಹೇಳಿದನು.

೨೪. ಪುರುಷೋತ್ತಮನೇ! ನೀನೂ ಕೂಡ ಈ ಪರಿಯಲ್ಲಿ ಶಾಶ್ವತವಾದ ನನ್ನ ಉದರವನ್ನು ಪ್ರವೇಶಮಾಡಿ ವಿಚಿತ್ರ ಸನ್ನಿವೇಶದಿಂದ ಕೂಡಿದ ಈ ಲೋಕಗಳನ್ನು ನೋಡು.

೨೫. ಅನಂತರದಲ್ಲಿ ದರ್ಭಮಯವಾದ ಧ್ವಜವುಳ್ಳ ಬ್ರಹ್ಮದೇವನು ಆನಂದವನ್ನುಂಟುಮಾಡುವ ವಿಷ್ಣುವಿನ ಆ ವಾಣಿಯನ್ನು ಕೇಳಿ ಮತ್ತೆ ಲಕ್ಷ್ಮೀಪತಿಯಾದ ವಿಷ್ಣುವಿನ ಉದರವನ್ನು ಹೊಕ್ಕನು.

೨೬. ಆಗ ವಿಷ್ಣುವಿನ ಗರ್ಭೋದರದಲ್ಲಿದ್ದ ಆ ಲೋಕಗಳನ್ನೇ ಸತ್ಯವಾದ ವಿಕ್ರಮದಿಂದ ಕೂಡಿದ ಬ್ರಹ್ಮದೇವನು ನೋಡಿದನು. ಮತ್ತು ಆ ವಿಷ್ಣು ಪರಮಾತ್ಮನ ಉದರದಲ್ಲಿ ಸಂಚಾರಮಾಡಿ ಕೊನೆಯನ್ನು ಕಾಣಲಾಗಲಿಲ್ಲ.

ತತೋ ದ್ವಾರಾಣಿ ಸರ್ವಾಣಿ ಪಿಹಿತಾನಿ ಮಹಾತ್ಮನಾ ।
ಜನಾರ್ದನೇನ ಬ್ರಹ್ಮಾಸೌ ನಾಭ್ಯಾಂ ದ್ವಾರಮವಿಂದತ ॥ ೨೭ ॥

ತತ್ರ ಯೋಗಬಲೇನಾಸೌ ಪ್ರವಿಶ್ಯ ಕನಕಾಂಡಜಃ ।
ಉಜ್ಜಹಾರಾತ್ಮನೋ ರೂಪಂ ಪುಷ್ಕರಾಚ್ಚತುರಾನನಃ ॥ ೨೮ ॥

ವಿರರಾಜಾರವಿಂದಸ್ಥಃ ಪದ್ಮಗರ್ಭಸಮದ್ಯುತಿಃ ।
ಬ್ರಹ್ಮಾ ಸ್ವಯಂಭೂರ್ಭಗವಾಞ್ಜಗದ್ಯೋನಿಃ ಪಿತಾಮಹಃ ॥ ೨೯ ॥

ಸ ಮನ್ಯಮಾನೋ ವಿಶ್ವೇಶಮಾತ್ಮಾನಂ ಪರಮಂ ಪದಮ್ ।
ಪ್ರೋವಾಚ ವಿಷ್ಣುಂ ಪುರುಷಂ ಮೇಘಗಂಭೀರಯಾ ಗಿರಾ ॥ ೩೦ ॥

---

೨೭. ಆಗ ಮಹಾತ್ಮನಾದ ಜನಾರ್ದನಸ್ವಾಮಿಯಿಂದ ತನ್ನ ವಿಗ್ರಹದ .ಸರ್ವ ದ್ವಾರಗಳೂ ಮುಚ್ಚಲ್ಪಟ್ಟಿದ್ದುವು· ಒಳಗಿದ್ದ ಬ್ರಹ್ಮದೇವನು ಮತ್ತಾವ ದ್ವಾರಗಳನ್ನೂ ಹೊಂದದೆ ನಾಭಿಯ:ಲ್ಲಿ ಒಂದು ನಿರ್ಗಮ ದ್ವಾರವನ್ನು ಹೊಂದಿದನು.

೨೮. ಚತುರ್ಮುಖನೂ ಸುವರ್ಣದ ಅಂಡದಿಂದ ಜನಿಸಿದವನೂ ಆದ ಬ್ರಹ್ಮನು ಯೋಗಬಲದಿಂದ ಆ ನಾಭಿದ್ವಾರದಲ್ಲಿ ಪ್ರವೇಶಿಸಿ ಕಮಲದಿಂದ ತನ್ನ ಮೂರ್ತಿಯನ್ನು ಮೇಲಕ್ಕೆ ಎತ್ತಿದನು.

೨೯. ಸ್ವತಂತ್ರವಾದ ಆವಿರ್ಭಾವವುಳ್ಳವನೂ ಷಡ್ಗುಣೈಶ್ವರ್ಯಸಂಪನ್ನನೂ ಮತ್ತು ಜಗದಾದಿಕಾರಣನೂ ಆದ ಬ್ರಹ್ಮನು ಪದ್ಮದ ಮಧ್ಯಭಾಗದಂತಿರುವ ಪ್ರಭೆಯುಳ್ಳವನಾಗಿ ಆ ನಾಭಿಕಮಲದ ಮಧ್ಯದಲ್ಲಿ ವಿರಾಜಿಸಿದನು.

೩೦. ಆಗ ಬ್ರಹ್ಮನು ವಿಶ್ವಕ್ಕೆ ನಿಯಾಮಕವೂ ಪರಮಪದರೂಪವೂ ಆದ ಆತ್ಮ ಸ್ವರೂಪವನ್ನು ಚಿಂತಿಸುತ್ತಾ ವಿಷ್ಣುಪರಮಾತ್ಮನನ್ನು ಕುರಿತು ಗುಡುಗಿನಂತೆ ಇರುವ ಗಂಭೀರವಾದ ವಾಣಿಯಿಂದ ಮಾತನಾಡಿದನು.

ಕೃತಂ ಕಿಂ ಭವತೇದಾನೀಮಾತ್ಮನೋ ಜಯಕಾಂಕ್ಷಯಾ ।
ಏಕೋಽಹಂ ಪ್ರಬಲೋ ನಾನ್ಯೋ ಮಾ ವೈ ಕೋಽಭಿಭವಿಷ್ಯತಿ॥ ೩೦ ॥

ಶ್ರುತ್ವಾ ನಾರಾಯಣೋ ವಾಕ್ಯಂ ಬ್ರಹ್ಮಣೋಕ್ತಮತಂದ್ರಿತಃ ।
ಸಾಂತ್ವಪೂರ್ವಮಿದಂ ವಾಕ್ಯಂ ಬಭಾಷೇ ಮಧುರಂ ಹರಿಃ ॥ ೩೨ ॥

ಭವಾನ್ ಧಾತಾ ವಿಧಾತಾ ಚ ಸ್ವಯಂಭೂಃ ಪ್ರಪಿತಾಮಹಃ ।
ನ ಮಾತ್ಸರ್ಯಾಭಿಯೋಗೇನ ದ್ವಾರಾಣಿ ಪಿಹಿತಾನಿ ಮೇ ॥ ೩೩ ॥

ಕಿಂತು ಲೀಲಾರ್ಥಮೇವೈತನ್ನ ತ್ವಾಂ ಬಾಧಿತುಮಿಚ್ಛಯಾ ।
ಕೋ ಹಿ ಬಾಧಿತುಮನ್ವಿಚ್ಛೇದ್ದೇವದೇವಂ ಪಿತಾಮಹಮ್ ॥ ೩೪ ॥

---

೩೧. ಸ್ವಾಮಿಯೇ ! ಜಯದ ಅಭಿಲಾಷೆಯಿಂದ ನಿನ್ನಿಂದ ಈಗ ಇದೇನು ಮಾಡಲ್ಪಟ್ಟಿತು ? ನಾನೊಬ್ಬನೇ ಬಲಪೂರ್ಣನಾದವನು. ನನ್ನಂತಹ ವೀರನು ಮತ್ತೊಬ್ಬನಿಲ್ಲ. ನನ್ನನ್ನು ಯಾರು ತಿರಸ್ಕರಿಸಬಲ್ಲರು?

೩೨. ನಾರಾಯಣ ಅಥವಾ ಶ್ರೀಹರಿಯು ಬ್ರಹ್ಮನಿಂದ ಹೇಳಲ್ಪಟ್ಟ ಈ ಅಹಂಕಾರದ ವಚನವನ್ನು ಕೇಳಿ ಪ್ರಮಾದರಹಿತನಾಗಿ ಸಮಾಧಾನಪೂರ್ವಕವಾಗಿ ಈ ಸಮಾಧಾನದ ಮಾತನ್ನಾಡಿದನು.

೩೩. ನೀನು ಸೃಷ್ಟಿಕರ್ತನೂ ನಿಯಾಮಕನೂ ಸ್ವಾಧೀನವಾದ ಉತ್ಪತ್ತಿಯುಳ್ಳವನೂ ಮತ್ತು ಲೋಕಕ್ಕೆ ಪಿತಾಮಹನೂ ಆಗಿರುತ್ತಿ. ಇಂತಹ ನಿನ್ನಲ್ಲಿ ಮಾತ್ಸರ್ಯಭಾವದಿಂದ ನಾನು ನನ್ನ ದೇಹದ ದ್ವಾರಗಳನ್ನು ಮುಚ್ಚಿಕೊಂಡಿಲ್ಲ.

೩೪. ಕೇವಲವಾಗಿ ಒಂದು ವಿನೋದವನ್ನು ನಟಿಸುವುದಕ್ಕೋಸ್ಕರಲೇ ದೇಹದ್ವಾರಗಳನ್ನು ಮುಚ್ಚಿಕೊಂಡಿರುವುದು ಹೊರತು ನಿನ್ನನ್ನು ಬಾಧಿಸಬೇಕೆಂಬ ಇಚ್ಛೆಯಿಂದಲ್ಲ. ದೇವದೇವನೂ ಪಿತಾಮಹನೂ ಆದ ನಿನ್ನನ್ನು ಯಾರು ತಾನೇ ಬಾಧಿಸಲು ಇಷ್ಟಪಡುವನು?

ನ ಹಿ ತ್ವಂ ಬಾಧ್ಯಸೇ ಬ್ರಹ್ಮನ್ ಮಾನ್ಯೋಽಹಿ ಸರ್ವಥಾ ಭವಾನ್ ।
ಮಮ ಕ್ಷಮಸ್ವ ಕಲ್ಯಾಣ ಯನ್ಮಯಾಪಕೃತಂ ತವ ॥ ೩೫ ॥

ಅಸ್ಮಾಚ್ಚ ಕಾರಣಾದ್ಬ್ರಹ್ಮನ್ ಪುತ್ರೋ ಭವತು ಮೇ ಭವಾನ್ ।
ಪದ್ಮಯೋನಿರಿತಿ ಖ್ಯಾತೋ ಮತ್ಪ್ರಿಯಾರ್ಥಂ ಜಗನ್ಮಯ ॥ ೩೬ ॥

ತತಃ ಸ ಭಗವಾನ್ ದೇವೋ ವರಂ ದತ್ವಾ ಕಿರೀಟಿನೇ ।
ಪ್ರಹರ್ಷಮತುಲಂ ಗತ್ವಾ ಪುನರ್ವಿಷ್ಣುಮಭಾಷತ ॥ ೩೭ ॥

ಭವಾನ್ ಸರ್ವಾತ್ಮಕೋಽನಂತಃ ಸರ್ವೇಷಾಂ ಪರಮೇಶ್ವರಃ ।
ಸರ್ವಭೂತಾಂತರಾತ್ಮಾ ವೈ ಪರಂ ಬ್ರಹ್ಮ ಸನಾತನಮ್ ॥ ೩೮ ॥

---

೩೫. ಬ್ರಹ್ಮನೇ ! ನನ್ನಿಂದ ನೀನು ನಿಜವಾಗಿಯೂ ಬಾಧಿಸಲ್ಪಡುವುದಿಲ್ಲ. ಎಲ್ಲ ರೀತಿಯಿಂದಲೂ ನೀನು ನನಗೆ ಮಾನ್ಯನಾಗಿರುವೆ. ಮಂಗಳಮೂರ್ತಿಯೇ, ನನ್ನಿಂದ ನಿನಗೆ ಆಗಿರುವ ಅಪಕಾರವನ್ನು ಕ್ಷಮಿಸುವವನಾಗು.

೩೬. ವಿಶ್ವರೂಪಿಯಾದ ಬ್ರಹ್ಮದೇವನೇ ! ಈ ಕಾರಣದಿಂದ ನೀನು ನನಗೆ ಪುತ್ರನಾಗಿರು ಮತ್ತು ನನ್ನ ಪ್ರೀತಿಗೋಸ್ಕರವೇ ಪದ್ಮದಿಂದ ಜನ್ಮವನ್ನೆತ್ತಿದ ನೀನು ಪದ್ಮಯೋನಿ ಎಂದು ಪ್ರಸಿದ್ಧಿಯನ್ನು ಹೊಂದು.

೩೭. ಆಗ ಪೂಜ್ಯನಾದ ಆ ಬ್ರಹ್ಮದೇವನು ಕಿರೀಟಧಾರಿಯಾದ ವಿಷ್ಣುವಿಗೆ ಅವನ ಇಷ್ಟಾರ್ಥವನ್ನು ಕರುಣಿಸಿ ಅಪಾರವಾದ ಆನಂದವನ್ನು ಹೊಂದಿ ಮತ್ತೆ ವಿಷ್ಣುವನ್ನು ಕುರಿತು ಮಾತನಾಡಿದನು.

೩೮. ಸ್ವಾಮಿಯೇ ! ನೀನು ಸರ್ವರ ಆತ್ಮರೂಪನು, ಅಂತವಿಲ್ಲದವನು, ಸರ್ವರಿಗೂ ಪರಮೇಶ್ವರನು, ಸಮಸ್ತ ಪ್ರಾಣಿಗಳಿಗೆ ಅಂತರ್ಯಾಮಿಯು, ಮತ್ತು ಅನಾದಿಯಾದ ಪರಬ್ರಹ್ಮರೂಪನು.

ಅಹಂ ವೈ ಸರ್ವಲೋಕಾನಾಮಾತ್ಮಲೋಕೋ ಮಹೇಶ್ವರಃ ।
ಮನ್ಮಯಂ ಸರ್ವಮೇವೇದಂ ಬ್ರಹ್ಮಣಃ ಪುರುಷಃ ಪರಃ ॥ ೩೯ ॥

ನಾವಾಭ್ಯಾಂ ವಿದ್ಯತೇ ಹ್ಯನ್ಯೋ ಲೋಕಾನಾಂ ಪರಮೇಶ್ವರಃ ।
ಏಕಾ ಮೂರ್ತಿರ್ದ್ವಿಧಾ ಭಿನ್ನಾ ನಾರಾಯಣಪಿತಾಮಹೌ ॥ ೪೦ ॥

ತೇನೈವಮುಕ್ತೋ ಬ್ರಹ್ಮಾಣಂ ವಾಸುದೇವೋಽಬ್ರವೀದಿದಮ್ ।
ಇಯಂ ಪ್ರತಿಜ್ಞಾ ಭವತೋ ವಿನಾಶಾಯ ಭವಿಷ್ಯತಿ ॥ ೪೧ ॥

ಕಿಂ ನ ಪಶ್ಯಸಿ ಯೋಗೇನ ಬ್ರಹ್ಮಾಧಿಪತಿಮವ್ಯಯಮ್ ।
ಪ್ರಧಾನಪುರುಷೇಶಾನಂ ವೇದಾಹಂ ಪರಮೇಶ್ವರಮ್ ॥ ೪೨ ॥

---

೩೯. ನಾನು ಸರ್ವ ಲೋಕಗಳಿಗೆ ಆತ್ಮರೂಪನೂ ಸರ್ವಲೋಕ ಪಿತಾಮಹನೂ ಆಗಿರುವೆನು. ಆದುದರಿಂದ ಈ ಸರ್ವ ಪ್ರಪಂಚವೂ ನನ್ನ ರೂಪವಾದುದು. ನಾನು ಪೂರ್ಣನಾದ ಪುರುಷರೂಪಿಯು.

೪೦. ನಮ್ಮಿಬ್ಬರನ್ನು ಬಿಟ್ಟು ಲೋಕಗಳಲ್ಲಿ ಪರಮೇಶ್ವರನೆಂದೆಣಿಸಿದ ಮತ್ತೊಂದು ಮೂರ್ತಿಯು ಇಲ್ಲ. ಒಂದು ಮೂರ್ತಿಯು ನಮ್ಮಿಬ್ಬರ ರೂಪದಿಂದ ನಾರಾಯಣ ಮತ್ತು ಪಿತಾಮಹನೆಂದು ಎರಡಾಗಿ ವಿಭಾಗಿಸಲ್ಪಟ್ಟಿದೆ.

೪೧. ವಾಸುದೇವನು ಬ್ರಹ್ಮನಿಂದ ಈ ರೀತಿ ಹೇಳಲ್ಪಟ್ಟವನಾಗಿ ಮತ್ತೆ ಬ್ರಹ್ಮನಿಗೆ ಈ ಅಂಶವನ್ನು ತಿಳಿಸಿದನು. ಬ್ರಹ್ಮನೇ ! ಅಜ್ಞಾನದಿಂದ ಮಾಡಿರುವ ಈ ನಿನ್ನ ಪ್ರತಿಜ್ಞೆಯು ನಿನ್ನ ನಾಶಕ್ಕೆ ಕಾರಣವಾಗುವುದು.

೪೨. ಬ್ರಹ್ಮನೇ ! ನಿನಗೆ ಅಧಿಪತಿಯೂ ನಾಶರಹಿತನೂ ಆದ ಶಂಕರನನ್ನು ಯೋಗಬಲದಿಂದ ನೀನು ಸಾಕ್ಷಾತ್ಕರಿಸಲಿಲ್ಲವೇ; ಪ್ರಧಾನ ಮತ್ತು ಜೀವರಿಗೆ ಪ್ರಭುವಾದ ಆ ಪರಮೇಶ್ವರನನ್ನು ನಾನು ತಿಳಿದಿರುವೆನು.

ಯಂ ನ ಪಶ್ಯಂತಿ ಯೋಗೀಂದ್ರಾಃ ಸಾಂಖ್ಯಾ ಅಪಿ ಮಹೇಶ್ವರಮ್ ।
ಅನಾದಿನಿಧನಂ ಬ್ರಹ್ಮ ತಮೇವ ಶರಣಂ ವ್ರಜ ॥ ೪೩ ॥

ತತಃ ಕ್ರುದ್ಧೋಽಂಬುಜಾಭಾಕ್ಷಂ ಬ್ರಹ್ಮಾ ಪ್ರೋವಾಚ ಕೇಶವಮ್ ।
ಭಗವನ್ನೂನಮಾತ್ಮಾನಂ ವೇದ್ಮಿ ತತ್ಪರಮಾಕ್ಷರಮ್ ॥ ೪೪ ॥

ಬ್ರಹ್ಮಾಣಂ ಜಗತಾಮೇಕಮಾತ್ಮಾನಂ ಪರಮಂ ಪದಮ್ ।
ನಾವಾಭ್ಯಾಂ ವಿದ್ಯತೇ ತ್ವನ್ಯೋ ಲೋಕಾನಾಂ ಪರಮೇಶ್ವರಃ ॥ ೪೫ ॥

ಸಂತ್ಯಜ್ಯ ನಿದ್ರಾಂ ವಿಪುಲಾಂ ಸ್ವಮಾತ್ಮಾನಂ ವಿಲೋಕಯ ।
ತಸ್ಯ ತತ್ಕ್ರೋಧಜಂ ವಾಕ್ಯಂ ಶ್ರುತ್ವಾಪಿ ಸ ತದಾ ಪ್ರಭುಃ ॥ ೪೬ ॥

---

೪೩. ತತ್ವಜ್ಞಾನದಲ್ಲಿ ಲೀನರಾದ ಯೋಗೀಂದ್ರರೂ ಯಾವ ಪರಮೇಶ್ವರನನ್ನು ಸುಲಭವಾಗಿ ಸಾಕ್ಷಾತ್ಕರಿಸಲಾರರೋ ಉತ್ಪತ್ತಿನಾಶಗಳಿಂದ ವರ್ಜಿತನೂ ಪರಬ್ರಹ್ಮಸ್ವರೂಪನೂ ಆದ ಆ ಶಂಕರನನ್ನು ಶರಣ ಹೊಂದು.

೪೪. ತರುವಾಯ ಬ್ರಹ್ಮದೇವನು ಕೋಪಿಸಿಕೊಂಡವನಾಗಿ ಕಮಲದಂತೆ ಸುಂದರವಾದ ಕಣ್ಣುಗಳಿಂದ ವಿರಾಜಿಸುವ ವಿಷ್ಣುವನ್ನು ಕುರಿತು ಹೇಳಿದನು. ಭಗವಂತನೆ ! ಆ ಪರಮ ಅಕ್ಷರಸ್ವರೂಪಿಯಾದ ಪರಬ್ರಹ್ಮ ವಸ್ತುವು ನಾನೆಂದೇ ನಿಜವಾಗಿ ತಿಳಿದಿರುವೆನು.

೪೫. ಸರ್ವಲೋಕಗಳಿಗೆ ಅದ್ವಿತೀಯಾತ್ಮಸ್ವರೂಪನೂ ಉತ್ಕೃಷ್ಟವಾದ ಪ್ರಾಪ್ಯಸ್ಥಾನವೂ ನಾನೇ ಆಗಿರುವೆನು. ನಮ್ಮಿಬ್ಬರಿಗಿಂತ ವ್ಯತಿರಿಕ್ತನಾಗಿ ಲೋಕಪ್ರಭುವು ಮತ್ತೊಬ್ಬನಾದೂ ಇಲ್ಲ.

೪೬. ನಿನ್ನ ಈ ದೀರ್ಘವಾದ ನಿದ್ರೆಯನ್ನು ಬಿಟ್ಟು ಸ್ವಸ್ವರೂಪವನ್ನು ನೋಡು. ಹೀಗೆಂದು ಕೋಪಾವೇಶದಿಂದ ಬ್ರಹ್ಮನು ನುಡಿದಿರುವ ಮಾತನ್ನು ಕೇಳಿದರೂ ಆಗ ವಿಷ್ಣುಪರಮಾತ್ಮನು ಸಮಾಧಾನದಿಂದಿದ್ದನು.

ಮಾ ಮೈವಂ ವದ ಕಲ್ಯಾಣ ಪರಿವಾದಂ ಮಹಾತ್ಮನಃ ।
ನ ಮೇ ಹ್ಯವಿದಿತಂ ಬ್ರಹ್ಮನ್ ನಾನ್ಯಥಾಹಂ ವದಾಮಿ ತೇ ॥ ೪೭ ॥

ಕಿಂತು ಮೋಹಯತಿ ಬ್ರಹ್ಮನ್ ಅನಂತಾ ಪಾರಮೇಶ್ವರೀ
ಮಾಯಾಶೇಷವಿಶೇಷಾಣಾಂ ಹೇತುರಾತ್ಮಸಮುದ್ಭವಾ ॥ ೪೮ ॥

ಏತಾವದುಕ್ತ್ವಾ ಭಗವಾನ್ ವಿಷ್ಣುಸ್ತೂಷ್ಣೀಂ ಬಭೂವ ಹ ।
ಜ್ಞಾತ್ವಾ ತತ್ಪರಮಂ ತತ್ತ್ವಂ ಸ್ವಮಾತ್ಮಾನಂ ಸುರೇಶ್ವರಃ ॥ ೪೯ ॥

ಕುತೋ ಹ್ಯಪರಿಮೇಯಾತ್ಮಾ ಭೂತಾನಾಂ ಪರಮೇಶ್ವರಃ ।
ಪ್ರಸಾದಂ ಬ್ರಹ್ಮಣೇ ಕರ್ತುಂ ಪ್ರಾದುರಾಸೀತ್ತತೋ ಹರಃ ॥ ೫೦ ॥

---

೪೭. ಮತ್ತು ಮಂಗಳರೂಪಿಯಾದ ಬ್ರಹ್ಮದೇವನೇ ! ಹೀಗೆ ಹೇಳಬೇಡ. ಮಹಾತ್ಮನ ವಿಷಯದಲ್ಲಿ ಈ ನಿಂದೆಯು ಯುಕ್ತವಲ್ಲ. ನನಗೆ ತಿಳಿಯದಿರುವುದು ಯಾವುದೂ ಇಲ್ಲ. ತತ್ವಾಂಶವನ್ನು ಬಿಟ್ಟು ಬೇರೆಯಾಗಿ ನಾನು ಹೇಳುವುದಿಲ್ಲ.

೪೮. ಬ್ರಹ್ಮದೇವನೇ ! ಪರಮೇಶ್ವರನ ಸ್ವಸ್ವರೂಪದಿಂದ ಹುಟ್ಟಿರುವ ಪರಮೇಶ್ವರನ ಅಧೀನವಾದ ಮತ್ತು ಅಂತವಿಲ್ಲದ ಮಾಯೆಯು ಸಮಸ್ತ ವಿಕಾರ ಗಳಿಗೂ ಕಾರಣವಾಗಿ ಸರ್ವ ಪ್ರಾಣಿಗಳನ್ನು ಮೋಹಗೊಳಿಸುತ್ತದೆ.

೪೯. ಪೂಜ್ಯನಾದ ವಿಷ್ಣುಪರಮಾತ್ಮನು ಈ ವಚನವನ್ನು ಹೇಳಿ ಸುಮ್ಮ ನಾದನು. ಆಗ ಬ್ರಹ್ಮದೇವನು ತನ್ನ ರೂಪವನ್ನು ಪರಮಾತ್ಮತತ್ವವನ್ನಾಗಿ ಧ್ಯಾನಿಸಿದನು.

೫೦. ಮತ್ತು ಯಾವ ಪ್ರಾಣಿಯಿಂದಲೂ ಅಳತೆ ಮಾಡಲಾಗದ ಸ್ವರೂಪ ವುಳ್ಳ ಸರ್ವಪ್ರಾಣಿನಿಯಾಮಕನಾದ ಶಂಕರನು ಬ್ರಹ್ಮದೇವನಿಗೆ ಅನುಗ್ರಹವನ್ನು ತೋರಿಸಲು ಪ್ರತ್ಯಕ್ಷನಾದನು.

ಲಲಾಟ ನಯನೋ ದೇವೋ ಜಟಾಮಂಡಲಮಂಡಿತಃ ।
ತ್ರಿಶೂಲಪಾಣಿರ್ಭಗವಾಂಸ್ತೇಜಸಾಂ ಪರಮೋ ನಿಧಿಃ ॥ ೫೧ ॥

ವಿದ್ಯಾವಿಲಾಸಗ್ರಥಿತಾ ಗ್ರಹೈಃ ಸಾರ್ಕೇಂದುತಾರಕೈಃ ।
ಮಾಲಾಮತ್ಯದ್ಭುತಾಕಾರಾಂ ಧಾರಯನ್ ಪಾದಲಂಬಿನೀಮ್ ॥ ೫೨ ॥

ತಂ ದೃಷ್ಟ್ವಾ ದೇವಮೀಶಾನಂ ಬ್ರಹ್ಮಾ ಲೋಕಪಿತಾಮಹಃ ।
ಮೋಹಿತೋ ಮಾಯಯಾತ್ಯರ್ಥಂ ಪೀತವಾಸಸಮಬ್ರವೀತ್ ॥ ೫೩ ॥

ಕ ಏಷ ಪುರುಷೋ ನೀಲಃ ಶೂಲಪಾಣಿಸ್ತ್ರಿಲೋಚನಃ ।
ತೇಜೋರಾಶಿರಮೇಯಾತ್ಮಾ ಸಮಾಯಾತಿ ಜನಾರ್ದನ ॥ ೫೪ ॥

---

೫೧. ಆ ಶಂಕರನು ಹಣೆಯಲ್ಲಿ ತೃತೀಯ ನೇತ್ರವುಳ್ಳವನೂ ಶಿರದಲ್ಲಿ ಜಟೆಗಳ ಸುತ್ತಿನಿಂದ ಅಲಂಕರಿಸಲ್ಪಟ್ಟವನೂ ಕೈಯಲ್ಲಿ ತ್ರಿಶೂಲವನ್ನು ಧರಿಸಿದವನೂ ಷಡ್ಗುಣೈಶ್ವರ್ಯಸಂಪನ್ನನೂ ಮತ್ತು ತೇಜಸ್ಸುಗಳಿಗೆ ಉತ್ತಮನಿಧಿಯಾದ ದೇವನೂ ಆಗಿದ್ದನು.

೫೨. ಮತ್ತು ಸೂರ್ಯ-ಚಂದ್ರ ಮುಂತಾದ ಗ್ರಹಗಳಿಂದಲೂ ನಕ್ಷತ್ರಗಳಿಂದಲೂ ಸೇರಿಸಿ ವಿದ್ಯಾದೇವತೆಯಿಂದ ವಿಲಾಸವಾಗಿ ರಚಿಸಲ್ಪಟ್ಟ ಅದ್ಭುತವಾದ ಆಕೃತಿಯಿಂದ ಕೂಡಿದ ಹಾಗು ಪಾದಾಗ್ರಪರ್ಯಂತವಾಗಿ ಲಂಬಿಸುವ ಮಾಲಿಕೆಯನ್ನು ಧರಿಸಿದವನಾಗಿದ್ದನು.

೫೩. ಲೋಕಗಳಿಗೆ ಪಿತಾಮಹನಾದ ಬ್ರಹ್ಮದೇವನು ಆ ಶಂಕರಸ್ವಾಮಿಯನ್ನು ಕಂಡು ಮಾಯೆಯಿಂದ ಅಧಿಕವಾಗಿ ಮುಗ್ಧನಾಗಿ ಪೀತಾಂಬರಧಾರಿಯಾದ ವಿಷ್ಣುವನ್ನು ಕುರಿತು ಹೀಗೆ ಹೇಳಿದನು.

೫೪. ಜನಾರ್ದನಸ್ವಾಮಿಯೇ! ದೇಹದಲ್ಲಿ ನೀಲವರ್ಣ, ಹಸ್ತದಲ್ಲಿ ತ್ರಿಶೂಲ, ಹಣೆಯಲ್ಲಿ ತೃತೀಯಲೋಚನ ಇವುಗಳಿಂದ ಕೂಡಿದ ತೇಜೋರಾಶಿಯಾದ ಮತ್ತು ಗಣನಾತೀತವಾದ ಸ್ವರೂಪವುಳ್ಳ ಪೂರ್ಣನಾದ ಈ ಪುರುಷನು ಬರುತ್ತಿರುವನು. ಇವನು ಯಾರು ?

ತಸ್ಯ ತದ್ವಚನಂ ಶ್ರುತ್ವಾ ವಿಷ್ಣುರ್ದಾನವಮರ್ದನಃ ।
ಅಪಶ್ಯದೀಶ್ವರಂ ದೇವಂ ಜ್ವಲಂತಂ ವಿಮಲೇಽಂಭಸಿ ॥ ೫೫ ॥

ಜ್ಞಾತ್ವಾ ತಂ ಪರಮಂ ಭಾವಮೈಶ್ವರಂ ಬ್ರಹ್ಮಭಾವನಃ ।
ಪ್ರೋವಾಚೋತ್ಥಾಯ ಭಗವಾನ್ ದೇವದೇವಂ ಪಿತಾಮಹಮ್ ॥೫೬॥

ಅಯಂ ದೇವೋ ಮಹಾದೇವಃ ಸ್ವಯಂಜ್ಯೋತಿಃ ಸನಾತನಃ ।
ಅನಾದಿನಿಧನೋಽಚಿಂತ್ಯೋ ಲೋಕಾನಾಮೀಶ್ವರೋ ಮಹಾನ್॥ ೫೭ ॥

ಶಂಕರಃ ಶಂಭುರೀಶಾನಃ ಸರ್ವಾತ್ಮಾ ಪರಮೇಶ್ವರಃ ।
ಭೂತಾನಾಮಧಿಪೋ ಯೋಗೀ ಮಹೇಶೋ ವಿಮಲಃ ಶಿವಃ ॥ ೫೮ ॥

---

೫೫. ದಾನವರನ್ನು ಸಂಹರಿಸಿದ ವಿಷ್ಣುಪರಮಾತ್ಮನು ಬ್ರಹ್ಮದೇವನ ಆ ವಚನವನ್ನು ಕೇಳಿ ನಿರ್ಮಲವಾದ ನೀರಿನಲ್ಲಿ ಜ್ವಲಿಸುತ್ತ ಬಂದಿರುವ ಶಂಕರ ಸ್ವಾಮಿಯನ್ನು ಕಂಡನು.

೫೬. ಆಗ ಪೂಜ್ಯನೂ ಶಂಕರನಲ್ಲಿ ಪರಬ್ರಹ್ಮಭಾವನೆಯಿಂದ ಕೂಡಿದವನೂ ಆದ ವಿಷ್ಣುವು ಈಶ್ವರನಲ್ಲಿ ಪರಮಾರ್ಥವಾದ ಬ್ರಹ್ಮರೂಪವನ್ನು ಕಂಡು ಮೇಲಕ್ಕೆದ್ದು ದೇವೋತ್ತಮನಾದ ಬ್ರಹ್ಮನಿಗೆ ಹೀಗೆ ಹೇಳಿದನು.

೫೭. ಬ್ರಹ್ಮನೇ! ಈ ಸ್ವಾಮಿಯು ದೇವೋತ್ತಮನೂ ಸ್ವಯಂ ಪ್ರಕಾಶನೂ, ಪುರಾಣಪುರುಷನೂ ಉತ್ಪತ್ತಿನಾಶಗಳಿಂದ ರಹಿತನೂ ಮಾನಸದಿಂದ ಚಿಂತಿಸಲಾಗದವನೂ ಮತ್ತು ಸರ್ವಲೋಕಗಳಿಗೆ ಮಹೇಶ್ವರನೂ ಆಗಿರುವನು.

೫೮. ಮತ್ತು ಸುಖಮಯನೂ ಜಗತ್ತಿಗೆ ಸುಖಕಾರಕನೂ ಸರ್ವನಿಯಾಮಕನೂ ವಿಶ್ವರೂಪನೂ ಪರಮೇಶ್ವರನೂ ಸರ್ವಭೂತಗಳಿಗೆ ಪ್ರಭುವೂ ಯೋಗಿಯೂ ಮಹೇಶ್ವರನೂ ನಿರ್ಮಲನೂ ಮತ್ತು ಮಂಗಳಕರನೂ ಆದ ಶಂಕರನಾಗಿರುವನು.

ಏಷ ಧಾತಾ ವಿಧಾತಾ ಚ ಪ್ರಧಾನಃ ಪ್ರಭುರವ್ಯಯಃ।
ಯಂ ಪ್ರಪಶ್ಯಂತಿ ಯತಯೋ ಬ್ರಹ್ಮಭಾವೇನ ಭಾವಿತಾಃ ॥ ೫೯ ॥

ಸೃಜತ್ಯೇಷ ಜಗತ್ಕೃತ್ಸ್ನಂ ಪಾತಿ ಸಂಹರತೇ ತಥಾ।
ಕಾಲೋಭೂತ್ವಾ ಮಹಾದೇವಃ ಕೇವಲೋ ನಿಷ್ಕಲಃ ಶಿವಃ ॥ ೬೦ ॥

ಬ್ರಹ್ಮಾಣಂ ವಿದಧೇ ಪೂರ್ವಂ ಭವಂತಂ ಯಃ ಸನಾತನಃ।
ವೇದಾಂಶ್ಚ ಪ್ರದದೌ ತುಭ್ಯಂ ಸೋಽಯಮಾಯಾತಿ ಶಂಕರಃ ॥ ೬೧ ॥

ಅಸ್ಯೈವ ಚಾಪರಾಂ ಮೂರ್ತಿಂ ವಿಶ್ವಯೋನಿಂ ಸನಾತನೀಮ್।
ವಾಸುದೇವಾಭಿಧಾನಂ ಮಾಮವೇಹಿ ಪ್ರಪಿತಾಮಹ ॥ ೬೨ ॥

---

೫೯. ಹಾಗು ಇವನು ಸೃಷ್ಟಿಕರ್ತನೂ, ಸರ್ವನಿಯಾಮಕನೂ, ಪ್ರಧಾನ ರೂಪನೂ ಪ್ರಭುವೂ ಮತ್ತು ನಾಶವಿಲ್ಲದವನೂ ಆಗಿರುವನು. ಯತಿಗಳು ಬ್ರಹ್ಮ ಭಾವನೆಯಿಂದ ಕೂಡಿ ಈ ಪರಮಾತ್ಮನನ್ನು ಸಾಕ್ಷಾತ್ಕರಿಸುತ್ತಾರೆ.

೬೦. ನಿರವಯವನೂ ಅದ್ವಿತೀಯನೂ ಮತ್ತು ಕಲ್ಯಾಣಮೂರ್ತಿಯೂ ಆದ ಈ ಮಹಾದೇವನು ಕಾಲರೂಪಿಯಾಗಿ ಈ ಸಮಸ್ತ ಪ್ರಪಂಚವನ್ನು ಸೃಷ್ಟಿ ಸಮಯ ದಲ್ಲಿ ನಿರ್ಮಿಸುತ್ತಾನೆ ಮತ್ತು ರಕ್ಷಿಸುತ್ತಾನೆ, ಅಂತದಲ್ಲಿ ಸಂಹರಿಸುತ್ತಾನೆ.

೬೧. ಯಾವ ಪುರಾಣಪುರುಷನು ಮೊದಲು ಬ್ರಹ್ಮನು ಎಂದೆನಿಸಿರುವ ನಿನ್ನನ್ನು ಸೃಷ್ಟಿಮಾಡಿ ಎಲ್ಲ ವೇದಗಳನ್ನೂ ನಿನಗೆ ಉಪದೇಶಿಸಿದನೋ ಅಂತಹ ಶಂಕರನು ಬರುತ್ತಲಿರುವನು.

೬೨. ಪ್ರಪಿತಾಮಹಸ್ವರೂಪನಾದ ಬ್ರಹ್ಮನೇ! ವಾಸುದೇವ ಎಂಬ ನಾಮಾಂಕಿತನಾದ ನನ್ನನ್ನು ಕೂಡ ಪುರಾಣವೂ ಜಗತ್ತಿಗೆ ಕಾರಣಭೂತವೂ ಆದ ಇದೇ ಶಂಕರನ ಮತ್ತೊಂದು ಮೂರ್ತಿಯನ್ನಾಗಿ ತಿಳಿ.

ಕಿಂ ನ ಪಶ್ಯಸಿ ಯೋಗೇಶಂ ಬ್ರಹ್ಮಾಧಿಪತಿಮವ್ಯಯಮ್ ।
ದಿವ್ಯಂ ಭವತು ತೇ ಚಕ್ಷುರ್ಯೇನ ದ್ರಕ್ಷ್ಯಸಿ ತತ್ಪರಮ್ ॥ ೬೩ ॥

ಲಬ್ಧ್ವಾ ಚೈವಂ ತದಾ ಚಕ್ಷುರ್ವಿಷ್ಣೋರ್ಲೋಕಪಿತಾಮಹಃ ।
ಬುಬುಧೇ ಪರಮಂ ಜ್ಞಾನಂ ಪುರತಃ ಸಮುವಸ್ಥಿತಮ್ ॥ ೬೪ ॥

ಸ ಲಬ್ಧ್ವಾ ಪರಮಂ ಜ್ಞಾನಮೈಶ್ವರಂ ಪ್ರಪಿತಾಮಹಃ ।
ಪ್ರಪೇದೇ ಶರಣಂ ದೇವಂ ತಮೇವ ಪಿತರಂ ಶಿವಮ್ ॥ ೬೫ ॥

ಓಂಕಾರಂ ಸಮನುಸ್ಮೃತ್ಯ ಸಂಸ್ತಭ್ಯಾತ್ಮಾನಮಾತ್ಮನಾ ।
ಅಥರ್ವಶಿರಸಾ ದೇವಂ ತುಷ್ಟಾವ ಚ ಕೃತಾಂಜಲಿಃ ॥ ೬೬ ॥

---

೬೩. ಯೋಗೇಶ್ವರನೂ ಶಾಶ್ವತನೂ ಮತ್ತು ಲೋಕಾಧಿಪತಿಯೂ ಆದ ಈ ಬ್ರಹ್ಮವಸ್ತುವನ್ನು ನೀನೇಕೆ ತಿಳಿಯಲಿಲ್ಲ. ಅಂತಹ ಪಾರಮಾರ್ಥಿಕ ತತ್ವವನ್ನು ತಿಳಿಸುವ ದಿವ್ಯವಾದ ಚಕ್ಷುಸ್ಸು ನಿನಗೆ ಉಂಟಾಗಲಿ.

೬೪. ಲೋಕಗಳ ಪಿತಾಮಹನಾದ ಬ್ರಹ್ಮನು ಈ ರೀತಿಯಾಗಿ ವಿಷ್ಣು ಪ್ರಸಾದದಿಂದ ದಿವ್ಯದೃಷ್ಟಿಯನ್ನು ಹೊಂದಿ ಜ್ಞಾನಮೂರ್ತಿಯಾಗಿ ತನ್ನ ಮುಂದೆ ನಿಂತಿರುವ ಪರಮೇಶ್ವರನ ಸ್ವರೂಪವನ್ನು ಅರಿತನು.

೬೫. ಲೋಕಗಳ ಪ್ರಪಿತಾಮಹನಾದ ಬ್ರಹ್ಮನು ಸರ್ವೇಶ್ವರನ ವಿಷಯದಲ್ಲಿ ತತ್ವಜ್ಞಾನವನ್ನು ಹೊಂದಿ ಸ್ವಾಮಿಯೂ ಲೋಕಗಳಿಗೆ ಜನಕನೂ ಆದ ಆ ಶಂಕರನನ್ನು ಶರಣಹೊಂದಿದನು.

೬೬. ಮತ್ತು ಸ್ವಾಮಿಯ ಮುಂದೆ ಅಂಜಲಿಯನ್ನು ಕಟ್ಟಿದವನಾಗಿ ತನ್ನ ಚಿತ್ತವನ್ನು ಪರಮಾತ್ಮನಲ್ಲಿ ನಿಶ್ಚಲವಾಗಿಟ್ಟು ಓಂಕಾರವನ್ನು ಧ್ಯಾನಿಸಿ ಅಥರ್ವಶೀರ್ಷವೆಂಬ ಸ್ತುತಿಮಂತ್ರಗಳಿಂದ ಸ್ವಾಮಿಯನ್ನು ಸ್ತೋತ್ರಮಾಡಿದನು.

ಸಂಸ್ತುತಸ್ತೇನ ಭಗವಾನ್ ಬ್ರಹ್ಮಣಾ ಪರಮೇಶ್ವರಃ ।
ಅವಾಪ ಪರಮಾಂ ಪ್ರೀತಿಂ ವ್ಯಾಜಹಾರ ಸ್ಮಯನ್ನಿವ ॥ ೬೭ ॥

ಮತ್ಸಮಸ್ತ್ವಂ ನ ಸಂದೇಹೋ ವತ್ಸ ಭಕ್ತಶ್ಚ ಮೇ ಭವಾನ್ ।
ಮಯ್ಯೈವೋತ್ಪಾದಿತಃ ಪೂರ್ವಂ ಲೋಕಸೃಷ್ಟ್ಯರ್ಥಮವ್ಯಯಃ ॥ ೬೮ ॥

ತ್ವಮಾತ್ಮಾ ಹ್ಯಾದಿಪುರುಷೋ ಮಮ ದೇಹಸಮುದ್ಭವಃ ।
ವರಂ ವರಯ ವಿಶ್ವಾತ್ಮನ್ ವರದೋಽಹಂ ತವಾನಘ ॥ ೬೯ ॥

ಸ ದೇವದೇವವಚನಂ ನಿಶಮ್ಯ ಕಮಲೋದ್ಭವಃ ।
ನಿರೀಕ್ಷ್ಯ ವಿಷ್ಣುಂ ಪುರುಷಂ ಪ್ರಣಮ್ಯೋವಾಚ ಶಂಕರಮ್ ॥ ೭೦ ॥

---

೬೭. ಪರಮಪೂಜ್ಯನಾದ ಪರಮೇಶ್ವರನು ಬ್ರಹ್ಮದೇವನಿಂದ ಹಾಗೆ ಸ್ತೋತ್ರ ಮಾಡಲ್ಪಟ್ಟವನಾಗಿ ಅವನಲ್ಲಿ ಉತ್ತಮವಾದ ಪ್ರೀತಿಯನ್ನು ಹೊಂದಿ ನಗುತ್ತಿರುವ ನಂತೆ ಅನುಗ್ರಹಿಸಿ ಮಾತನಾಡಿದನು.

೬೮. ವತ್ಸನೇ ! ನೀನು ನನಗೆ ಸಮಾನನಾಗಿರುತ್ತೀ ಮತ್ತು ನನ್ನ ಪರಮ ಭಕ್ತನಾಗಿದ್ದೀಯೆ. ನಾಶರಹಿತನಾದ ನೀನು ಈ ಲೋಕಗಳನ್ನು ಸೃಷ್ಟಿಮಾಡಲೋಸ್ಕರ ಮೊದಲು ನನ್ನಿಂದಲೇ ಸೃಷ್ಟಿಮಾಡಲ್ಪಟ್ಟಿದ್ದೀಯೆ. ಇದರಲ್ಲಿ ಸಂದೇಹವಿಲ್ಲ.

೬೯. ವಿಶ್ವರೂಪನಾದ ಬ್ರಹ್ಮನೇ ! ಆದಿಪುರುಷನಾದ ನೀನು ನನ್ನ ದೇಹ ದಿಂದ ಉತ್ಪತ್ತಿಯನ್ನು ಹೊಂದಿ ನನ್ನ ಆತ್ಮಸ್ವರೂಪನಾಗಿದ್ದೀಯೆ. ಈಗ ಇಷ್ಟವಾದ ವರಗಳನ್ನು ಕೇಳು. ನಿಷ್ಕಳಂಕನೇ! ನಾನು ನಿನಗೆ ವರವನ್ನು ಕೊಡಲು ಬಂದಿರುವೆನು.

೭೦. ವಿಷ್ಣುವಿನ ನಾಭಿಕಮಲದಲ್ಲಿ ಜನಿಸಿದ ಬ್ರಹ್ಮನು ದೇವೋತ್ತಮನಾದ ಶಂಕರನ ಮಾತನ್ನು ಕೇಳಿ ಪಾರ್ಶ್ವದಲ್ಲಿದ್ದ ವಿಷ್ಣು ಪರಮಾತ್ಮನನ್ನು ನೋಡುತ್ತಾ ನಮಸ್ಕಾರಪೂರ್ವಕವಾಗಿ ಶಂಕರನನ್ನು ಕುರಿತು ಹೀಗೆ ಹೇಳಿದನು.

ಭಗವನ್ ಭೂತಭವ್ಯೇಶ ಮಹಾದೇವಾಂಬಿಕಾಪತೇ ।
ತ್ವಾಮೇವ ಪುತ್ರಮಿಚ್ಛಾಮಿ ತ್ವಯಾ ವಾ ಸದೃಶಂ ಸುತಮ್ ॥ ೭೧ ॥

ಮೋಹಿತೋಽಸ್ಮಿ ಮಹಾದೇವ ಮಾಯಯಾ ಸೂಕ್ಷ್ಮಯಾ ತ್ವಯಾ ।
ನ ಜಾನೇ ಪರಮಂ ಭಾವಂ ಯಾಥಾತಥ್ಯೇನ ತೇ ಶಿವ ॥ ೭೨ ॥

ತ್ವಮೇವ ದೇವ ಭಕ್ತಾನಾಂ ಮಾತಾ ಭ್ರಾತಾ ಪಿತಾ ಸುಹೃತ್ ।
ಪ್ರಸೀದ ತವ ಪಾದಾಬ್ಜಂ ನಮಾಮಿ ಶರಣಾಗತಃ ॥ ೭೩ ॥

ಸ ತಸ್ಯ ವಚನಂ ಶ್ರುತ್ವಾ ಜಗನ್ನಾಥೋ ವೃಷಧ್ವಜಃ ।
ವ್ಯಾಜಹಾರ ತದಾ ಪುತ್ರಂ ಸಮಾಲೋಕ್ಯ ಜನಾರ್ದನಮ್ ॥ ೭೪ ॥

---

೭೧. ಪೂಜ್ಯನೇ! ಭೂತಭವಿಷ್ಯಗಳ ಪ್ರಭುವೇ! ಮಹಾದೇವನೇ! ಪಾರ್ವತಿ ರಮಣನೇ! ನೀನು ನನಗೆ ಪುತ್ರನಾಗಿ ಜನಿಸಬೇಕೆಂದು ನಾನು ಅಪೇಕ್ಷಿಸುತ್ತೇನೆ. ಅಥವಾ ನಿನಗೆ ಸಮಾನನಾದ ಪುತ್ರನಾದರೂ ನನಗೆ ಹುಟ್ಟಲಿ.

೭೨. ದೇವೋತ್ತಮನಾದ ಶಂಕರನೇ! ನಾನು ಪರಮಸೂಕ್ಷ್ಮವಾದ ನಿನ್ನ ಮಾಯೆಯಿಂದ ಮೋಹಗೊಂಡಿರುವೆನು. ಆದ್ದರಿಂದ ತಾತ್ವಿಕರೂಪದಿಂದ ಉತ್ತಮ ವಾದ ನಿನ್ನ ಆಕಾರವನ್ನು ತಿಳಿದುಕೊಂಡಿಲ್ಲ.

೭೩. ಸ್ವಾಮಿಯೇ ! ಭಕ್ತರಿಗೆ ನೀನೇ ಜನನಿ, ನೀನೇ ಸಹೋದರ, ನೀನೇ ತಂದೆ ಮತ್ತು ನೀನೇ ಮಿತ್ರನು. ನಾನು ಶರಣಾಗತನಾಗಿ ನಿನ್ನ ಪಾದಕಮಲವನ್ನು ವಂದಿಸುತ್ತಿದ್ದೇನೆ. ನನ್ನಲ್ಲಿ ಅನುಗ್ರಹ ತೋರು.

೭೪. ಧ್ವಜದಲ್ಲಿ ವೃಷಭದ ಚಿಹ್ನೆಯುಳ್ಳ ಮತ್ತು ಜಗನ್ನಾಥನಾದ ಶಂಕರನು ಆ ಬ್ರಹ್ಮದೇವನ ಮಾತನ್ನು ಕೇಳಿ ದುಷ್ಟರನ್ನು ಮರ್ದಿಸುವ ತನ್ನ ಪುತ್ರನಾದ ವಿಷ್ಣುವನ್ನು ನೋಡುತ್ತ ಈ ರೀತಿಯಾಗಿ ಹೇಳಿದನು.

ಯದರ್ಥಿತಂ ಭಗವತಾ ತತ್ಕರಿಷ್ಯಾಮಿ ಪುತ್ರಕ ।
ವಿಜ್ಞಾನಮೈಶ್ವರಂ ದಿವ್ಯಮುತ್ಪತ್ಸ್ಯತಿ ತವಾನಘಮ್ ॥ ೭೫ ॥

ತ್ವಮೇವ ಸರ್ವಭೂತಾನಾಮಾದಿಕರ್ತಾ ನಿಯೋಜಿತಃ ।
ಕುರುಷ್ವ ತೇಷು ದೇವೇಶ ಮಾಯಾಂ ಲೋಕಪಿತಾಮಹ ॥ ೭೬ ॥

ಏಷ ನಾರಾಯಣೋ ಮತ್ತೋ ಮಮೈವ ಪರಮಾ ತನುಃ ।
ಭವಿಷ್ಯತಿ ತವೇಶಾನ ಯೋಗಕ್ಷೇಮವಹೋ ಹರಿಃ ॥ ೭೭ ॥

ಏವಂ ವ್ಯಾಹೃತ್ಯ ಹಸ್ತಾಭ್ಯಾಂ ಪ್ರೀತಃ ಸ ಪರಮೇಶ್ವರಃ ।
ಸಂಸ್ಪೃಶ್ಯ ದೇವಂ ಬ್ರಹ್ಮಾಣಂ ಹರಿಂ ವಚನಮಬ್ರವೀತ್ ॥ ೭೮ ॥

---

೭೫. ಪೂಜ್ಯನಾದ ಬ್ರಹ್ಮದೇವನೇ! ಪುತ್ರರೂಪಿಯಾದ ನಿನ್ನಿಂದ ದೈನ್ಯದಿಂದ ಪ್ರಾರ್ಥಿಸಲ್ಪಟ್ಟ ಕಾರ್ಯವನ್ನು ನಾನು ಮಾಡುವೆನು. ನಿಷ್ಕಳಂಕನೇ! ನಿನಗೆ ಪರಮೇಶ್ವರ ವಿಷಯದಲ್ಲಿ ದಿವ್ಯವಾದ ಜ್ಞಾನಾನುಭವವು ಉಂಟಾಗುವುದು.

೭೬. ನೀನೇ ಸರ್ವ ಪ್ರಾಣಿಗಳಿಗೆ ಮೂಲಕಾರಣನಾಗಿ ಸೃಷ್ಟಿಯ ಪ್ರಾರಂಭದಲ್ಲಿ ನಿಯೋಜಿಸಲ್ಪಟ್ಟಿದ್ದೀ. ದೇವತೆಗಳ ಪ್ರಭುವೇ! ಮತ್ತು ಲೋಕಗಳ ಪಿತಾಮಹನೇ! ಆ ಸರ್ವ ಭೂತಗಳಲ್ಲಿ ಮಾಯೆಯನ್ನು ಪ್ರಸವಿಸು.

೭೭. ಈ ನಾರಾಯಣನು ನನ್ನ ಉತ್ತಮವಾದ ಮೂರ್ತ್ಯಂತರವಾಗಿ ನನ್ನಿಂದ ಜನಿಸಿರುವನು. ಸರ್ವೇಶ್ವರನೇ! ಈ ಹರಿಯು ನಿನ್ನ ಯೋಗಕ್ಷೇಮಗಳನ್ನು ಚಿಂತಿಸುವವನಾಗುವನು.

೭೮. ಹೀಗೆ ಆ ಪರಮೇಶ್ವರನು ನುಡಿದು ಅಧಿಕವಾದ ಪ್ರೀತಿಯಿಂದ ತನ್ನ ಕೈಗಳಿಂದ ಬ್ರಹ್ಮದೇವನನ್ನು ಸ್ಪರ್ಶಮಾಡಿ ವಿಷ್ಣುವನ್ನು ಕುರಿತು ಈ ವಚನವನ್ನು ಹೇಳಿದನು.

ತುಷ್ಟೋಽಸ್ಮಿ ಸರ್ವಥಾಹಂ ತೇ ಭಕ್ತಸ್ತ್ವಂ ಚ ಜಗನ್ಮಯ ।
ವರಂ ವೃಣೀಷ್ವ ನಾವಾಭ್ಯಾಮನ್ಯೋಽಸ್ತಿ ಪರಮಾರ್ಥತಃ ॥ ೭೯ ॥

ಶ್ರುತ್ವಾಽಥ ದೇವವಚನಂ ವಿಷ್ಣುರ್ವಿಶ್ವಮಯಂ ಜಗತ್ ।
ಪ್ರಾಹ ಪ್ರಸನ್ನಯಾ ವಾಚಾ ಸಮಾಲೋಕ್ಯ ಚ ತನ್ಮುಖಮ್ ॥ ೮೦ ॥

ಏಷ ಏವ ವರಃ ಶ್ಲಾಘ್ಯೋ ಯದಹಂ ಪರಮೇಶ್ವರಮ್ ।
ಪಶ್ಯಾಮಿ ಪರಮಾತ್ಮಾನಂ ಭಕ್ತಿರ್ಭವತು ಮೇ ತ್ವಯಿ ॥ ೮೧ ॥

ತಥೇತ್ಯುಕ್ತ್ವಾ ಮಹಾದೇವಃ ಪುನರ್ವಿಷ್ಣುಮಭಾಷತ ।
ಭವಾನ್ ಸರ್ವಸ್ಯ ಕಾರ್ಯಸ್ಯ ಕರ್ತಾಹಮಧಿದೈವತಮ್ ॥ ೮೨ ॥

---

೭೯. ವಿಶ್ವರೂಪನೇ ! ನಾನು ನಿನ್ನಲ್ಲಿ ಸರ್ವವಿಧದಲ್ಲಿಯೂ ಸಂತುಷ್ಟನಾಗಿರುವೆನು. ನೀನು ನನ್ನ ಪರಮಭಕ್ತನಾಗಿರುವಿ. ಈಗ ಇಷ್ಟವಾದ ವರವನ್ನು ಕೇಳಿಕೋ. ನಮ್ಮಿಬ್ಬರಿಗಿಂತ ಪರಮಾರ್ಥವಾಗಿ ವ್ಯತಿರಿಕ್ತನಾದವನು ಬೇರೊಬ್ಬನಿಲ್ಲ.

೮೦. ಸಮಸ್ತ ಜಗತ್ಸ್ವರೂಪನಾದ ವಿಷ್ಣುವು ಮಹಾದೇವನು ನುಡಿದ ಈ ವಚನವನ್ನು ಕೇಳಿ ಅವನ ಮುಖವನ್ನು ನೋಡುತ್ತಾ ನಿರ್ಮಲವಾದ ವಚನಗಳಿಂದ ಈ ರೀತಿಯಾಗಿ ಹೇಳಿದನು.

೮೧. ಅಜ್ಞನಾದ ನಾನು ಪರಮೇಶ್ವರ ಸ್ವರೂಪನಾದ ಪರಮಾತ್ಮನನ್ನು ಸಾಕ್ಷಾತ್ಕರಿಸುವುದು ಶ್ಲಾಘ್ಯವಾದ ಒಂದು ವರವು. ಇಂತಹ ಉತ್ತಮ ವರವು ನಿನ್ನಿಂದ ಲಭಿಸಿದೆ. ನನಗೆ ನಿನ್ನಲ್ಲಿ ಸ್ಥಿರವಾದ ಭಕ್ತಿಯುಂಟಾಗಲಿ.

೮೨. ಮಹಾದೇವನು ಹಾಗೆಯೇ ಆಗಲೆಂದು ವರವನ್ನು ಕೊಟ್ಟು ಮತ್ತೆ ವಿಷ್ಣುವನ್ನು ಕುರಿತು ಹೇಳಿದನು. ವಿಷ್ಣುವೇ! ನೀನು ಸಮಸ್ತ ಕಾರ್ಯಪ್ರಪಂಚಕ್ಕೆ ಕಾರಣನಾಗಿದ್ದೀಯೆ. ನಾನು ಅಭಿಮಾನಿದೇವತಾರೂಪನಾಗಿದ್ದೇನೆ.

ತ್ವನ್ಮಯಂ ಮನ್ಮಯಂ ಚೈವ ಸರ್ವಮೇತನ್ನ ಸಂಶಯಃ ।
ಭವಾನ್ ಸೋಮಸ್ತ್ವಹಂ ಸೂರ್ಯೋ ಭವಾನ್ರಾತ್ರಿರಹಂ ದಿನಮ್ ॥

ಭವಾನ್ ಪ್ರಕೃತಿರವ್ಯಕ್ತಮಹಂ ಪುರುಷ ಏವ ಚ ।
ಭವಾನ್ ಜ್ಞಾನಮಹಂ ಜ್ಞಾತಾ ಭವಾನ್ ಮಾಯಾಹಮೀಶ್ವರಃ ॥೮೪॥

ಭವಾನ್ ವಿದ್ಯಾತ್ಮಿಕಾ ಶಕ್ತಿಃ ಶಕ್ತಿಮಾನಹಮೀಶ್ವರಃ ।
ಯೋऽಹಂ ಸ ನಿಷ್ಕಲೋ ದೇವಃ ಸೋऽಸಿ ನಾರಾಯಣಃ ಪ್ರಭುಃ॥೮೫॥

ಏಕೀಭಾವೇನ ಪಶ್ಯಂತಿ ಯೋಗಿನೋ ಬ್ರಹ್ಮವಾದಿನಃ ।
ತ್ವಾಮನಾಶ್ರಿತ್ಯ ವಿಶ್ವಾತ್ಮನ್ನ ಯೋಗೀ ಮಾಮುಪೈಷ್ಯತಿ ।
ಪಾಲಯೈತಜ್ಜಗತ್ ಕೃತ್ಸ್ನಂ ಸದೇವಾಸುರಮಾನುಷಮ್ ॥ ೮೬ ॥

---

೮೩. ಈ ಸಮಸ್ತ ಪ್ರಪಂಚವು ನಿನ್ನ ಅಂಶದಿಂದಲೂ ಮತ್ತು ನನ್ನ ಅಂಶದಿಂದಲೂ ಕೂಡಿರುವುದು. ಈ ಅಂಶದಲ್ಲಿ ಸಂಶಯವಿಲ್ಲ. ನೀನು ಸೋಮಸ್ವರೂಪನೂ ರಾತ್ರಿಸ್ವರೂಪನೂ ಆಗಿದ್ದೀಯೇ. ನಾನು ಸೂರ್ಯ ಮತ್ತು ದಿನದ ಸ್ವರೂಪದಿಂದ ಕೂಡಿದ್ದೇನೆ.

೮೪. ನೀನು ಅವ್ಯಾಕೃತ ಅಥವಾ ಅತೀಂದ್ರಿಯವಾದ ಪ್ರಕೃತಿಸ್ವರೂಪನು. ನಾನು ಪುರುಷನು. ನೀನು ಜ್ಞಾನರೂಪನು. ನಾನು ಜ್ಞಾತೃಸ್ವರೂಪನು. ಮತ್ತು ನೀನು ಮಾಯಾತ್ಮಕನು. ನಾನು ಮಾಯಾವಿಯಾದ ಈಶ್ವರನು.

೮೫. ನೀನು ತತ್ವಜ್ಞಾನರೂಪವಾದ ಶಕ್ತ್ಯಾತ್ಮಕನಾಗಿದ್ದೀಯೆ. ನಾನು ಆ ಶಕ್ತಿಯನ್ನು ಧರಿಸಿದ ಈಶ್ವರಸ್ವರೂಪನು. ನಿರವಯವನಾದ ಮತ್ತು ದೇವೋತ್ತಮನಾದ ನಾನೇ ನಾರಾಯಣ ಮೂರ್ತಿಯಿಂದ ಜಗತ್ಪ್ರಭುವಾದ ನೀನಾಗಿದ್ದೀಯೇ.

೮೬. ಬ್ರಹ್ಮವಾದಿಗಳಾದ ಯೋಗಿಗಳು ನಮ್ಮಿಬ್ಬರನ್ನು ಐಕ್ಯಭಾವನೆಯಿಂದ ನೋಡುತ್ತಿರುವರು. ವಿಶ್ವರೂಪಿಯೇ ! ಯೋಗಿಯು ನಿನ್ನನ್ನು ಉಪಾಸನಮಾಡದೇ ನನ್ನ ಸನ್ನಿಧಿಗೆ ಬರಲಾರನು. ಆದುದರಿಂದ ದೇವ ಅಸುರ ಮಾನುಷರಿಂದ ಕೂಡಿದ ಈ ಸಮಸ್ತ ಪ್ರಪಂಚವನ್ನು ಪರಿಪಾಲಿಸು.

ಇತೀದಮುಕ್ತ್ವಾ ಭಗವಾನನಾದಿಃ
ಸ್ವಮಾಯಯಾ ಮೋಹಿತಭೂತಭೇದಃ ।
ಜಗಾಮ ಜನ್ಮರ್ಧಿವಿನಾಶಹೀನಂ
ಧಾಮೈಕಮವ್ಯಕ್ತಮನಂತಶಕ್ತಿಃ ॥ ೮೭ ॥

ಇತಿ ಶ್ರೀ ಕೂರ್ಮಪುರಾಣೇ ನವಮೋಽಧ್ಯಾಯಃ

---

೮೭. ಉತ್ಪತ್ತಿಯಿಲ್ಲದವನೂ ತನ್ನ ಮಾಯೆಯಿಂದ ಸರ್ವಭೂತಗಳಿಗೆ ಮೋಹ ಉಂಟುಮಾಡಿದವನೂ ಅನಂತವಾದ ಶಕ್ತಿ ಸಂಪನ್ನನೂ ಆದ ಪೂಜ್ಯನಾದ ಶಂಕರನು ಈ ಮಾತನ್ನು ಹೇಳಿ ಜನ್ಮ ನಾಶ ವೃದ್ಧಿ ಮುಂತಾದ ವಿಕಾರಗಳಿಂದ ದೂರವಾದ ಮತ್ತು ಸಾಮಾನ್ಯ ಪ್ರಾಣಿಗಳಿಗೆ ಗಮ್ಯವಲ್ಲದ ಅವ್ಯಕ್ತವಾದ ತನ್ನ ಪದವನ್ನು ಸೇರಿದನು.

( ಕೂರ್ಮ ಪುರಾಣದಲ್ಲಿ ಒಂಭತ್ತನೆಯ ಅಧ್ಯಾಯವು ಮುಗಿದುದು )



ಶ್ರೀಃ

# ಕೂರ್ಮಪುರಾಣಂ

## ದಶಮೋಽಧ್ಯಾಯಃ

### (ರುದ್ರಸೃಷ್ಟಿಃ)

**ಕೂರ್ಮ ಉವಾಚ :—**

**ಗತೇ ಮಹೇಶ್ವರೇ ದೇವೇ ಭೂಯ ಏವ ಪಿತಾಮಹಃ ।**
**ತದೇವ ಸುಮಹತ್ಪದ್ಮಂ ಭೇಜೇ ನಾಭಿಸಮುತ್ಥಿತಮ್ ॥ ೧ ॥**

**ಅಥ ದೀರ್ಘೇಣ ಕಾಲೇನ ತತ್ರಾಪ್ರತಿಮಪೌರುಷೌ ।**
**ಮಹಾಸುರೌ ಸಮಾಯಾತೌ ಭ್ರಾತರೌ ಮಧುಕೈಟಭೌ ॥ ೨ ॥**

**ಕ್ರೋಧೇನ ಮಹತಾವಿಷ್ಟೌ ಮಹಾಪರ್ವತವಿಗ್ರಹೌ ।**
**ಕರ್ಣಾಂತರಸಮುದ್ಭೂತೌ ದೇವದೇವಸ್ಯ ಶಾರ್ಙ್ಗಿಣಃ ॥ ೩ ॥**

---

### ಹತ್ತನೆಯ ಅಧ್ಯಾಯವು.

೧. ಕೂರ್ಮಮೂರ್ತಿಯು ಇಂತೆಂದನು:— ಮಹೇಶ್ವರನು ತನ್ನ ದಿವ್ಯ ಸ್ಥಾನಕ್ಕೆ ತೆರಳಲು ಪಿತಾಮಹನಾದ ಬ್ರಹ್ಮನು ವಿಷ್ಣುವಿನ ನಾಭಿಯಲ್ಲಿ ಹುಟ್ಟಿದ ಆ ಕಮಲವನ್ನು ಮತ್ತೆ ಸೇವಿಸಿದನು.

೨. ತರುವಾಯ ಹೆಚ್ಚು ದೀರ್ಘಕಾಲ ಕಳೆಯಲಾಗಿ ನಿರುಪಮವಾದ ಪೌರುಷದಿಂದ ಕೂಡಿದ ಮತ್ತು ಸಹೋದರರಾದ ಮಧು ಕೈಟಭ ಎಂಬ ಇಬ್ಬರು ಮಹಾಸುರರು ಅಲ್ಲಿಗೆ ಬಂದರು.

೩. ಆ ಅಸುರರು ದೇವೋತ್ತಮನಾದ ವಿಷ್ಣುಪರಮಾತ್ಮನ ಕರ್ಣಮಧ್ಯದಿಂದ ಜನಿಸಿದವರೂ ಮಹಾಪರ್ವತಾಕಾರವಾದ ದೇಹವುಳ್ಳವರೂ ಮತ್ತು ಅತಿಶಯವಾದ ಕೋಪಾವೇಶದಿಂದ ಕೂಡಿದವರೂ ಆಗಿದ್ದರು.

ತಾವಾಗತೌ ಸಮೀಕ್ಷ್ಯಾಹ ನಾರಾಯಣಮಜೋ ವಿಭುಃ ।
ತ್ರೈಲೋಕ್ಯಕಂಟಕಾವೇತಾವಸುರೌ ಹಂತುಮರ್ಹಸಿ ॥ ೪ ॥

ತದಸ್ಯ ವಚನಂ ಶ್ರುತ್ವಾ ಹರಿರ್ನಾರಾಯಣಃ ಪ್ರಭುಃ ।
ಆಜ್ಞಾಪಯಾಮಾಸ ತಯೋರ್ವಧಾರ್ಥಂ ಪುರುಷಾವುಭೌ ॥ ೫ ॥

ತದಾಜ್ಞಯಾ ಮಹದ್ಯುದ್ಧಂ ತಯೋಸ್ತಾಭ್ಯಾಮಭೂದ್ದ್ವಿಜಾಃ ।
ವ್ಯಜಯತ್ಕೈಟಭಂ ಜಿಷ್ಣುಃ ವಿಷ್ಣುಶ್ಚ ವ್ಯಜಯನ್ಮಧುಮ್ ॥ ೬ ॥

ತತಃ ಪದ್ಮಾಸನಾಸೀನಂ ಜಗನ್ನಾಥಃ ಪಿತಾಮಹಮ್ ।
ಬಭಾಷೇ ಮಧುರಂ ವಾಕ್ಯಂ ಸ್ನೇಹಾವಿಷ್ಟಮನಾ ಹರಿಃ ॥ ೭ ॥

---

೪. ಜನ್ಮರಹಿತನೂ ಸರ್ವಶಕ್ತನೂ ಆದ ಬ್ರಹ್ಮನು ಆ ಇಬ್ಬರು ಅಸುರರು ಬಂದಿರುವುದನ್ನು ಕಂಡು ಮೂರು ಲೋಕಗಳಿಗೆ ಕಂಟಕರಂತೆ ಇರುವ ಈ ಅಸುರರನ್ನು ನೀನು ಕೊಲ್ಲಲು ಅರ್ಹನಾಗಿದ್ದೀ ಎಂದು ನಾರಾಯಣನಿಗೆ ಹೇಳಿದನು.

೫. ಏಕಾರ್ಣವದಲ್ಲಿ ಶೇಷಶಾಯಿಯೂ ಮತ್ತು ಸರ್ವನಿಯಾಮಕನೂ ಆದ ವಿಷ್ಣುವು ಬ್ರಹ್ಮದೇವನ ವಾಣಿಯನ್ನು ಕೇಳಿ ತನ್ನ ಇಬ್ಬರು ಪುರುಷರನ್ನು ಕುರಿತು ಆ ಇಬ್ಬರು ಅಸುರರನ್ನು ವಧಿಸುವಂತೆ ಆಜ್ಞಾಪಿಸಿದನು.

೬. ದ್ವಿಜೋತ್ತಮರೇ! ಆ ವಿಷ್ಣುವಿನ ಆಜ್ಞೆಯಿಂದ ಆ ಅಸುರರಿಗೂ ಮತ್ತು ಆ ವಿಷ್ಣುಪಕ್ಷದ ಪುರುಷರಿಗೂ ಮಹತ್ತಾದ ಸಂಗ್ರಾಮವು ನಡೆಯಿತು. ಅವರಲ್ಲಿ ಜಿಷ್ಣುವು ಕೈಟಭಾಸುರನನ್ನೂ ವಿಷ್ಣುವು ಮಧು ಅಸುರನನ್ನೂ ಗೆದ್ದರು.

೭. ಅನಂತರದಲ್ಲಿ ಜಗನ್ನಾಥನಾದ ಹರಿಯು ಪದ್ಮಾಸನದಲ್ಲಿ ಕುಳಿತಿರುವ ಪಿತಾಮಹನಾದ ಬ್ರಹ್ಮನಲ್ಲಿ ಪ್ರೀತಿಯಿಂದ ಅರಳಿದ ಮಾನಸ ವುಳ್ಳವನಾಗಿ ಮಧುರವಾದ ಈ ವಚನವನ್ನು ಹೇಳಿದನು.

ಅಸ್ಮಾನ್ಮಯೋಹ್ಯಮಾನಸ್ತ್ವಂ ಪದ್ಮಾದವತರ ಪ್ರಭೋ ।
ನಾಹಂ ಭವಂತಂ ಶಕ್ನೋಮಿ ವೋಢುಂ ತೇಜೋಮಯಂ ಗುರುಮ್ ॥

ತತೋಽವತೀರ್ಯ ವಿಶ್ವಾತ್ಮಾ ದೇಹಮಾವಿಶ್ಯ ಚಕ್ರಿಣಃ ।
ಅವಾಪ್ಯ ವೈಷ್ಣವೀಂ ನಿದ್ರಾಮೇಕೀಭೂತೋಽಥ ವಿಷ್ಣುನಾ ॥ ೯ ॥

ಸಹ ತೇನ ತಥಾವಿಶ್ಯ ಶಂಖಚಕ್ರಗದಾಧರಃ ।
ಬ್ರಹ್ಮಾ ನಾರಾಯಣಾಖ್ಯೋಽಸೌ ಸುಷ್ವಾಪ ಸಲಿಲೇ ತದಾ ॥ ೧೦ ॥

ಸೋಽನುಭೂಯ ಚಿರಂ ಕಾಲಮಾನಂದಂ ಪರಮಾತ್ಮನಃ ।
ಅನಾದ್ಯನಂತಮದ್ವೈತಂ ಸ್ವಾತ್ಮಾನಂ ಬ್ರಹ್ಮಸಂಜ್ಞಿತಮ್ ॥ ೧೧ ॥

---

೮. ಪ್ರಭುವೇ! ತೇಜಸ್ಸಿನಿಂದ ಪೂರ್ಣನೂ ಗುರುತಮವಾದಸ್ವರೂಪವುಳ್ಳವನೂ ಆದ ನಿನ್ನನ್ನು ನಾನು ಹೊತ್ತುಕೊಂಡಿರಲಾರೆನು. ನನ್ನಿಂದ ಧರಿಸಲ್ಪಟ್ಟಿರುವ ಈ ಪದ್ಮಾಸನದಿಂದ ಕೂಡಲೇ ಕೆಳಕ್ಕೆ ಇಳಿ.

೯. ತರುವಾಯ ವಿಶ್ವರೂಪನಾದ ಬ್ರಹ್ಮನು ಅಲ್ಲಿಂದ ಕೆಳಕ್ಕಿಳಿದು ಚಕ್ರಧಾರಿಯಾದ ವಿಷ್ಣುವಿನ ದೇಹವನ್ನು ಹೊಕ್ಕು ಆ ವಿಷ್ಣುವಿನಿಂದ ಐಕ್ಯವನ್ನು ಹೊಂದಿ ವಿಷ್ಣುಮಾಯಾ ನಿರ್ಮಿತವಾದ ನಿದ್ರೆಯನ್ನು ಹೊಂದಿದನು.

೧೦. ಹಾಗೆ ವಿಷ್ಣು ದೇಹದೊಡನೆ ಬ್ರಹ್ಮದೇವನು ಐಕ್ಯಾವೇಶವನ್ನು ಹೊಂದಿ ನಾರಾಯಣ ಎಂಬ ನಾಮಾಂಕಿತನೂ ಶಂಖ ಚಕ್ರ ಗದೆಗಳನ್ನು ಧರಿಸಿದವನೂ ಆಗಿ ಆ ಜಲರಾಶಿಯಲ್ಲಿ ನಿದ್ರೆಮಾಡಿದನು.

೧೧. ಆಗ ಆ ಬ್ರಹ್ಮದೇವನು ಆದಿ ಅಂತಗಳಿಂದ ಶೂನ್ಯನೂ ಅದ್ವಿತೀಯನೂ ಬ್ರಹ್ಮ ಎಂಬ ನಾಮಾಂಕಿತವೂ ಸ್ವಸ್ವರೂಪವೂ ಆದ ಪರಬ್ರಹ್ಮಾನಂದವನ್ನು ಬಹುಕಾಲ ಅನುಭವಿಸಿದನು.

ತತಃ ಪ್ರಭಾತೇ ಯೋಗಾತ್ಮಾ ಭೂತ್ವಾ ದೇವಶ್ಚತುರ್ಮುಖಃ ।
ಸಸರ್ಜ ಸೃಷ್ಟಿಂ ತದ್ರೂಪಾಂ ವೈಷ್ಣವಂ ಭಾವಮಾಶ್ರಿತಃ ॥ ೧೨ ॥

ಪುರಸ್ತಾದಸೃಜದ್ದೇವಃ ಸನಂದಂ ಸನಕಂ ತಥಾ ।
ಋಭುಂ ಸನತ್ಕುಮಾರಂ ಚ ಪೂರ್ವಜಂ ತಂ ಸನಾತನಮ್ ॥ ೧೩ ॥

ತೇ ದ್ವಂದ್ವಮೋಹನಿರ್ಮುಕ್ತಾಃ ಪರಂ ವೈರಾಗ್ಯಮಾಸ್ಥಿತಾಃ ।
ವಿದಿತ್ವಾ ಪರಮಂ ಭಾವಂ ಜ್ಞಾನೇ ವಿದಧಿರೇ ಮತಿಮ್ ॥ ೧೪ ॥

ತೇಷ್ವೇವಂ ನಿರಪೇಕ್ಷೇಷು ಲೋಕಸೃಷ್ಟೌ ಪಿತಾಮಹಃ ।
ಬಭೂವ ನಷ್ಟಚೇತಾ ವೈ ಮಾಯಯಾ ಪರಮೇಷ್ಠಿನಃ ॥ ೧೫ ॥

ತತಃ ಪುರಾಣಪುರುಷೋ ಜಗನ್ಮೂರ್ತಿಃ ಸನಾತನಃ ।
ವ್ಯಾಜಹಾರಾತ್ಮನಃ ಪುತ್ರಂ ಮೋಹನಾಶಾಯ ಪದ್ಮಜಮ್ ॥ ೧೬ ॥

---

೧೨. ತರುವಾಯ ಪ್ರಭಾತ ಕಾಲದಲ್ಲಿ ಚತುರ್ಮುಖನಾದ ಬ್ರಹ್ಮನು ಯೋಗಸ್ವರೂಪವನ್ನು ತಾಳಿ ವಿಷ್ಣುವಿನ ಭಾವವನ್ನು ಆಶ್ರಯಿಸಿ ಅದೇ ರೂಪದ ಸೃಷ್ಟಿಯನ್ನು ನಿರ್ಮಿಸಿದನು.

೧೩. ಆದಿಯಲ್ಲಿ ಬ್ರಹ್ಮದೇವನು ಸನಂದನ ಸನಕ ಋಭು ಸನತ್ಕುಮಾರ ಮತ್ತು ಅಗ್ರಜನಾದ ಸನಾತನ ಎಂಬ ಯೋಗೀಂದ್ರರನ್ನು ಸೃಷ್ಟಿಸಿಡನು.

೧೪. ಆ ಯೋಗೀಂದ್ರರು ಶೀತ ಉಷ್ಣ ಮುಂತಾದ ದ್ವಂದ್ವ ಮೋಹಗಳನ್ನು ಬಿಟ್ಟವರೂ ತೀವ್ರವಾದ ವೈರಾಗ್ಯವನ್ನು ಹೊಂದಿದವರೂ ಆಗಿ ಪಾರಮಾರ್ಥಿಕವಾದ ತತ್ವವನ್ನು ತಿಳಿದು ಅದರ ತತ್ವಜ್ಞಾನದಲ್ಲಿ ಭಾವನೆಯನ್ನಿರಿಸಿದರು.

೧೫. ಆ ಯೋಗೀಂದ್ರರು ಲೋಕದ ಸೃಷ್ಟಿಯನ್ನು ಹೆಚ್ಚಿಸುವುದರಲ್ಲಿ ಅನಾಸಕ್ತರಾಗಿರಲು ಬ್ರಹ್ಮದೇವನು ಪರಮಾತ್ಮನ ಮಾಯೆಯಿಂದ ನಷ್ಟವಾದ ವಿವೇಕ ವುಳ್ಳವನಾಗಿ ಮೋಹಗೊಂಡನು.

೧೬. ಅನಂತರದಲ್ಲಿ ಪುರಾಣಪುರುಷನೂ ಜಗನ್ಮೂರ್ತಿಯೂ ಮತ್ತು ಅನಾದಿಯೂ ಆದ ವಿಷ್ಣು ಪರಮಾತ್ಮನು ತನ್ನ ಪುತ್ರನಿಗೆ ಸಂಭವಿಸಿದ ಮೋಹವನ್ನು ನಾಶಮಾಡಲು ಬ್ರಹ್ಮನಿಗೆ ಹೀಗೆ ಹೇಳಿದನು.

ವಿಷ್ಣುರುವಾಚ :—

ಕಚ್ಚಿನ್ನು ವಿಸ್ಮೃತೋ ದೇವಃ ಶೂಲಪಾಣಿಃ ಸನಾತನಃ ।
ಯದುಕ್ತೋ ವೈ ಪುರಾ ಶಂಭುಃ ಪುತ್ರತ್ವೇ ಭವ ಶಂಕರ ॥ ೧೭ ॥

ಪ್ರೇಯುಕ್ತವಾನ್ ಮನೋ ಯೋಽಸೌ ಪುತ್ರತ್ವೇನ ತು ಶಂಕರಃ ।
ಅವಾಪ ಸಂಜ್ಞಾಂ ಗೋವಿಂದಾತ್ಪದ್ಮಯೋನಿಃ ಪಿತಾಮಹಃ ॥ ೧೮ ॥

ಪ್ರಜಾಃ ಸ್ರಷ್ಟುಂ ಮನಶ್ಚಕ್ರೇ ತಪಃ ಪರಮದುಸ್ತರಮ್ ।
ತಸ್ಯೈವಂ ತಪ್ಯಮಾನಸ್ಯ ನ ಕಿಂಚಿತ್ಸಮವರ್ತತ ॥ ೧೯ ॥

ತತೋ ದೀರ್ಘೇಣ ಕಾಲೇನ ದುಃಖಾತ್ಕ್ರೋಧೋಽಭ್ಯಜಾಯತ ।
ಕ್ರೋಧಾವಿಷ್ಟಸ್ಯ ನೇತ್ರಾಭ್ಯಾಂ ಪ್ರಾಪತನ್ನಶ್ರುಬಿಂದವಃ ॥ ೨೦ ॥

---

೧೭. ವಿಷ್ಣುಪರಮಾತ್ಮನು ಹೀಗೆ ಹೇಳಿದನು:-ಬ್ರಹ್ಮನೇ! ಶೂಲಧಾರಿಯೂ ಸನಾತನನೂ ಆದ ಪರಮೇಶ್ವರಸ್ವಾಮಿಯು ನಿನ್ನಿಂದ ಮರೆಯಲ್ಪಟ್ಟನೇ ? ನಿನ್ನಿಂದ ಆ ಶಂಭುವು ನಿನ್ನ ಪುತ್ರನಾಗಿರುವಂತೆ ಪ್ರಾರ್ಥಿಸಲ್ಪಡಲಿಲ್ಲವೇ. ?

೧೮. ಆಗ ಶಂಕರನು ನಿನಗೆ ಪುತ್ರನಾಗಿ ಜನಿಸಲು ತನ್ನ ಮನಸ್ಸನ್ನು ಪ್ರೇರೇಪಿಸಿದನು. ಗೋವಿಂದನು ನುಡಿದ ಈ ಉಪದೇಶ ವಾಣಿಯಿಂದ ವಿಷ್ಣುನಾಭಿ ಕಮಲದಲ್ಲಿ ಜನಿಸಿದ ಬ್ರಹ್ಮನು ಸ್ಮರಣೆಯನ್ನು ಹೊಂದಿದನು.

೧೯. ಆಗ ಬ್ರಹ್ಮನು ವಿವಿಧರಾದ ಪ್ರಜೆಗಳನ್ನು ಸೃಷ್ಟಿಸಲು ಸಂಕಲ್ಪಿಸಿ ಅತಿ ಕಠಿಣವಾದ ತಪಸ್ಸನ್ನು ಆಚರಿಸಿದನು. ಹೀಗೆ ತಪಿಸುತ್ತಿದ್ದ ಬ್ರಹ್ಮದೇವನಿಂದ ಯಾವುದೊಂದು ವಸ್ತುವೂ ಪ್ರಾದುರ್ಭವಿಸಲಿಲ್ಲ.

೨೦. ಆಮೇಲೆ ಹೀಗೆ ಬಹುಕಾಲ ಕಳೆಯಲು ದುಃಖದಿಂದ ಕ್ರೋಧವು ಜನಿಸಿತು. ಕ್ರೋಧದಿಂದ ಆವಿಷ್ಟನಾದ ಬ್ರಹ್ಮದೇವನ ಕಣ್ಣುಗಳಿಂದ ಕಣ್ಣೀರಿನ ಬಿಂದುಗಳು ಕೆಳಗೆ ಬಿದ್ದುವು.

ತತಸ್ತೇಭ್ಯಃ ಸಮುದ್ಭೂತಾಃ ಭೂತಾಃ ಪ್ರೇತಾಸ್ತದಾಭವನ್ ।
ಸರ್ವಾಂಸ್ತಾನಗ್ರತೋ ದೃಷ್ಟ್ವಾ ಬ್ರಹ್ಮಾತ್ಮಾನಮನಿಂದತ ॥ ೨೧ ॥

ಜಹೌ ಪ್ರಾಣಾಂಶ್ಚ ಭಗವಾನ್ ಕ್ರೋಧಾವಿಷ್ಟಃ ಪ್ರಜಾಪತಿಃ ।
ತದಾ ಪ್ರಾಣಮಯೋ ರುದ್ರಃ ಪ್ರಾದುರಾಸೀತ್ ಪ್ರಭೋರ್ಮುಖಾತ್॥

ಸಹಸ್ರಾದಿತ್ಯಸಂಕಾಶೋ ಯುಗಾಂತದಹನೋಪಮಃ ।
ರುರೋದ ಸುಸ್ವರಂ ಘೋರಂ ದೇವದೇವಃ ಸ್ವಯಂ ಶಿವಃ ॥ ೨೩ ॥

ರೋದಮಾನಂ ತತೋ ಬ್ರಹ್ಮಾ ಮಾರೋದೀರಿತ್ಯಭಾಷತ ।
ರೋದನಾದ್ರುದ್ರ ಇತ್ಯೇವಂ ಲೋಕೇ ಖ್ಯಾತಿಂ ಗಮಿಷ್ಯಸಿ ॥ ೨೪ ॥

---

೨೧. ಅನಂತರದಲ್ಲಿ ಆ ಕಣ್ಣೀರಿನ ಬಿಂದುಗಳಿಂದ ಅನೇಕ ವಿಧದ ಭೂತ ಪ್ರೇತಗಳು ಉತ್ಪತ್ತಿಯನ್ನು ಹೊಂದಿದುವು. ಬ್ರಹ್ಮನು ಆ ಭೂತ ಪ್ರೇತಗಳನ್ನು ನೋಡಿ ತನ್ನನ್ನು ಶೋಚ್ಯನನ್ನಾಗಿ ತಿಳಿದನು.

೨೨. ಮತ್ತು ಭಗವಂತನಾದ ಬ್ರಹ್ಮನು ಅಗಾಧವಾದ ಕೋಪಾವೇಶವುಳ್ಳವನಾಗಿ ಪ್ರಾಣಗಳನ್ನು ತ್ಯಜಿಸಿದನು. ಆಗ ಪ್ರಭುವಿನ ಮುಖದಿಂದ ಪ್ರಾಣಾತ್ಮಕನಾದ ರುದ್ರನು ಪ್ರಾದುರ್ಭವಿಸಿದನು.

೨೩. ಹಾಗೆ ಜನಿಸಿದ ದೇವೋತ್ತಮನಾದ ಶಂಕರನು ಸಾವಿರಾರು ಸೂರ್ಯ ಬಿಂಬಗಳಂತೆ ಥಳಥಳಿಸುವವನೂ ಕಲ್ಪಾಂತಕಾಲದ ಅಗ್ನಿಯಂತೆ ಜ್ವಲಿಸುವವನೂ ಆಗಿ ಸುಸ್ವರವಾಗಿ ಕೇಳುವಂತೆ ಘೋರವಾಗಿ ರೋದನಮಾಡಿದನು.

೨೪. ಆಗ ಬ್ರಹ್ಮನು ರೋದನಮಾಡುತ್ತಿದ್ದ ಶಂಕರನನ್ನು ನೋಡಿ ಅಳಬೇಡ ಎಂದು ಹೇಳಿದನು. ಮತ್ತು ನೀನು ರೋದನಮಾಡಿದ ನಿಮಿತ್ತದಿಂದ ರುದ್ರ ಎಂಬುದಾಗಿ ಲೋಕದಲ್ಲಿ ಪ್ರಸಿದ್ಧಿಯನ್ನು ಗಳಿಸುತ್ತಿ.

ಅನ್ಯಾನಿ ಸಪ್ತ ನಾಮಾನಿ ಪತ್ನೀಃ ಪುತ್ರಾಂಶ್ಚ ಶಾಶ್ವತಾನ್ ।
ಸ್ಥಾನಾನಿ ತೇಷಾಮಷ್ಟಾನಾಂ ದದೌ ಲೋಕಪಿತಾಮಹಃ ॥ ೨೫ ॥

ಭವಃ ಶರ್ವಸ್ತಥೇಶಾನಃ ಪಶೂನಾಂ ಪತಿರೇವ ಚ ।
ಭೀಮಶ್ಚೋಗ್ರೋ ಮಹಾದೇವಸ್ತಾನಿ ನಾಮಾನಿ ಸಪ್ತ ವೈ ॥ ೨೬ ॥

ಸೂರ್ಯೋ ಜಲಂ ಮಹೀ ವಹ್ನಿರ್ವಾಯುರಾಕಾಶಮೇವ ಚ ।
ದೀಕ್ಷಿತೋ ಬ್ರಾಹ್ಮಣಶ್ಚಂದ್ರ ಇತ್ಯೇತಾ ಅಷ್ಟಮೂರ್ತಯಃ ॥ ೨೭ ॥

ಸ್ಥಾನೇಷ್ವೇತೇಷು ಯೇ ರುದ್ರಾನ್ ಧ್ಯಾಯಂತಿ ಪ್ರಣಮಂತಿ ಚ ।
ತೇಷಾಮಷ್ಟತನುರ್ದೇವೋ ದದಾತಿ ಪರಮಂ ಪದಮ್ ॥ ೨೮ ॥

ಸುವರ್ಚಲಾ ತಥೈವೋಮಾ ವಿಕೇಶೀ ಚ ಶಿವಾ ತಥಾ ।
ಸ್ವಾಹಾ ದಿಶಶ್ಚ ದೀಕ್ಷಾ ಚ ರೋಹಿಣೀ ಚೇತಿ ಪತ್ನಯಃ ॥ ೨೯ ॥

---

೨೫. ಮತ್ತು ಇತರ ಏಳು ನಾಮಾಂಕನಗಳನ್ನೂ ಶಾಶ್ವತರಾದ ಪತ್ನೀ ಪುತ್ರರನ್ನೂ ಹೊಂದುತ್ತೀ, ಹೀಗೆಂದು ಹೇಳಿ ಲೋಕಕ್ಕೆ ಪಿತಾಮಹನಾದ ಬ್ರಹ್ಮನು ಆ ಎಂಟುಮೂರ್ತಿಗಳಿಗೆ ಸ್ಥಾನಗಳನ್ನು ನಿರ್ಮಿಸಿದನು.

೨೬. ಆ ರುದ್ರಮೂರ್ತಿಗಳಿಗೆ ಭವ ಶರ್ವ ಈಶಾನ ಪಶುಪತಿ ಭೀಮ ಉಗ್ರ ಮತ್ತು ಮಹಾದೇವ ಎಂದು ಕ್ರಮವಾಗಿ ಏಳು ನಾಮಾಂಕನಗಳಾದುವು.

೨೭. ಮತ್ತು ಸೂರ್ಯ ಜಲ ಪೃಥ್ವಿ ಅಗ್ನಿ ವಾಯು ಆಕಾಶ ದೀಕ್ಷಿತನಾದ ವಿಪ್ರ ಮತ್ತು ಚಂದ್ರ ಎಂದು ಮಹೇಶ್ವರನಿಗೆ ಅಷ್ಟಮೂರ್ತಿಗಳು ಕಲ್ಪಿತವಾದುವು.

೨೮. ಈ ಎಂಟು ಸ್ಥಾನಗಳಲ್ಲಿ ರುದ್ರನನ್ನು ಯಾವ ಭಕ್ತರು ಧ್ಯಾನ ಪ್ರಣಾಮಗಳನ್ನು ಮಾಡುವರೋ ಅಷ್ಟಮೂರ್ತಿಯಾದ ಶಂಕರನು ಅವರಿಗೆ ತನ್ನ ಪರಮ ಪದವನ್ನು ಅನುಗ್ರಹಿಸುತ್ತಾನೆ.

೨೯. ಆ ಅಷ್ಟಮೂರ್ತಿಗಳಿಗೆ ಸುವರ್ಚಲಾ, ಉಮಾ, ವಿಕೇಶೀ, ಶಿವಾ, ಸ್ವಾಹಾ, ದಿಕ್, ದೀಕ್ಷಾ ಮತ್ತು ರೋಹಿಣೀ ಎಂಬ ನಾಮಾಂಕಿತರಾದ ಭಾರ್ಯೆಯರು ಇದ್ದರು.

ಶನೈಶ್ಚರಸ್ತಥಾ ಶುಕ್ರೋ ಲೋಹಿತಾಂಗೋ ಮನೋಜವಃ ।
ಸ್ಕಂದಃ ಸರ್ಗೋಽಥ ಸಂತಾನೋ ಬುಧಶ್ಚೈಷಾಂ ಸುತಾಃ ಸ್ಮೃತಾಃ ॥

ಏವಂಪ್ರಕಾರೋ ಭಗವಾನ್ ದೇವದೇವೋ ಮಹೇಶ್ವರಃ ।
ಪ್ರಜಾ ಧರ್ಮಂ ಚ ಕಾಮಂ ಚ ತ್ಯಕ್ತ್ವಾ ವೈರಾಗ್ಯಮಾಶ್ರಿತಃ ॥ ೩೧ ॥

ಆತ್ಮನ್ಯಾಧಾಯ ಚಾತ್ಮಾನಮೈಶ್ವರಂ ಭಾವಮಾಸ್ಥಿತಃ ।
ಪೀತ್ವಾ ತದಕ್ಷರಂ ಬ್ರಹ್ಮ ಶಾಶ್ವತಂ ಪರಮಾಮೃತಮ್ ॥ ೩೨ ॥

ಪ್ರಜಾಃ ಸೃಜೇತಿ ಚಾದಿಷ್ಟೋ ಬ್ರಹ್ಮಣಾ ನೀಲಲೋಹಿತಃ ।
ಸ್ವಾತ್ಮನಾ ಸದೃಶಾನ್ ರುದ್ರಾನ್ ಸಸರ್ಜ ಮನಸಾ ಶಿವಃ ॥ ೩೩ ॥

---

೩೦. ಅವರಲ್ಲಿ ಕ್ರಮವಾಗಿ ಶನೈಶ್ಚರ, ಶುಕ್ರ, ಲೋಹಿತಾಂಗ, ಮನೋಜವ, ಸ್ಕಂದ, ಸರ್ಗ, ಸಂತಾನ ಮತ್ತು ಬುಧ ಎಂದು ಎಂಟು ಮಂದಿ ಪುತ್ರರು ಜನಿಸಿದರೆಂದು ಸ್ಮರಿಸಲ್ಪಟ್ಟಿರುವರು.

೩೧. ಈ ವಿಧವಾದ ಕಲ್ಪನೆಯಿಂದ ಕೂಡಿದ; ಪೂಜ್ಯನಾದ ಮತ್ತು ದೇವೋತ್ತಮನಾದ ಮಹೇಶ್ವರನು ಪ್ರಜೆ, ಧರ್ಮ, ಕಾಮ ಇವುಗಳನ್ನು ಬಿಟ್ಟು ಪರಮವೈರಾಗ್ಯವನ್ನು ಅವಲಂಬಿಸಿದನು.

೩೨. ಮತ್ತು ತನ್ನಲ್ಲಿ ಪರಬ್ರಹ್ಮನ ಐಕ್ಯಭಾವನೆಯನ್ನು ಹೊಂದಿದವನಾಗಿ ತನ್ನ ಚಿತ್ತವನ್ನು ಆ ಬ್ರಹ್ಮತತ್ವದಲ್ಲಿ ಇರಿಸಿ ಅವ್ಯಯವೂ ಶಾಶ್ವತವೂ ಪರಮಾಮೃತಪ್ರಾಯವೂ ಆದ ಬ್ರಹ್ಮವಸ್ತುವನ್ನು ಅನುಭವಿಸಿದನು.

೩೩. ಬ್ರಹ್ಮದೇವನಿಂದ ಹೆಚ್ಚುಮಂದಿ ಪ್ರಜೆಗಳನ್ನು ಸೃಷ್ಟಿಸು ಎಂದು ಆಜ್ಞಾಪಿಸಲ್ಪಟ್ಟ ನೀಲ ಮತ್ತು ಲೋಹಿತ ವರ್ಣದ ಗಾತ್ರವುಳ್ಳ ಶಂಕರನು ಮಾನಸ ಸಂಕಲ್ಪದಿಂದ ತನಗೆ ಸಮಾನರಾದ ರುದ್ರರನ್ನು ಸೃಷ್ಟಿಸಿದನು.

ಕಪರ್ದಿನೋ ನಿರಾತಂಕಾನ್ ನೀಲಕಂಠಾನ್ ಪಿನಾಕಿನಃ ।
ತ್ರಿಶೂಲಹಸ್ತಾನುದ್ರಿಕ್ತಾನ್ ಸದಾನಂದಾಂಸ್ತ್ರಿಲೋಚನಾನ್ ॥೩೪॥

ಜರಾಮರಣನಿರ್ಮುಕ್ತಾನ್ ಮಹಾವೃಷಭವಾಹನಾನ್ ।
ವೀತರಾಗಾಂಶ್ಚ ಸರ್ವಜ್ಞಾನ್ ಕೋಟಿಕೋಟಿಶತಾನ್ ಪ್ರಭುಃ ॥ ೩೫ ॥

ತಾನ್ ದೃಷ್ಟ್ವಾ ವಿವಿಧಾನ್ ರುದ್ರಾನ್ ನಿರ್ಮಲಾನ್ನೀಲಲೋಹಿತಾನ್ ।
ಜರಾಮರಣನಿರ್ಮುಕ್ತಾನ್ ವ್ಯಾಜಹಾರ ಹರಂ ಗುರುಃ ॥ ೩೬ ॥

ಮಾ ಸ್ರಾಕ್ಷೀರೀದೃಶೀರ್ದೇವ ಪ್ರಜಾ ಮೃತ್ಯುವಿವರ್ಜಿತಾಃ ।
ಅನ್ಯಾಃ ಸೃಜಸ್ವ ಭೂತೇಶ ಜನ್ಮಮೃತ್ಯು ಸಮನ್ವಿತಾಃ ॥ ೩೭ ॥

---

೩೪. ಶಂಕರನು ಸೃಷ್ಟಿಸಿದ ರುದ್ರಮೂರ್ತಿಗಳು ಜಟಾಮಂಡಲ, ಕಂಠದಲ್ಲಿ ನೀಲವರ್ಣ,ಹಸ್ತದಲ್ಲಿ ಪಿನಾಕ ತ್ರಿಶೂಲ ಮುಂತಾದ ಆಯುಧ ಮತ್ತು ಲಲಾಟದಲ್ಲಿ ತೃತೀಯಲೋಚನ ಇವುಗಳಿಂದ ಕೂಡಿ ಆತಂಕವಿಲ್ಲದ ಸಂಪೂರ್ಣಾನಂದ ಮಗ್ನರಾಗಿದ್ದರು.

೩೫. ಹಾಗು ಜರಾಮರಣಗಳಿಂದ ವರ್ಜಿತರೂ ವೃಷಭವಾಹನಾರೂಢರೂ ರಾಗದ್ವೇಷಶೂನ್ಯರೂ ಸರ್ವಜ್ಞರೂ ಮತ್ತು ಕೋಟಿ ಕೋಟಿಸಂಖ್ಯೆಯಿಂದ ಕೂಡಿದವರೂ ಆದ ರುದ್ರಮೂರ್ತಿಗಳನ್ನು ಶಂಕರನು ಮುಂಭಾಗದಲ್ಲಿ ನೋಡಿದನು.

೩೬. ಜರಾಮರಣ ವರ್ಜಿತರೂ ನೀಲಲೋಹಿತ ವರ್ಣವುಳ್ಳವರೂ ನಿರ್ಮಲರೂ ಆದ ಆ ವಿವಿಧ ರುದ್ರಮೂರ್ತಿಗಳನ್ನು ಬ್ರಹ್ಮನು ನೋಡಿ ಶಂಕರನನ್ನು ಕುರಿತು ಹೀಗೆ ಹೇಳಿದನು.

೩೭. ಸ್ವಾಮಿಯೇ ! ಮೃತ್ಯುವಿನಿಂದ ನಿರ್ಮುಕ್ತರಾದ ಇಂತಹ ಶಾಶ್ವತ ಪ್ರಜೆಗಳನ್ನು ಇನ್ನು ಮುಂದೆ ಸೃಷ್ಟಿಮಾಡಬೇಡ. ಭೂತಪತಿಯೇ ! ಜನನಮರಣಗಳಿಂದ ಕೂಡಿದ ಬೇರೆ ಪ್ರಜೆಗಳನ್ನು ಸೃಷ್ಟಿಸು.

ತತಸ್ತಮಾಹ ಭಗವಾನ್ ಕಪರ್ದೀ ಕಾಮಶಾಸನಃ ।
ನಾಸ್ತಿ ಮೇ ತಾದೃಶಃ ಸರ್ಗಃ ಸೃಜ ತ್ವಂ ವಿವಿಧಾಃ ಪ್ರಜಾಃ ॥ ೩೮ ॥

ತತಃ ಪ್ರಭೃತಿ ದೇವೋಽಸೌ ನ ಪ್ರಸೂತೇ ಶುಭಾಃ ಪ್ರಜಾಃ ।
ಸ್ವಾತ್ಮಜೈರೇವ ತೈ ರುದ್ರೈರ್ನಿವೃತ್ತಾತ್ಮಾ ಹ್ಯತಿಷ್ಠತ ॥ ೩೯ ॥

ಸ್ಥಾಣುತ್ವಂ ತೇನ ತಸ್ಯಾಸೀದ್ದೇವದೇವಸ್ಯ ಶೂಲಿನಃ ।
ಜ್ಞಾನಂ ವೈರಾಗ್ಯಮೈಶ್ವರ್ಯಂ ತಪಃ ಸತ್ಯಂ ಕ್ಷಮಾ ಧೃತಿಃ ॥ ೪೦ ॥

ದ್ರಷ್ಟೃತ್ವಮಾತ್ಮಸಂಬೋಧೋ ಹ್ಯಧಿಷ್ಠಾತೃತ್ವಮೇವ ಚ ।
ಅವ್ಯಯಾನಿ ದಶೈತಾನಿ ನಿತ್ಯಂ ತಿಷ್ಠಂತಿ ಶಂಕರೇ ॥ ೪೧ ॥

---

೩೮. ಅನಂತರದಲ್ಲಿ ಷಡ್ಗುಣೈಶ್ವರ್ಯಸಂಪನ್ನನೂ ಕಾಮದೇವನನ್ನು ನಿಗ್ರಹಿಸಿದವನೂ ಆದ ಮಹೇಶ್ವರನು ಬ್ರಹ್ಮನಿಗೆ ಇಂತೆಂದನು. ಜನನಮರಣ ಗಳಿಂದ ಕೂಡಿದ ಪ್ರಜಾಸೃಷ್ಟಿಯು ನನ್ನಿಂದ ಆಗಲಾರದು. ಅಂತಹ ವಿವಿಧಪ್ರಜೆ ಗಳನ್ನು ನೀನು ಸೃಷ್ಟಿಮಾಡು.

೩೯. ಆ ಮೊದಲುಗೊಂಡು ಈ ಮಹೇಶ್ವರಸ್ವಾಮಿಯು ಅದುವರೆಗೆ ಉತ್ಪನ್ನ ರಾದ ತನ್ನ ಪುತ್ರರಾದ ರುದ್ರಮೂರ್ತಿಗಳೊಂದಿಗೆ ನಿವೃತ್ತಿಮಾರ್ಗವನ್ನು ಹೊಂದಿದ ಮಾನಸವುಳ್ಳವನಾಗಿ ಮಂಗಳಮಯರಾದ ಪ್ರಜೆಗಳನ್ನು ಸೃಷ್ಟಿಸದೆ ಸುಮ್ಮನಾದನು.

೪೦. ತ್ರಿಶೂಲಧಾರಿಯೂ ದೇವೋತ್ತಮನೂ ಆದ ಶಂಕರನು ಸೃಷ್ಟಿ ವ್ಯಾಪಾರವನ್ನು ಬಿಟ್ಟು ಸುಮ್ಮನೆ ನಿಂತಿರುವುದರಿಂದ ಸ್ಥಾಣು ಎಂದು ಪ್ರಸಿದ್ಧನಾದನು. ಆ ಸ್ವಾಮಿಯಲ್ಲಿ ಜ್ಞಾನ ವೈರಾಗ್ಯ ಐಶ್ವರ್ಯ ತಪಸ್ಸು ಸತ್ಯ ಕ್ಷಮೆ ಮತ್ತು ಧೈರ್ಯ ಎಂಬ ಸದ್ಗುಣಗಳು ಪ್ರಕಾಶವಾದುವು.

೪೧. ಹಾಗು ದೃಷ್ಟೃತ್ವಶಕ್ತಿ ಆತ್ಮಜ್ಞಾನ ನಿಯಾಮಕತ್ವ ಎಂಬ ಮೂರು ಗುಣವಿಶೇಷಗಳು ಸೇರಿ ಒಟ್ಟಾಗಿ ಹತ್ತು ಅವ್ಯಯಗುಣಗಳು ಶಂಕರನಲ್ಲಿ ಸಂತತವಾಗಿ ಪ್ರಕಾಶಿಸುತ್ತವೆ.

ಏವಂ ಸ ಶಂಕರಃ ಸಾಕ್ಷಾತ್ ಪಿನಾಕೀ ಪರಮೇಶ್ವರಃ ।
ತತಃ ಸ ಭಗವಾನ್ ಬ್ರಹ್ಮಾ ವೀಕ್ಷ್ಯ ದೇವಂ ತ್ರಿಲೋಚನಮ್ ॥ ೪೨ ॥

ಸಹೈವ ಮಾನಸೈ ರುದ್ರೈಃ ಪ್ರೀತಿವಿಸ್ಫಾರಲೋಚನಃ ।
ಜ್ಞಾತ್ವಾ ಪರತರಂ ಭಾವಮೈಶ್ವರಂ ಜ್ಞಾನಚಕ್ಷುಷಾ ॥ ೪೩ ॥

ತುಷ್ಟಾವ ಜಗತಾಮೀಶಂ ಕೃತ್ವಾ ಶಿರಸಿ ಚಾಂಜಲಿಮ್ ।

ಬ್ರಹ್ಮೋವಾಚ :—

ನಮಸ್ತೇಽಸ್ತು ಮಹಾದೇವ ನಮಸ್ತೇ ಪರಮೇಶ್ವರ ॥ ೪೪ ॥

ನಮಃ ಶಿವಾಯ ದೇವಾಯ ನಮಸ್ತೇ ಬ್ರಹ್ಮರೂಪಿಣೇ ।
ನಮೋಽಸ್ತು ತೇ ಮಹೇಶಾಯ ನಮಃ ಶಾಂತಾಯ ಹೇತವೇ ॥ ೪೫ ॥

---

೪೨. ಈ ರೀತಿಯಾಗಿ ಪಿನಾಕಾಯುಧಧಾರಿಯಾದ ಶಂಕರನು ಸಾಕ್ಷಾತ್ ಪರಮೇಶ್ವರ ರೂಪವಾಗಿ ಗೋಚರವಾದನು. ತರುವಾಯ ಪೂಜ್ಯನಾದ ಆ ಬ್ರಹ್ಮ ದೇವನು ಮೂರು ಕಣ್ಣುಗಳಿಂದ ಕೂಡಿದ ಮಹೇಶ್ವರನನ್ನು ನೋಡಿದನು.

೪೩. ಆ ಶಂಕರನಿಂದ ಸಂಕಲ್ಪಮಾತ್ರದಿಂದ ಜನಿಸಿದ ರುದ್ರಮೂರ್ತಿಗಳನ್ನು ಪ್ರೀತಿಯಿಂದ ಅರಳಿದ ಕಣ್ಣುಗಳಿಂದ ನೋಡಿ ಆ ಮೂರ್ತಿಯಲ್ಲಿ ತನ್ನ ಜ್ಞಾನದೃಷ್ಟಿಯಿಂದ ಸರ್ವೋತ್ತಮವಾದ ಬ್ರಹ್ಮಭಾವವನ್ನಿಟ್ಟನು.

೪೪. ಮತ್ತು ಜಗದೀಶ್ವರನನ್ನು ತನ್ನ ಶಿರದಲ್ಲಿರಿಸಿದ ಪ್ರಣಾಮಾಂಜಲಿಯುಳ್ಳವನಾಗಿ ಸ್ತೋತ್ರಮಾಡಿದನು. ಬ್ರಹ್ಮದೇವನು ಇಂತೆಂದನು :—ದೇವೋತ್ತಮನೇ ಮತ್ತು ಪರಮೇಶ್ವರನೇ, ನಿನ್ನನ್ನು ಭಕ್ತಿಯಿಂದ ವಂದಿಸುವೆನು.

೪೫. ಮಂಗಳಕರನಾದ ಸ್ವಾಮಿಗೆ ನಮಸ್ಕಾರವು. ಪರಬ್ರಹ್ಮ ಸ್ವರೂಪಿಯಾದ ದೇವನಿಗೆ ನಮಸ್ಕಾರವು. ಸರ್ವೇಶ್ವರನಾದ ನಿನಗೆ ನಮಸ್ಕಾರವು ಮತ್ತು ಶಾಂತರೂಪನೂ ಮತ್ತು ಜಗತ್ಕಾರಣನೂ ಆದ ನಿನಗೆ ನಮಸ್ಕಾರವು.

ಪ್ರಧಾನಪುರುಷೇಶಾಯ ಯೋಗಾಧಿಪತಯೇ ನಮಃ ।
ನಮಃ ಕಾಲಾಯ ರುದ್ರಾಯ ಮಹಾಗ್ರಾಸಾಯ ಶೂಲಿನೇ ॥ ೪೬ ॥

ನಮಃ ಪಿನಾಕಹಸ್ತಾಯ ತ್ರಿನೇತ್ರಾಯ ನಮೋ ನಮಃ ।
ನಮಸ್ತ್ರಿಮೂರ್ತಯೇ ತುಭ್ಯಂ ಬ್ರಹ್ಮಣೇ ಜನಕಾಯ ತೇ ॥ ೪೭ ॥

ಬ್ರಹ್ಮವಿದ್ಯಾಧಿಪತಯೇ ಬ್ರಹ್ಮವಿದ್ಯಾಪ್ರದಾಯ ತೇ ।
ನಮೋ ವೇದರಹಸ್ಯಾಯ ಕಾಲಕಾಲಾಯ ತೇ ನಮಃ ॥ ೪೮ ॥

ವೇದಾಂತಸಾರಸಾರಾಯ ನಮೋ ವೇದಾತ್ಮಮೂರ್ತಯೇ ।
ನಮೋ ಬುದ್ಧಾಯ ರುದ್ರಾಯ ಯೋಗಿನಾಂ ಗುರವೇ ನಮಃ ॥ ೪೯ ॥

---

೪೬. ಪ್ರಧಾನ ಮತ್ತು ಪುರುಷರಿಗೆ ಈಶ್ವರನೂ ಯೋಗೇಶ್ವರರಿಗೆ ಅಧಿಪತಿಯೂ ಕಾಲಸ್ವರೂಪನೂ ನಿಖಿಲ ಜಗತ್‌ಸಂಹಾರಕನೂ ಆದ ರುದ್ರಮೂರ್ತಿಗೆ ನಮಸ್ಕಾರವು.

೪೭. ಹಸ್ತದಲ್ಲಿ ಪಿನಾಕಾಯುಧವನ್ನು ಧರಿಸಿದ ದೇವನಿಗೆ ನಮಸ್ಕಾರವು. ಮೂರು ನಯನಗಳಿಂದ ಅಲಂಕೃತನಾದ ಸ್ವಾಮಿಗೆ ನಮಸ್ಕಾರವು. ತ್ರಿಮೂರ್ತಿಸ್ವರೂಪನಾದ ನಿನಗೆ ನಮಸ್ಕಾರವು ಮತ್ತು ಜಗತ್ಕಾರಣ ಬ್ರಹ್ಮಮೂರ್ತಿಯಾದ ನಿನಗೆ ನಮಸ್ಕಾರವು.

೪೮. ಬ್ರಹ್ಮವಿದ್ಯೆಗೆ ಅಧಿಪತಿಯೂ ಬ್ರಹ್ಮವಿದ್ಯೆಯನ್ನು ಅನುಗ್ರಹಿಸುವವನೂ ವೇದಗಳಿಂದ ತಿಳಿಯುವ ರಹಸ್ಯಸ್ವರೂಪವುಳ್ಳವನೂ ಮತ್ತು ಅಂತಕನೂ ಆದ ರುದ್ರನಿಗೆ ನಮಸ್ಕಾರವು.

೪೯. ವೇದಾಂತಗಳ ಸಂಗ್ರಹ ವಿಷಯದಲ್ಲಿ ಸಾರಾಂಶಸ್ವರೂಪನೂ ವೇದರೂಪವಾದ ವಿಗ್ರಹವುಳ್ಳವನೂ ಬೋಧಸ್ವರೂಪನೂ ಮತ್ತು ಯೋಗಿಗಳಿಗೆ ಸದ್ಗುರುಸ್ವರೂಪನೂ ಆದ ರುದ್ರಮೂರ್ತಿಗೆ ವಂದನೆಯು.

ಪ್ರಹೀಣಶೋಕೈರ್ವಿವಿಧೈರ್ಭೂತೈಃ ಪರಿವೃತಾಯ ತೇ ।
ನಮೋ ಬ್ರಹ್ಮಣ್ಯದೇವಾಯ ಬ್ರಹ್ಮಾಧಿಪತಯೇ ನಮಃ ॥ ೫೦ ॥

ತ್ರ್ಯಂಬಕಾಯಾದಿದೇವಾಯ ನಮಸ್ತೇ ಪರಮೇಷ್ಠಿನೇ ।
ನಮೋ ದಿಗ್ವಾಸಸೇ ತುಭ್ಯಂ ನಮೋ ಮುಂಡಾಯ ದಂಡಿನೇ ॥ ೫೧ ॥

ಅನಾದಿಮಲಹೀನಾಯ ಜ್ಞಾನಗಮ್ಯಾಯ ತೇ ನಮಃ ।
ನಮಸ್ತಾರಾಯ ತೀರ್ಥಾಯ ನಮೋ ಯೋಗರ್ಧಿಹೇತವೇ ॥ ೫೨ ॥

ನಮೋ ಧರ್ಮಾದಿಗಮ್ಯಾಯ ಯೋಗಗಮ್ಯಾಯ ತೇ ನಮಃ ।
ನಮಸ್ತೇ ನಿಷ್ಪ್ರಪಂಚಾಯ ನಿರಾಭಾಸಾಯ ತೇ ನಮಃ ॥ ೫೩ ॥

---

೫೦. ಶೋಕವನ್ನು ತ್ಯಜಿಸಿರುವ ಅನೇಕ ವಿಧದ ಭೂತಗಣಗಳಿಂದ ವೇಷ್ಟಿತನೂ, ವೇದಗಳನ್ನು ಉದ್ಧಾರಮಾಡುವ ಸ್ವಾಮಿಯೂ ಮತ್ತು ಚತುರ್ಮುಖ ಬ್ರಹ್ಮನಿಗೆ ಅಧಿಪತಿಯೂ ಆದ ನಿನ್ನನ್ನು ವಂದಿಸುವೆನು.

೫೧. ಮೂರು ಲೋಚನಗಳಿಂದ ವಿರಾಜಿತನೂ, ಆದಿದೇವನೂ ಪೂಜ್ಯಪದದಲ್ಲಿರುವವನೂ, ದಿಗಂಬರನೂ, ಮತ್ತು ಶಿರೋಮುಂಡನ ದಂಡಧಾರಣಾದಿ ಯತಿಗಳ ವ್ರತವನ್ನು ಧರಿಸಿದವನೂ ಆದ ನಿನಗೆ ನಮಸ್ಕಾರವು.

೫೨. ಅನಾದಿಯಾಗಿ ದೋಷಹೀನನೂ, ಜ್ಞಾನದೃಷ್ಟಿಯಿಂದ ಗಮ್ಯನೂ ಆದ ನಿನಗೆ ವಂದನೆಯು. ಸಂಸಾರದುಃಖ ತಾರಕನೂ, ಪರಮಪೂಜ್ಯನೂ ಮತ್ತು ಯೋಗೈಶ್ವರ್ಯ ಮಹಿಮೆಗೆ ಕಾರಣನೂ ಆದ ನಿನಗೆ ನಮಸ್ಕಾರವು.

೫೩. ಧರ್ಮಾದಿಯಾದ ಸತ್ಕರ್ಮದಿಂದ ಲಭ್ಯನೂ, ಯೋಗಾಭ್ಯಾಸದಿಂದ ಪ್ರಾಪ್ಯನೂ, ಪ್ರಪಂಚಾತೀತನೂ, ವಿಕಾರವಾದ ಆಭಾಸವರ್ಜಿತನೂ ಆದ ನಿನಗೆ ನಮಸ್ಕಾರವು.

ಬ್ರಹ್ಮಣೇ ವಿಶ್ವರೂಪಾಯ ನಮಸ್ತೇ ಪರಮಾತ್ಮನೇ ।
ತ್ವಯ್ಯೈವ ಸೃಷ್ಟಮಖಿಲಂ ತ್ವಯ್ಯೇವ ಸಕಲಂ ಸ್ಥಿತಮ್ ॥ ೫೪ ॥

ತ್ವಯಾ ಸಂಹ್ರಿಯತೇ ವಿಶ್ವಂ ಪ್ರಧಾನಾದ್ಯಂ ಜಗನ್ಮಯ ।
ತ್ವಮೀಶ್ವರೋ ಮಹಾದೇವಃ ಪರಂ ಬ್ರಹ್ಮ ಮಹೇಶ್ವರಃ ॥ ೫೫ ॥

ಪರಮೇಷ್ಠೀ ಶಿವಃ ಶಾಂತಃ ಪುರುಷೋ ನಿಷ್ಕಲೋ ಹರಃ ।
ತ್ವಮಕ್ಷರಂ ಪರಂ ಜ್ಯೋತಿಸ್ತ್ವಂ ಕಾಲಃ ಪರಮೇಶ್ವರಃ ॥ ೫೬ ॥

ತ್ವಮೇವ ಪುರುಷೋಽನಂತಃ ಪ್ರಧಾನಂ ಪ್ರಕೃತಿಸ್ತಥಾ ।
ಭೂಮಿರಾಪೋಽನಲೋ ವಾಯುರ್ವ್ಯೋಮಾಹಂಕಾರ ಏವ ಚ ॥ ೫೭ ॥

---

೫೪. ವಿಶ್ವರೂಪವುಳ್ಳ ಬ್ರಹ್ಮಸ್ವರೂಪಿಯಾದ ನಿನಗೆ ನಮಸ್ಕಾರವು. ಪರಮಾತ್ಮನಾದ ನಿನಗೆ ನಮಸ್ಕಾರವು. ಈ ಸಮಸ್ತ ಪ್ರಪಂಚವೂ ನಿನ್ನಿಂದಲೇ ಸೃಷ್ಟಿಸಲ್ಪಟ್ಟಿದೆ. ಮತ್ತು ಸಕಲ ಪ್ರಪಂಚವೂ ನಿನ್ನ ಅಧೀನವಾಗಿಯೇ ಸ್ಥಿತಿಯನ್ನು ಹೊಂದಿದೆ.

೫೫. ಜಗನ್ಮೂರ್ತಿಯೇ ! ಪ್ರಧಾನ ಮುಂತಾದ ಸಮಸ್ತ ವಿಶ್ವವೂ ನಿನ್ನಿಂದಲೇ ಸಂಹರಿಸಲ್ಪಡುತ್ತದೆ. ಮಹೇಶ್ವರನಾದ ನೀನು ಸರ್ವೇಶ್ವರನೂ ಮಹಾದೇವನೂ ಮತ್ತು ಸಾಕ್ಷಾತ್ ಪರಬ್ರಹ್ಮಸ್ವರೂಪನೂ ಆಗಿದ್ದೀ.

೫೬. ಮತ್ತು ನೀನು ಪೂಜ್ಯಪದದಲ್ಲಿರುವವನು, ಮಂಗಳಕರನು, ಶಾಂತರೂಪಿ, ಪೂರ್ಣಾಕಾರ, ನಿಷ್ಕಲ, ಸಂಹಾರಕ, ನಾಶಶೂನ್ಯ, ಸರ್ವೋತ್ಕೃಷ್ಟವಾದ ತೇಜಸ್ಸು, ಕಾಲಸ್ವರೂಪ ಮತ್ತು ಪರಮೇಶ್ವರ ಎಂಬ ಗುಣವಾಚಕಗಳಿಂದ ಸ್ತುತ್ಯನಾಗಿದ್ದೀಯೆ.

೫೭. ನೀನೇ ಪುರುಷ, ಅಂತವಿಲ್ಲದವನು, ಪ್ರಧಾನ, ಪ್ರಕೃತಿ, ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಅಹಂಕಾರ ಮುಂತಾದ ಸರ್ವತತ್ವಾತ್ಮಕನಾಗಿದ್ದೀಯೆ.

ಯಸ್ಯ ರೂಪಂ ನಮಸ್ಯಾಮಿ ಭವಂತಂ ಬ್ರಹ್ಮಸಂಜ್ಞಿತಮ್ ।
ಯಸ್ಯ ದ್ಯೌರಭವನ್ಮೂರ್ಧಾ ಪಾದೌ ಪೃಥ್ವೀ ದಿಶೋ ಭುಜಾಃ ॥ ೫೮ ॥

ಆಕಾಶಮುದರಂ ತಸ್ಮೈ ವಿರಾಜೇ ಪ್ರಣಮಾಮ್ಯಹಮ್ ।
ಸಂತಾಪಯತಿ ಯೋ ನಿತ್ಯಂ ಸ್ವಭಾಭಿರ್ಭಾಸಯನ್ ದಿಶಃ ॥ ೫೯ ॥

ಬ್ರಹ್ಮತೇಜೋಮಯಂ ವಿಶ್ವಂ ತಸ್ಮೈ ಸೂರ್ಯಾತ್ಮನೇ ನಮಃ ।
ಹವ್ಯಂ ವಹತಿ ಯೋ ನಿತ್ಯಂ ರೌದ್ರೀ ತೇಜೋಮಯೀ ತನುಃ ॥ ೬೦ ॥

ಕವ್ಯಂ ಪಿತೃಗಣಾನಾಂ ಚ ತಸ್ಮೈ ವಹ್ನ್ಯಾತ್ಮನೇ ನಮಃ ।
ಆಪ್ಯಾಯಯತಿ ಯೋ ನಿತ್ಯಂ ಸ್ವಧಾಮ್ನಾ ಸಕಲಂ ಜಗತ್ ॥ ೬೧ ॥

---

೫೮. ಬ್ರಹ್ಮ ಎಂಬ ನಾಮಾಂಕಿತವಾಗಿ ಮುಂಭಾಗದಲ್ಲಿರುವ ನಿನ್ನ ರೂಪವನ್ನು ನಮಸ್ಕರಿಸುತ್ತೇನೆ. ನಿನ್ನ ವಿಶ್ವರೂಪಕ್ಕೆ ದ್ಯುಲೋಕವು ಶಿರವಾಗಿಯೂ, ಪೃಥಿವಿಯು ಪಾದರೂಪವಾಗಿಯೂ ಮತ್ತು ದಿಕ್ಕುಗಳು ಭುಜಗಳಾಗಿಯೂ ಇವೆ.

೫೯. ಮತ್ತು ಆಕಾಶವೆಂಬ ಉದರದಿಂದ ಕೂಡಿದ ಆ ವಿರಾಟರೂಪಿಯಾದ ನಿನಗೆ ನಮಸ್ಕಾರಮಾಡುವೆನು. ಸೂರ್ಯನು ತನ್ನ ಕಿರಣ ಸಮೂಹಗಳಿಂದ ದಿಕ್ಕುಗಳನ್ನು ಪ್ರಕಾಶಪಡಿಸುತ್ತಾ ಸಂತತವಾಗಿ ತಪಿಸುತ್ತಿರುವನು.

೬೦. ಬ್ರಹ್ಮನ ತೇಜೋಮಯವಾದ ವಿಶ್ವವನ್ನು ಪ್ರಕಾಶಪಡಿಸಿ ತಪಿಸುತ್ತಿದ್ದ ಸೂರ್ಯಾತ್ಮಕನಾದ ನಿನಗೆ ನಮಸ್ಕಾರವು. ರುದ್ರರೂಪವುಳ್ಳ ತೇಜಃಪುಂಜಮಯವಾದ ಅಗ್ನಿಮೂರ್ತಿಯು ದೇವತೆಗಳಿಗೆ ಹವ್ಯಭಾಗವನ್ನು ಒಪ್ಪಿಸುವುದು.

೬೧. ಮತ್ತು ಪಿತೃದೇವತಾಗಣಕ್ಕೆ ಕವ್ಯಭಾಗವನ್ನು ಅರ್ಪಿಸುವ ಅಗ್ನಿಸ್ವರೂಪನಾದ ನಿನಗೆ ನಮಸ್ಕಾರವು. ಹಾಗೂ ಚಂದ್ರನು ಅಮೃತಮಯವಾದ ತನ್ನ ತೇಜಸ್ಸಿನಿಂದ ಸಂತತವಾಗಿ ಸಕಲ ಜಗತ್ತನ್ನೂ ಆಪ್ಯಾಯನಮಾಡುತ್ತಾನೆ.

ಹೀಯತೇ ದೇವತಾಸಂಘೈಸ್ತಸ್ಮೈ ಚಂದ್ರಾತ್ಮನೇ ನಮಃ ।
ಬಿಭರ್ತ್ಯಶೇಷಭೂತಾನಿ ಯೋಂತಶ್ಚರತಿ ಸರ್ವದಾ ॥ ೬೨ ॥

ಶಕ್ತಿರ್ಮಾಹೇಶ್ವರೀ ತುಭ್ಯಂ ತಸ್ಮೈ ವಾಯ್ವಾತ್ಮನೇ ನಮಃ ।
ಸೃಜತ್ಯಶೇಷಮೇವೇದಂ ಯಃ ಸ್ವಕರ್ಮಾನುರೂಪತಃ ॥ ೬೩ ॥

ಆತ್ಮನ್ಯವಸ್ಥಿತಸ್ತಸ್ಮೈ ಚತುರ್ವಕ್ತ್ರಾತ್ಮನೇ ನಮಃ ।
ಯಃ ಶೇತೇ ಶೇಷಶಯನೇ ವಿಶ್ವಮಾವೃತ್ಯ ಮಾಯಯಾ ॥ ೬೪ ॥

ಸ್ವಾತ್ಮಾನುಭೂತಿಯೋಗೇನ ತಸ್ಮೈ ವಿಷ್ಣ್ವಾತ್ಮನೇ ನಮಃ ।
ಬಿಭರ್ತಿ ಶಿರಸಾ ನಿತ್ಯಂ ದ್ವಿಸಪ್ತಭುವನಾತ್ಮಕಮ್ ॥ ೬೫ ॥

---

೬೨. ಮತ್ತು ಆ ಚಂದ್ರನು ತಿಥಿಗಳ ಕ್ರಮದಿಂದ ದೇವತೆಗಳಿಂದ ಪಾನ ಮಾಡಲ್ಪಡುತ್ತಾನೆ. ಅಂತಹ ಚಂದ್ರಸ್ವರೂಪಿಯಾದ ನಿನಗೆ ನಮಸ್ಕಾರವು. ಮತ್ತು ಸಮಸ್ತ ಭೂತಗಳಲ್ಲಿ ವಾಯುಮೂರ್ತಿಯು ಸರ್ವಕಾಲದಲ್ಲಿಯೂ ಸಂಚರಿಸುತ್ತಾ ಸರ್ವಭೂತಗಳನ್ನೂ ಪೋಷಿಸುತ್ತದೆ.

೬೩. ಹಾಗೆ ವಾಯುವಿನಲ್ಲಿ ಅಂತರ್ಗತವಾದ ಮಾಹೇಶ್ವರಶಕ್ತಿರೂಪವಾದ ನಿನಗೆ ನಮಸ್ಕಾರವು. ಬ್ರಹ್ಮದೇವನು ಆಯಾಯ ಕರ್ಮಾನುಸಾರವಾಗಿ ಸೃಜ್ಯ ವಾದ ಪ್ರಾಣಿಗಳನ್ನು ಸೃಷ್ಟಿಮಾಡುತ್ತಾನೆ.

೬೪. ಮತ್ತು ಸ್ವಸ್ವರೂಪವಾದ ನಿನ್ನ ಆತ್ಮದಲ್ಲಿ ವಾಸಮಾಡುವ ಚತು ರ್ಮುಖ ಬ್ರಹ್ಮನಿಗೆ ನಮಸ್ಕಾರವು. ಹಾಗೆಯೇ ಆದಿಶೇಷನ ಶಯನದಲ್ಲಿ ಆತ್ಮ ಮಾಯೆಯಿಂದ ವಿಶ್ವಮಾಯೆಯನ್ನು ಆವರಿಸಿ ಮಹಾವಿಷ್ಣುವು ಶಯನಮಾಡಿದ್ದಾನೆ.

೬೫. ತನ್ನ ಆತ್ಮಾನುಭವದ ಮಾಯೆಯಿಂದ ಪಾಲನ ಕಾರ್ಯವನ್ನು ನಿರ್ವ ಹಿಸುವ ವಿಷ್ಣುರೂಪಿಯಾದ ನಿನಗೆ ನಮಸ್ಕಾರವು. ಮತ್ತು ಆದಿಶೇಷ ರೂಪದಿಂದ ಚತುರ್ದಶಭುವನಗಳನ್ನು ನಿತ್ಯವೂ ತಲೆಯಲ್ಲಿ ಹೊತ್ತುಕೊಂಡಿದ್ದಿ.

ಬ್ರಹ್ಮಾಂಡಂ ಯೋಽಖಿಲಾಧಾರಸ್ತಸ್ಮೈ ಶೇಷಾತ್ಮನೇ ನಮಃ ।
ಯಃ ಪರಾಂತೇ ಪರಾನಂದಂ ಪೀತ್ವಾ ದೇವ್ಯೈಕಸಾಕ್ಷಿಕಮ್ ॥ ೬೬ ॥

ನೃತ್ಯತ್ಯನಂತಮಹಿಮಾ ತಸ್ಮೈ ರುದ್ರಾತ್ಮನೇ ನಮಃ ।
ಯೋಽಂತರಾ ಸರ್ವಭೂತಾನಾಂ ನಿಯಂತಾ ತಿಷ್ಠತೀಶ್ವರಃ ॥ ೬೭ ॥

ಯಸ್ಯ ಕೇಶೇಷು ಜೀಮೂತಾ ನದ್ಯಃ ಸರ್ವಾಂಗಸಂಧಿಷು ।
ಕುಕ್ಷೌ ಸಮುದ್ರಾಶ್ಚತ್ವಾರಸ್ತಸ್ಮೈ ತೋಯಾತ್ಮನೇ ನಮಃ ॥ ೬೮ ॥

ತಂ ಸರ್ವಸಾಕ್ಷಿಣಂ ದೇವಂ ನಮಸ್ಯೇ ವಿಶ್ವತಸ್ತನುಮ್ ।
ಯಂ ವಿನಿದ್ರಾ ಜಿತಶ್ವಾಸಾಃ ಸಂತುಷ್ಟಾಃ ಸಮದರ್ಶಿನಃ ॥ ೬೯ ॥

---

೬೬. ಮಹತ್ತಾದ ಬ್ರಹ್ಮಾಂಡವನ್ನು ಶಿರಸ್ಸಿನಿಂದ ಧರಿಸಿ ಸರ್ವಾಧಾರನೆಂದೆನಿಸಿದ ಆದಿಶೇಷನಾದ ನಿನಗೆ ನಮಸ್ಕಾರವು. ಮತ್ತು ರುದ್ರನು ಪ್ರಳಯಕಾಲದಲ್ಲಿ ಮಾತ್ರ ಗೋಚರವಾಗುವ ಪರಮಾನಂದವನ್ನು ಪಾನಮಾಡುವನು.

೬೭. ಹಾಗೂ ಅಪಾರವಾದ ಮಹಿಮೆಯಿಂದ ಕೂಡಿ ನೃತ್ಯವಾಡುತ್ತಿದ್ದ ರುದ್ರಮೂರ್ತಿಗೆ ನಮಸ್ಕಾರವು. ಅದರಂತೆ ಜಲದೇವತೆಯಾಗಿ ಸರ್ವಭೂತಗಳ ಹೃದಯದಲ್ಲಿ ಮಹೇಶ್ವರನು ಪ್ರಾಣಿಗಳನ್ನು ನಿಯಮಿಸುತ್ತಿರುವನು.

೬೮. ಯಾವ ವಿಶ್ವರೂಪನ ಕೇಶಸ್ಥಾನದಲ್ಲಿ ಮೇಘಗಳೂ ಸಮಸ್ತ ಅಂಗಗಳ ಸಂಧಿಬಂಧಗಳಲ್ಲಿ ನದಿಗಳೂ ಉದರದಲ್ಲಿ ನಾಲ್ಕು ಸಮುದ್ರಗಳೂ ವಾಸಮಾಡಿವೆಯೋ ಅಂತಹ ಜಲರೂಪಿಯಾದ ನಿನಗೆ ನಮಸ್ಕಾರವು.

೬೯. ಸಮತ್ವದರ್ಶನವುಳ್ಳ ಸಂತುಷ್ಟಚಿತ್ತರಾದ ಪ್ರಾಣಾಯಾಮಮಾಡಿದ ಮತ್ತು ನಿದ್ರೆಯನ್ನು ತ್ಯಜಿಸಿದ ಯೋಗಿಗಳು ಸರ್ವಸಾಕ್ಷಿಯೂ ವಿಶ್ವರೂಪಿಯೂ ಆದ ದೇವನನ್ನು ಸಾಕ್ಷಾತ್ಕರಿಸುತ್ತಾರೆ. ಆ ಸ್ವಾಮಿಯನ್ನು ನಾನು ವಂದಿಸುವೆನು.

ಜ್ಯೋತಿಃ ಪಶ್ಯಂತಿ ಯುಂಜಾನಾಸ್ತಸ್ಮೈ ಯೋಗಾತ್ಮನೇ ನಮಃ ।
॥ಯಯಾ ಸಂತರತೇ ಮಾಯಾಂ ಯೋಗೀ ಸಂಕ್ಷೀಣಕಲ್ಮಷಃ ॥ ೨೦ ॥

ಅಪಾರತರಪರ್ಯಂತಾಂ ತಸ್ಮೈ ವಿದ್ಯಾತ್ಮನೇ ನಮಃ ।
॥ಯಸ್ಯ ಭಾಸಾ ವಿಭಾತ್ಯರ್ಕೋ ಮಹೋ ಯತ್ತಮಸಃ ಪರಮ್ ॥ ೨೧ ॥

ಪ್ರಪದ್ಯೇ ತತ್ಪರಂ ತತ್ತ್ವಂ ತದ್ರೂಪಂ ಪಾರಮೇಶ್ವರಮ್ ।
ನಿತ್ಯಾನಂದಂ ನಿರಾಧಾರಂ ನಿಷ್ಕಲಂ ಪರಮಂ ಶಿವಮ್ ॥ ೨೨ ॥

ಪ್ರಪದ್ಯೇ ಪರಮಾತ್ಮಾನಂ ಭವಂತಂ ಪರಮೇಶ್ವರಮ್ ।
ಏವಂ ಸ್ತುತ್ವಾ ಮಹಾದೇವಂ ಬ್ರಹ್ಮಾ ತದ್ಭಾವಭಾವಿತಃ ॥ ೨೩ ॥

---

೨೦. ಯೋಗಾಭ್ಯಾಸ ತತ್ಪರರೂ ಯೋಗಮಹಿಮೆಯಿಂದ ಅಖಂಡಜ್ಯೋತಿ ರೂಪನಾದ ನಿನ್ನನ್ನು ಸಾಕ್ಷಾತ್ಕರಿಸುತ್ತಾರೆ. ಅಂತಹ ಯೋಗಾತ್ಮಕನಿಗೆ ನಮಸ್ಕಾರವು. ಉತ್ತಮಯೋಗಿಯು ಜ್ಞಾನಬಲದಿಂದ ಪಾಪನಿರ್ಮುಕ್ತನಾಗಿ ಮಾಯೆಯನ್ನು ದಾಟುತ್ತಾನೆ.

೨೧. ಯಾವ ವಿದ್ಯಾಮಹಿಮೆಯಿಂದ ಪಾರಪರ್ಯಂತಗಳಿಲ್ಲದ ಮಾಯೆಯನ್ನು ಕಳೆದುಕೊಳ್ಳುತ್ತಾನೋ ಅಂತಹ ತತ್ತ್ವವಿದ್ಯಾರೂಪಿಯಾದ ನಿನಗೆ ನಮಸ್ಕಾರವು. ಸೂರ್ಯನು ಪರಮಾತ್ಮನ ತೇಜೋಂಶದಿಂದ ಪ್ರಕಾಶಿಸುತ್ತಾನೆ. ಅಂತಹ ಪರಮಾತ್ಮ ಪ್ರಕಾಶವು ತಮಸ್ಸಿಗೆ ದೂರವಾದುದು.

೨೨. ಅಂತಹ ಪರಮೇಶ್ವರ ಸ್ವರೂಪವೂ ತಮೋತೀತವೂ ನಿತ್ಯ ಆನಂದ ರೂಪವೂ ಆಧಾರರಹಿತವೂ ಅವಯವಶೂನ್ಯವೂ ಮತ್ತು ಪರಮಕಲ್ಯಾಣಮಯವೂ ಆದ ಪರತತ್ತ್ವವನ್ನು ಶರಣುಹೊಂದಿದ್ದೇನೆ.

೨೩. ಮತ್ತು ಪರಮೇಶ್ವರನೂ ಪರಮಾತ್ಮನೂ ಆದ ನಿನ್ನನ್ನು ಭಜಿಸುತ್ತೇನೆ. ಬ್ರಹ್ಮದೇವನು ಶಂಕರನಲ್ಲಿ ದೃಢವಾದ ಬ್ರಹ್ಮಭಾವನೆಯಿಂದ ಕೂಡಿ ಶಂಕರನನ್ನು ಈ ರೀತಿಯಾಗಿ ಸ್ತುತಿಸಿದನು.

ಪ್ರಾಂಜಲಿಃ ಪ್ರಣತಸ್ತಸ್ಥೌ ಗೃಣನ್ ಬ್ರಹ್ಮ ಸನಾತನಮ್ ।
ತತಸ್ತಸ್ಯ ಮಹಾದೇವೋ ದಿವ್ಯಂ ಯೋಗಮನುತ್ತಮಮ್ ॥ ೭೪ ॥

ಐಶ್ವರಂ ಬ್ರಹ್ಮ ಸದ್ಭಾವಂ ವೈರಾಗ್ಯಂ ಚ ದದೌ ಹರಃ ।
ಕರಾಭ್ಯಾಂ ಕೋಮಲಾಭ್ಯಾಂ ಚ ಸಂಸ್ಪೃಶ್ಯ ಪ್ರಣತಾರ್ತಿಹಾ ॥ ೭೫ ॥

ವ್ಯಾಜಹಾರ ಸ್ಮಯನ್ನೇವ ಸೋಽನುಗೃಹ್ಯ ಪಿತಾಮಹಮ್ ।
ಯತ್ತ್ವಯಾಭ್ಯರ್ಥಿತಂ ಬ್ರಹ್ಮನ್ ಪುತ್ರತ್ವೇ ಭವತಾ ಮಮ ॥ ೭೬ ॥

ಕೃತಂ ಮಯಾ ತತ್ಸಕಲಂ ಸೃಜಸ್ವ ವಿವಿಧಂ ಜಗತ್ ।
ತ್ರಿಧಾ ಭಿನ್ನೋಽಸ್ಮ್ಯಹಂ ಬ್ರಹ್ಮನ್ ಬ್ರಹ್ಮವಿಷ್ಣುಹರಾಖ್ಯಯಾ ॥ ೭೭ ॥

---

೭೪. ಮತ್ತು ಎದುರಿಗೆ ಅಂಜಲಿಯನ್ನು ಕಟ್ಟಿಕೊಂಡು ಅನಾದಿಯಾದ ಬ್ರಹ್ಮ ವಸ್ತುವನ್ನು ಧ್ಯಾನಿಸುತ್ತಾ ನಿಂತುಕೊಂಡನು. ಆಗ ಮಹಾದೇವನು ಆ ಬ್ರಹ್ಮದೇವನಿಗೆ ದಿವ್ಯವೂ ನಿರುಪಮವೂ ಆದ ಯೋಗಬಲವನ್ನು ಕರುಣಿಸಿದನು.

೭೫. ಬ್ರಹ್ಮಸತ್ತಾಸ್ವರೂಪವಾದ ಈಶ್ವರಭಾವವನ್ನೂ ಪರಮವೈರಾಗ್ಯವನ್ನೂ ಕೊಟ್ಟು ಭಕ್ತರ ಆರ್ತಿಯನ್ನು ದೂರಮಾಡುವ ಶಂಕರನು ತನ್ನ ಕೋಮಲಪಾಣಿಗಳಿಂದ ಬ್ರಹ್ಮನನ್ನು ಸ್ಪರ್ಶಿಸಿದನು.

೭೬. ಮತ್ತು ಬ್ರಹ್ಮನಲ್ಲಿ ಅನುಗ್ರಹವಿಟ್ಟವನಾಗಿ ನಗುತ್ತಿರುವವನಂತೆ ಮೃದುವಾಗಿ ಮಾತನಾಡಿದನು. ಬ್ರಹ್ಮನೇ ! ನಾನು ನಿನ್ನ ಪುತ್ರನಾಗಿ ಜನಿಸುವಂತೆ ನಿನ್ನಿಂದ ಪ್ರಾರ್ಥಿಸಲ್ಪಟ್ಟಿತು.

೭೭. ಆದರಂತೆ ನಿನ್ನ ಪ್ರಾರ್ಥನೆಯನ್ನು ನಾನು ಪೂರ್ತಿಗೊಳಿಸಿರುವೆನು. ಇನ್ನುಮುಂದೆ ನೀನು ವಿವಿಧವಾದ ಜಗತ್ತನ್ನು ಸೃಷ್ಟಿಸು. ಬ್ರಹ್ಮದೇವನೇ! ನಾನೊಬ್ಬನೇ ಬ್ರಹ್ಮ ವಿಷ್ಣು ಶಿವ ಎಂದು ತ್ರಿಮೂರ್ತಿಗಳ ಹೆಸರಿನಿಂದ ಬೇರೆಯಾಗಿರುವೆನು.

ಸರ್ಗರಕ್ಷಾಲಯಗುಣೈರ್ನಿಷ್ಕಲಃ ಪರಮೇಶ್ವರಃ ।
ಸ ತ್ವಂ ಮಮಾಗ್ರಜಃ ಪುತ್ರಃ ಸೃಷ್ಟಿಹೇತೋರ್ವಿನಿರ್ಮಿತಃ ॥ ೭೮ ॥

ಮಮೈವ ದಕ್ಷಿಣಾದಂಗಾದ್ವಾಮಾಂಗಾತ್ ಪುರುಷೋತ್ತಮಃ ।
ತಸ್ಯ ದೇವಾಧಿದೇವಸ್ಯ ಶಂಭೋರ್ಹೃದಯದೇಶತಃ ॥ ೭೯ ॥

ಸಂಬಭೂವಾಥ ರುದ್ರೋ ವಾ ಸೋಽಹಂ ತಸ್ಯ ಪರಾ ತನುಃ ।
ಬ್ರಹ್ಮವಿಷ್ಣುಶಿವಾ ಬ್ರಹ್ಮನ್ ಸರ್ಗಸ್ಥಿತ್ಯಂತಹೇತವಃ ॥ ೮೦ ॥

ವಿಭಜ್ಯಾತ್ಮಾನಮೇಕೋಽಪಿ ಸ್ವೇಚ್ಛಯಾ ಶಂಕರಃ ಸ್ಥಿತಃ ।
ತಥಾನ್ಯಾನಿ ಚ ರೂಪಾಣಿ ಮಮ ಮಾಯಾಕೃತಾನಿ ಚ ॥ ೮೧ ॥

---

೭೮. ನಿರವಯವನೂ ಪರಮೇಶ್ವರರೂಪಿಯೂ ಆದ ನಾನು ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೋಸ್ಕರ ತ್ರಿಮೂರ್ತಿಯಾಗಿರುವೆನು. ಅವುಗಳಲ್ಲಿ ಜಗತ್ ಸೃಷ್ಟಿಗೋಸ್ಕರ ನಿರ್ಮಿಸಲ್ಪಟ್ಟ ಬ್ರಹ್ಮನೆಂಬ ನನ್ನ ಅಗ್ರಜ ಪುತ್ರನು ನೀನಾಗಿದ್ದೀಯೆ.

೭೯. ನನ್ನ ದಕ್ಷಿಣಭಾಗದಿಂದ ನೀನು ಜನಿಸಿದ್ದೀಯೆ. ಅಂಗದ ವಾಮ ಭಾಗದಿಂದ ಮಹಾ ವಿಷ್ಣುವು ಜನಿಸಿರುವನು. ದೇವಾದಿ ದೇವನಾದ ಶಂಭುವಿನ ಹೃದಯಸ್ಥಾನದಿಂದ ರುದ್ರನು ಜನಿಸಿರುವನು.

೮೦. ಹೀಗೆ ತ್ರಿಮೂರ್ತಿಗಳ ಉತ್ಪತ್ತಿಗೆ ಕಾರಣವಾದ ಪರಮಾತ್ಮನ ಉತ್ತಮ ವಿಗ್ರಹವು ನಾನಾಗಿದ್ದೇನೆ. ಬ್ರಹ್ಮನೇ ! ಬ್ರಹ್ಮ ವಿಷ್ಣು ಶಿವ ಎಂಬ ತ್ರಿಮೂರ್ತಿಗಳು ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳಿಗೆ ಕ್ರಮವಾಗಿ ಕಾರಣರಾಗಿರುವರು.

೮೧. ಅದ್ವಿತೀಯನಾದ ಶಂಕರನು ಸ್ವೇಚ್ಛೆಯಿಂದ ತನ್ನ ಸ್ವರೂಪವನ್ನು ಮೂರು ಭಾಗವಾಗಿ ನಿರ್ಮಿಸಿಕೊಂಡಿರುವನು. ಅದರಂತೆ ನನ್ನ ಮಾಯೆಯಿಂದ ನಿರ್ಮಿಸಲ್ಪಟ್ಟ ಇತರವಾದ ಅನೇಕ ರೂಪಗಳು ಕಾಣಿಸುತ್ತವೆ.

ಅರೂಪಃ ಕೇವಲಃ ಸ್ವಸ್ಥೋ ಮಹಾದೇವಃ ಸ್ವಭಾವತಃ ।
ಯ ಏಭ್ಯಃ ಪರತೋ ದೇವಸ್ತ್ರಿಮೂರ್ತಿಃ ಪರಮಾ ತನುಃ ॥ ೮೨ ॥

ಮಾಹೇಶ್ವರೀ ತ್ರಿನಯನಾ ಯೋಗಿನಾಂ ಶಾಂತಿದಾ ಸದಾ ।
ತಸ್ಯಾ ಏವ ಪರಾಂ ಮೂರ್ತಿಂ ಮಾಮವೇಹಿ ಪಿತಾಮಹ ॥ ೮೩ ॥

ಶಾಶ್ವತೈಶ್ವರ್ಯವಿಜ್ಞಾನಂ ತೇಜೋಯೋಗಸಮನ್ವಿತಮ್ ।
ಸೋಽಹಂ ಗ್ರಸಾಮಿ ಸಕಲಮಧಿಷ್ಠಾಯ ತಮೋಗುಣಮ್ ॥ ೮೪ ॥

ಕಾಲೋ ಭೂತ್ವಾ ನ ಮನಸಾ ಮಾಮನ್ಯೋಽಭಿಭವಿಷ್ಯತಿ ।
ಯದಾ ಯದಾ ಹಿ ಮಾಂ ನಿತ್ಯಂ ವಿಚಿಂತಯಸಿ ಪದ್ಮಜ ॥ ೮೫ ॥

---

೮೨. ಪರಮಾರ್ಥರೂಪದಿಂದ ರೂಪರಹಿತನೂ, ಅದ್ವಿತೀಯನೂ, ನಿರ್ವಿಕಾರನೂ ಆದ ಮಹಾದೇವನು ಕಲ್ಪಿತರೂಪದಿಂದ ಕೂಡಿದ ಈ ವಸ್ತುವಿನಿಂದ ಸ್ವಭಾವವಾಗಿ ಅತೀತನಾಗಿರುವನು. ಕಲ್ಪಿತ ಮೂರ್ತಿಗಳಲ್ಲಿ ತ್ರಿಮೂರ್ತಿಗಳು ಉತ್ತಮವಾದುವು.

೮೩. ಆ ತ್ರಿಮೂರ್ತಿಗಳಲ್ಲಿ ಯೋಗಿಗಳಿಗೆ ಶಾಂತಿಯನ್ನೀಯುವ ಮೂರು ನಯನಗಳಿಂದ ಕೂಡಿದ ಮಹೇಶ್ವರ ಮೂರ್ತಿಯು ಅತ್ಯುತ್ತಮವು. ಲೋಕಪಿತಾಮಹನೇ ! ಆ ಮಹೇಶ್ವರ ಮೂರ್ತಿಯಲ್ಲಿ ಅಂತರ್ಯಾಮಿಯಾದ ಮೂರ್ತಿಯು ನಾನೇ ಎಂದು ತಿಳಿ.

೮೪. ನಾನು ಶಾಶ್ವತವಾದ ಜ್ಞಾನ ಐಶ್ವರ್ಯಗಳಿಂದ ಕೂಡಿದವನೂ ತೇಜಸ್ಸು ಯೋಗಗಳಿಂದ ಸೇರಿರುವನೂ ಆಗಿದ್ದೇನೆ. ಆ ನಾನು ತಮೋಗುಣವನ್ನು ವಶೀಕರಿಸಿ ಸಮಸ್ತ ಪ್ರಪಂಚವನ್ನೂ ನುಂಗುತ್ತೇನೆ.

೮೫. ಪ್ರಪಂಚವನ್ನು ಸಂಹರಿಸುವ ಕಾಲರೂಪಿಯಾಗಿರುವ ನನ್ನನ್ನು ಇತರರನು ಮನಸ್ಸಿನಿಂದಲೂ ತಿರಸ್ಕರಿಸಲಾರರು. ವಿಷ್ಣುವಿನ ನಾಭಿ ಕಮಲದಲ್ಲಿ ಜನಿಸಿದ ಬ್ರಹ್ಮನೇ ! ನನ್ನನ್ನು ಯಾವಾಗಲೂ ಶಾಶ್ವತನನ್ನಾಗಿ ಧ್ಯಾನಿಸು.

ತದಾ ತದಾ ಮೇ ಸಾನ್ನಿಧ್ಯಂ ಭವಿಷ್ಯತಿ ತವಾನಘ ।
ಏತಾವದುಕ್ತ್ವಾ ಬ್ರಹ್ಮಾಣಂ ಸೋಽಭಿವಂದ್ಯ ಗುರುಂ ಹರಃ ॥ ೮೬ ॥

ಸಹೈವ ಮಾನಸೈಃ ಪುತ್ರೈಃ ಕ್ಷಣಾದಂತರಧೀಯತ ।
ಸೋಽಪಿ ಯೋಗಂ ಸಮಾಸ್ಥಾಯ ಸಸರ್ಜ ವಿವಿಧಂ ಜಗತ್ ॥ ೮೭ ॥

ನಾರಾಯಣಾಖ್ಯೋ ಭಗವಾನ್ ಯಥಾಪೂರ್ವಂ ಪ್ರಜಾಪತಿಃ ।
ಮರೀಚಿಭೃಗ್ವಂಗಿರಸಃ ಪುಲಸ್ತ್ಯಂ ಪುಲಹಂ ಕ್ರತುಮ್ ॥ ೮೮ ॥

ದಕ್ಷಮತ್ರಿಂ ವಸಿಷ್ಠಂ ಚ ಸೋಽಸೃಜದ್ಯೋಗವಿದ್ಯಯಾ ।
ನವ ಬ್ರಹ್ಮಾಣ ಇತ್ಯೇತೇ ಪುರಾಣೇ ನಿಶ್ಚಯೋ ಮತಃ ।
ಸರ್ವೇ ತೇ ಬ್ರಹ್ಮಣಾ ತುಲ್ಯಾಃ ಸಾಧಕಾ ಬ್ರಹ್ಮವಾದಿನಃ ॥ ೮೯ ॥

---

೮೬. ನಿಷ್ಕಳಂಕನೇ! ಆ ಧ್ಯಾನದಿಂದ ನಿನಗೆ ನನ್ನ ಸಾನ್ನಿಧ್ಯವು ಲಭಿಸುವುದು. ಬ್ರಹ್ಮದೇವನಿಗೆ ಈ ವಚನವನ್ನು ಹೇಳಿ ಶಂಕರನು ಗುರುವನ್ನು ವಂದಿಸಿದನು.

೮೭. ಮತ್ತು ನಿಮಿಷಮಾತ್ರದಿಂದ ತನ್ನ ಮಾನಸ ಪುತ್ರರೊಡನೆ ಅಲ್ಲಿಯೇ ಅದೃಶ್ಯನಾದನು. ಬ್ರಹ್ಮದೇವನು ಯೋಗಾಭ್ಯಾಸವನ್ನು ಕೈಗೊಂಡು ಅನೇಕವಿಧವಾದ ಜಗತ್ತನ್ನು ಸೃಷ್ಟಿಮಾಡಿದನು.

೮೮. ನಾರಾಯಣ ಎಂಬ ಹೆಸರುಳ್ಳ ಪೂಜ್ಯನಾದ ಪ್ರಜಾಪತಿ ದೇವನು ಹಿಂದಿನ ಕಲ್ಪದಲ್ಲಿದ್ದಂತೆ ಮರೀಚಿ, ಭೃಗು, ಅಂಗಿರ, ಪುಲಸ್ತ್ಯ, ಪುಲಹ, ಮತ್ತು ಕ್ರತು ಎಂಬ ಪುತ್ರರನ್ನು ಸೃಜಿಸಿದನು.

೮೯. ಹಾಗು ಬ್ರಹ್ಮನು ತನ್ನ ಯೋಗವಿದ್ಯೆಯಿಂದ ದಕ್ಷ, ಅತ್ರಿ, ವಸಿಷ್ಠ ಎಂಬ ಮಾನಸ ಪುತ್ರರನ್ನು ಸೃಷ್ಟಿಸಿದನು. ಈ ಮರೀಚಿ ಮುಂತಾದವರು ಒಂಭತ್ತು ಮಂದಿ ಬ್ರಹ್ಮಪುತ್ರರೆಂದು ಪುರಾಣದಲ್ಲಿ ಪ್ರತಿಪಾದ್ಯವಾದ ನಿರ್ಣಯವು. ಇವರೆಲ್ಲರೂ ಬ್ರಹ್ಮದೇವನಿಗೆ ತುಲ್ಯರೂ, ಸಾಧಕೋತ್ತಮರೂ ಮತ್ತು ಬ್ರಹ್ಮವಾದಿಗಳೂ ಆಗಿರುವರು.

**ಸಂಕಲ್ಪಂ ಚೈವ ಧರ್ಮಂ ಚ ಯುಗಧರ್ಮಾಂಶ್ಚ ಶಾಶ್ವತಾನ್ ।**
**ಸ್ಥಾನಾಭಿಮಾನಿನಃ ಸರ್ವಾನ್ ಯಥಾ ತೇ ಕಥಿತಂ ಪುರಾ ॥ ೯೦ ॥**

**ಇತಿ ಶ್ರೀ ಕೂರ್ಮಪುರಾಣೇ ದಶಮೋಽಧ್ಯಾಯಃ**

---

೯೦. ಮತ್ತು ಸಂಕಲ್ಪ ಧರ್ಮ ಶಾಶ್ವತವಾದ ಯುಗಧರ್ಮ ಆಯಾಯ ಸ್ಥಾನಾಭಿಮಾನಿಗಳಾದ ದೇವತೆ ಮುಂತಾದವರನ್ನು ಹಿಂದೆ ನಾನು ಹೇಳಿರುವಂತೆ ಕ್ರಮವಾಗಿ ಸೃಷ್ಟಿಸಿದನು.

ಕೂರ್ಮಪುರಾಣದಲ್ಲಿ ಹತ್ತನೆಯ ಅಧ್ಯಾಯವು ಸಮಾಪ್ತವು

# ಕೂರ್ಮ ಪುರಾಣಂ

## ಏಕಾದಶೋಽಧ್ಯಾಯಃ

**ಕೂರ್ಮ ಉವಾಚ :—**

ಏವಂ ಸೃಷ್ಟ್ವಾ ಮರೀಚ್ಯಾದೀನ್ ದೇವದೇವಃ ಪಿತಾಮಹಃ ।
ಸಹೈವ ಮಾನಸೈಃ ಪುತ್ರೈಸ್ತತಾಪ ಪರಮಂ ತಪಃ ॥ ೧ ॥

ತಸ್ಯೈವ ತಪತೋ ವಕ್ತ್ರಾದ್ರುದ್ರಃ ಕಾಲಾಗ್ನಿಸಂಭವಃ ।
ತ್ರಿಶೂಲಪಾಣಿರೀಶಾನಃ ಪ್ರಾದುರಾಸೀತ್ತ್ರಿಲೋಚನಃ ॥ ೨ ॥

ಅರ್ಧನಾರೀನರವಪುಃ ದುಷ್ಪ್ರೇಕ್ಷ್ಯೋಽತಿಭಯಂಕರಃ ।
ವಿಭಜಾತ್ಮಾನಮಿತ್ಯುಕ್ತ್ವಾ ಬ್ರಹ್ಮಾ ಚಾಂತರ್ದಧೇ ಭಯಾತ್ ॥ ೩ ॥

---

## ಹನ್ನೊಂದನೆಯ ಅಧ್ಯಾಯವು

೧. ಕೂರ್ಮಮೂರ್ತಿಯು ಇಂತೆಂದನು :— ದೇವೋತ್ತಮನಾದ ಬ್ರಹ್ಮ ದೇವನು ಆದಿಯಲ್ಲಿ ಮರೀಚಿ ಮುಂತಾದ ಪ್ರಜೆಗಳನ್ನು ಸೃಷ್ಟಿಸಿ ಆ ಮಾನಸಪುತ್ರ ರೊಡನೆ ಅತ್ಯಂತ ಕಠಿಣವಾದ ತಪಸ್ಸನ್ನು ಆಚರಿಸಿದನು.

೨. ಹಾಗೆ ತಪಸ್ಸನ್ನು ಆಚರಿಸುತ್ತಿದ್ದ ಆ ಬ್ರಹ್ಮದೇವನ ಮುಖದಿಂದ ಪ್ರಳಯಾಗ್ನಿಯಿಂದ, ಹುಟ್ಟಿದಂತಿರುವ, ಪಾಣಿಯಲ್ಲಿ ತ್ರಿಶೂಲವನ್ನು ಧರಿಸಿರುವ, ಮೂರು ನೇತ್ರಗಳಿಂದ ರಾಜಿಸುವ ಮತ್ತು ಸರ್ವೇಶ್ವರನಾದ ರುದ್ರನು ಪ್ರಾದು ರ್ಭವಿಸಿದನು.

೩. ಆ ರುದ್ರನು ಒಂದು ಅರ್ಧದಲ್ಲಿ ನಾರೀ ರೂಪ ಮತ್ತೊಂದು ಅರ್ಧಭಾಗದಲ್ಲಿ ಪುರುಷರೂಪದಿಂದ ಕೂಡಿ ಪ್ರತ್ಯಕ್ಷವಾಗಿ ನೋಡಲಾಗದಂತೆ ಅತ್ಯಂತ ಭಯಂಕರ ಮೂರ್ತಿಯಾಗಿದ್ದನು. ಆಗ ಬ್ರಹ್ಮನು ನಿನ್ನ ದೇಹವನ್ನು ವಿಭಾಗಮಾಡು ಎಂದು ಹೇಳಿ ಅಲ್ಲೇ ಅಂತರ್ಧಾನ ಹೊಂದಿದನು.

ತಥೋಕ್ತೋಽಸೌ ದ್ವಿಧಾ ಸ್ತ್ರೀತ್ವಂ ಪುರುಷತ್ವಂ ತಥಾಕರೋತ್ ।
ಬಿಭೇದ ಪುರುಷತ್ವಂ ಚ ದಶಧಾ ಚೈಕಧಾ ಪುನಃ ॥ ೪ ॥

ಏಕಾದಶೈತೇ ಕಥಿತಾ ರುದ್ರಾಸ್ತ್ರಿಭುವನೇಶ್ವರಾಃ ।
ಕಪಾಲೀಶಾದಯೋ ವಿಪ್ರಾ ದೇವಕಾರ್ಯೇ ನಿಯೋಜಿತಾಃ ॥ ೫ ॥

ಸೌಮ್ಯಾಸೌಮ್ಯೈಸ್ತಥಾ ಶಾಂತಾಶಾಂತೈಃ ಸ್ತ್ರೀತ್ವಂ ಚ ಸ ಪ್ರಭುಃ ।
ಬಿಭೇದ ಬಹುಧಾ ದೇವಃ ಸ್ವರೂಪೈರಸಿತೈಃ ಸಿತೈಃ ॥ ೬ ॥

ತಾ ವೈ ವಿಭೂತಯೋ ವಿಪ್ರಾ ವಿಶ್ರುತಾಃ ಶಕ್ತಯೋ ಭುವಿ ।
ಲಕ್ಷ್ಮ್ಯಾದಯೋ ಯದ್ವಪುಷಾ ವಿಶ್ವಂ ವ್ಯಾಪ್ನೋತಿ ಶಾಂಕರೀ ॥ ೭ ॥

---

೪. ಹಾಗೆ ಬ್ರಹ್ಮನಿಂದ ಪ್ರಾರ್ಥಿಸಲ್ಪಟ್ಟ ಈಶ್ವರನು ಸ್ತ್ರೀಪುರುಷ ರೂಪಗಳನ್ನು ಬೇರೆಯಾಗಿ ವಿಂಗಡಿಸಿದನು ಮತ್ತು ಆ ಪುರುಷಮೂರ್ತಿಯನ್ನು ಮತ್ತೆ ಹನ್ನೊಂದಾಗಿ ಭಾಗಿಸಿದನು.

೫. ವಿಪ್ರರೇ! ಭಾಗಿಸಲ್ಪಟ್ಟ ಆ ಹನ್ನೊಂದು ಮೂರ್ತಿಗಳು ಮೂರು ಲೋಕಗಳಿಗೆ ಈಶ್ವರರೂ ಕಪಾಲಿ ಈಶ ಮುಂತಾದ ಸಂಜ್ಞಾಂಕಿತರೂ ಆದ ಹನ್ನೊಂದು ರುದ್ರಮೂರ್ತಿಗಳಾಗಿ ದೇವತಾ ಕಾರ್ಯ ಸಾಧನೆಯಲ್ಲಿ ನಿಯಮಿಸಲ್ಪಟ್ಟರು.

೬. ಮತ್ತು ಆ ಸರ್ವೇಶ್ವರನು ಮಿಕ್ಕಿರುವ ಸ್ತ್ರೀ ರೂಪವನ್ನು ಸೌಮ್ಯ ಅಸೌಮ್ಯ ಶಾಂತ ಅಶಾಂತ ನೀಲ ಅನೀಲ ಎಂಬುದಾಗಿ ವಿವಿಧ ರೂಪಗಳಿಂದ ಕೂಡಿ ಅನೇಕ ಸಂಖ್ಯೆಯಾಗಿ ವಿಂಗಡಿಸಿದನು.

೭. ವಿಪ್ರೋತ್ತಮರೇ! ಆ ಮೂರ್ತಿಗಳು ಪರಮಾತ್ಮನ ವಿಭೂತಿಗಳೆಂದೂ ಲಕ್ಷ್ಮೀ ಮುಂತಾದ ಪ್ರಪಂಚದಲ್ಲಿ ವಿಖ್ಯಾತವಾದ ಶಕ್ತಿಗಳೆಂದೂ ಸ್ಮರಿಸಲ್ಪಟ್ಟಿರುತ್ತವೆ. ಆ ಮೂರ್ತಿಗಳ ಮೂಲಕ ಶಾಂಕರೀ ದೇವಿಯು ವಿಶ್ವವನ್ನು ವ್ಯಾಪಿಸಿರುತ್ತಾಳೆ.

ವಿಭಜ್ಯ ಪುನರೀಶಾನೀ ಸ್ವಾತ್ಮಾಂಶಮಕರೋದ್ದ್ವಿಜಾಃ ।
ಮಹಾದೇವನಿಯೋಗೇನ ಪಿತಾಮಹಮುಪಸ್ಥಿತಾ ॥ ೮ ॥

ತಾಮಾಹ ಭಗವಾನ್ ಬ್ರಹ್ಮಾ ದಕ್ಷಸ್ಯ ದುಹಿತಾ ಭವ ।
ಸಾಪಿ ತಸ್ಯ ನಿಯೋಗೇನ ಪ್ರಾದುರಾಸೀತ್ ಪ್ರಜಾಪತೇಃ ॥ ೯ ॥

ನಿಯೋಗಾದ್ಬ್ರಹ್ಮಣೋ ದೇವೀಂ ದದೌ ರುದ್ರಾಯ ತಾಂ ಸತೀಮ್
ದಾಕ್ಷೀಂ ರುದ್ರೋಽಪಿ ಜಗ್ರಾಹ ಸ್ವಕೀಯಾಮೇವ ಶೂಲಭೃತ್ ॥ ೧೦ ॥

ಪ್ರಜಾಪತಿವಿನಿರ್ದೇಶಾತ್ ಕಾಲೇನ ಪರಮೇಶ್ವರೀ ।
ವಿಭಜ್ಯ ಪುನರೀಶಾನೀ ಆತ್ಮಾನಂ ಶಂಕರಾದ್ವಿಭೋಃ ॥ ೧೧ ॥

---

೮. ದ್ವಿಜೋತ್ತಮರೇ ! ಆ ಶಾಂಕರೀ ದೇವಿಯು ತನ್ನ ಮೂರ್ತಿಯನ್ನು ಮತ್ತೊಂದು ಸಲ ವಿಭಾಗಿಸಿ ಮಹಾದೇವನ ಆಜ್ಞೆಯಿಂದ ಬ್ರಹ್ಮದೇವನ ಸನ್ನಿಧಿಗೆ ಸೇರಿದಳು.

೯. ಆಗ ಪೂಜ್ಯನಾದ ಬ್ರಹ್ಮದೇವನು ಅವಳನ್ನು ಕುರಿತು ದಕ್ಷಬ್ರಹ್ಮನಿಗೆ ಪುತ್ರಿಯಾಗಿ ಜನಿಸು ಎಂದು ಹೇಳಿದನು. ಅವಳು ಬ್ರಹ್ಮದೇವನ ಆದೇಶದಂತೆ ದಕ್ಷ ಬ್ರಹ್ಮನಿಂದ ಪ್ರಾದುರ್ಭವಿಸಿದಳು.

೧೦. ಅನಂತರದಲ್ಲಿ ದಕ್ಷಬ್ರಹ್ಮನು ಬ್ರಹ್ಮನ ಅಪ್ಪಣೆಯಂತೆ ತನ್ನ ಕನ್ಯೆಯಾದ ಸತೀ ದೇವಿಯನ್ನು ರುದ್ರನಿಗೆ ಕೊಟ್ಟನು. ತ್ರಿಶೂಲಧಾರಿಯಾದ ರುದ್ರನು ತನ್ನ ಅಂಶವೇ ಆದ ಆ ಸತೀದೇವಿಯನ್ನು ಸ್ವೀಕರಿಸಿದನು.

೧೧. ಬ್ರಹ್ಮನ ಅಪ್ಪಣೆಯಿಂದ ಶಾಂಕರೀದೇವಿಯು ಮತ್ತೆ ಕೆಲವು ಕಾಲ ಕಳೆದನಂತರ ತನ್ನ ಪತಿಯಾದ ಶಂಕರನಿಂದ ಆತ್ಮಾಂಶವನ್ನು ಪೃಥಕ್ಕಾಗಿ ವಿಭಾಗ ಮಾಡಿದಳು.

ಮೇನಾಯಾಮುಭವತ್ ಪುತ್ರೀ ತದಾ ಹಿಮವತಃ ಸತೀ ।
ಸ ಚಾಪಿ ಪರ್ವತವರೋ ದದೌ ರುದ್ರಾಯ ಪಾರ್ವತೀಮ್ ॥ ೧೨ ॥

ಹಿತಾಯ ಸರ್ವದೇವಾನಾಂ ತ್ರೈಲೋಕ್ಯಸ್ಯಾತ್ಮನೋ ದ್ವಿಜಾಃ ।
ಸೈಷಾ ಮಾಹೇಶ್ವರೀ ದೇವೀ ಶಂಕರಾರ್ಧಶರೀರಿಣೀ ॥ ೧೩ ॥

ಶಿವಾ ಸತೀ ಹೈಮವತೀ ಸುರಾಸುರನಮಸ್ಕೃತಾ ।
ತಸ್ಯಾಃ ಪ್ರಭಾವಮತುಲಂ ಸರ್ವೇ ದೇವಾಃ ಸವಾಸವಾಃ ॥ ೧೪ ॥

ವದಂತಿ ಮುನಯೋ ವೇತ್ತಿ ಶಂಕರೋ ವಾ ಸ್ವಯಂ ಹರಿಃ ।
ಏತದ್ವಃ ಕಥಿತಂ ವಿಪ್ರಾಃ ಪುತ್ರತ್ವಂ ಪರಮೇಷ್ಠಿನಃ ॥ ೧೫ ॥

---

೧೨. ಮತ್ತು ಹಿಮವಂತನ ಪತ್ನಿಯಾದ ಮೇನಾದೇವಿಯಲ್ಲಿ ಸತೀದೇವಿಯು ಪುತ್ರಿಯಾಗಿ ಜನಿಸಿದಳು. ಪರ್ವತರಾಜನಾದ ಹಿಮವಂತನು ತನ್ನ ಪುತ್ರಿಯಾದ ಪಾರ್ವತಿಯನ್ನು ಮತ್ತೆ ರುದ್ರನಿಗೆ ಅರ್ಪಿಸಿದನು.

೧೩. ದ್ವಿಜಶ್ರೇಷ್ಠರೇ! ಸಮಸ್ತ ದೇವತೆಗಳಿಗೂ ಮೂರು ಲೋಕಗಳಿಗೂ ತನಗೂ ಹಿತವನ್ನುಂಟುಮಾಡುವುದಕ್ಕೋಸ್ಕರ ಶಂಕರನ ಅರ್ಧಾಂಗದಲ್ಲಿ ವಾಸ ಮಾಡುವ ಮಾಹೇಶ್ವರೀದೇವಿಯು ಈ ರೀತಿಯಾಗಿ ವಿವಿಧರೂಪಗಳನ್ನು ಪರಿಗ್ರಹಿಸಿರುವಳು.

೧೪. ಇಂದ್ರನೇ ಮುಂತಾದ ಸಮಸ್ತ ದೇವತೆಗಳಿಂದ ಮಾತ್ರ ತಿಳಿಯಲ್ಪಡುವ ಅಪಾರ ಮಹಿಮೆಯಿಂದ ಕೂಡಿದ ಮತ್ತು ದೇವ ದಾನವರಿಂದ ವಂದಿಸಲ್ಪಡುವ ಶಾಂಕರೀದೇವಿಯು ಹಿಮವಂತನ ಪುತ್ರಿಯಾಗಿರುವಳು.

೧೫. ಈ ಶಾಂಕರೀದೇವಿಯ ಮಹಿಮೆಯನ್ನು ಸರ್ವಜ್ಞರಾದ ಮುನಿಗಳು ಶಂಕರನು ಅಥವಾ ಹರಿಯು ಮಾತ್ರ ತಿಳಿದಿರುವರು. ವಿಪ್ರೋತ್ತಮರೇ ! ಶಂಕರನು ಬ್ರಹ್ಮನ ಪುತ್ರನಾಗಿ ಜನಿಸಿದ ಚರಿತ್ರೆಯು ನನ್ನಿಂದ ಹೀಗೆ ಹೇಳಲ್ಪಟ್ಟಿದೆ.

ಬ್ರಹ್ಮಣಃ ಪದ್ಮಯೋನಿತ್ವಂ ಶಂಕರಸ್ಯಾಮಿತೌಜಸಃ ॥

ಇತಿ ಶ್ರೀ ಕೂರ್ಮಪುರಾಣೇ ಏಕಾದಶೋಽಧ್ಯಾಯಃ

---

೧೬. ಮತ್ತು ಚತುರ್ಮುಖ ಬ್ರಹ್ಮನು ವಿಷ್ಣುವಿನ ನಾಭಿಕಮಲದಲ್ಲಿ ಜನಿಸಿದುದನ್ನೂ ಗಣನಾತೀತವಾದ ಪ್ರಭಾವದಿಂದ ಕೂಡಿದ ಶಂಕರನ ಮಹಿಮಾತಿಶಯವನ್ನೂ ನಾನು ನಿಮಗೆ ಉಪದೇಶಿಸಿದ್ದೇನೆ.

ಕೂರ್ಮಪುರಾಣದಲ್ಲಿ ಹನ್ನೊಂದನೆಯ ಅಧ್ಯಾಯವು ಸಮಾಪ್ತವು.

ಶ್ರೀಃ

# ಕೂರ್ಮಪುರಾಣಂ

## ದ್ವಾದಶೋಽಧ್ಯಾಯಃ

### (ದೇವೀ ಮಾಹಾತ್ಮ್ಯಮ್)

**ಸೂತ ಉವಾಚ :—**

**ಇತ್ಯಾಕರ್ಣ್ಯಾರ್ಥ ಮುನಯಃ ಕೂರ್ಮರೂಪೇಣ ಭಾಷಿತಮ್।**
**ವಿಷ್ಣುನಾ ಪುನರೇವೇಮಂ ಪಪ್ರಚ್ಛುಃ ಪ್ರಣತಾ ಹರಿಮ್ ॥ ೧ ॥**

**ಋಷಯ ಊಚುಃ :—**

**ಕೈಷಾ ಭಗವತೀ ದೇವೀ ಶಂಕರಾರ್ಧಶರೀರಿಣೀ ।**
**ಶಿವಾ ಸತೀ ಹೈಮವತೀ ಯಥಾವದ್ಬ್ರೂಹಿ ಪೃಚ್ಛತಾಮ್ ॥ ೨ ॥**

---

## ಹನ್ನೆರಡನೆಯ ಅಧ್ಯಾಯವು

೧. ಸೂತಮುನಿಯು ಇಂತೆಂದನು. :—ಕೂರ್ಮಮೂರ್ತಿಯಾದ ವಿಷ್ಣು ಪರಮಾತ್ಮನಿಂದ ಈ ರೀತಿಯಾಗಿ ಹೇಳಲ್ಪಟ್ಟ ವಚನಾಮೃತವನ್ನು ಕೇಳಿ ಮುನಿ ಜನರು ಮತ್ತೆ ನಮಸ್ಕಾರ ಪೂರ್ವಕವಾಗಿ ವಿಷ್ಣುವನ್ನು ಕುರಿತು ಪ್ರಶ್ನಿಸಿದರು.

೨. ಋಷಿಗಳು ಹೀಗೆ ಹೇಳಿದರು:—ಶಿವಾ, ಸತಿ, ಹಿಮವಂತನ ಪುತ್ರಿ ಎಂದು ಅನೇಕ ನಾಮಗಳಿಂದ ಪ್ರತಿಪಾದ್ಯಳೂ ಶಂಕರನ ಅರ್ಧಾಂಗದಲ್ಲಿ ವಾಸಮಾಡುವವಳೂ ಮತ್ತು ಪೂಜ್ಯಳೂ ಆದ ಈ ದೇವಿಯು ಯಾರು? ಜಿಜ್ಞಾಸೆಯಿಂದ ಪ್ರಶ್ನಿಸುತ್ತಿದ್ದ ನಮಗೆ ಈ ಪರಮಾರ್ಥ ವಿಷಯವನ್ನು ಹೇಳು.

ತೇಷಾಂ ತದ್ವಚನಂ ಶ್ರುತ್ವಾ ಮುನೀನಾಂ ಪುರುಷೋತ್ತಮಃ ।
ಪ್ರತ್ಯುವಾಚ ಮಹಾಯೋಗೀ ಧ್ಯಾತ್ವಾ ಸ್ವಂ ಪರಮಂ ಪದಮ್ ॥ ೩ ॥

ಕೂರ್ಮ ಉವಾಚ :—

ಪುರಾ ಪಿತಾಮಹೇನೋಕ್ತಂ ಮೇರುಪೃಷ್ಠೇ ಸುಶೋಭನೇ ।
ರಹಸ್ಯಮೇತದ್ವಿಜ್ಞಾನಂ ಗೋಪನೀಯಂ ವಿಶೇಷತಃ ॥ ೪ ॥

ಸಾಂಖ್ಯಾನಾಂ ಪರಮಂ ಸಾಂಖ್ಯಂ ಬ್ರಹ್ಮವಿಜ್ಞಾನಮುತ್ತಮಮ್ ।
ಸಂಸಾರಾರ್ಣವಮಗ್ನಾನಾಂ ಜಂತೂನಾಮೇಕಮೋಚನಮ್ ॥ ೫ ॥

ಯಾ ಸಾ ಮಾಹೇಶ್ವರೀ ಶಕ್ತಿರ್ಜ್ಞಾನರೂಪಾತಿಲಾಲಸಾ ।
ವ್ಯೋಮಸಂಜ್ಞಾ ಪರಾ ಕಾಷ್ಠಾ ಸೇಯಂ ಹೈಮವತೀ ಮತಾ ॥ ೬ ॥

---

೩. ಮಹಾ ಯೋಗೇಶ್ವರನೂ ಪುರುಷೋತ್ತಮನೂ ಆದ ವಿಷ್ಣುವು ಆ ಮುನಿ ಜನರ ವಚನವನ್ನು ಕೇಳಿ ಸ್ವಸ್ವರೂಪವಾದ ಪರಮಪದವನ್ನು ಧ್ಯಾನಿಸಿ ಈ ರೀತಿಯಾಗಿ ಪ್ರತಿವಚನವನ್ನಿತ್ತನು.

೪. ಕೂರ್ಮಮೂರ್ತಿಯು ಇಂತೆಂದನು :—ಪೂರ್ವಕಾಲದಲ್ಲಿ ಮಂಗಳಕರವಾದ ಮೇರುಪರ್ವತ ಶಿಖರದಲ್ಲಿ ಕುಳಿತು ಬ್ರಹ್ಮದೇವನಿಂದ ಹೇಳಲ್ಪಟ್ಟ ಅತ್ಯಂತ ರಹಸ್ಯವಾದ ಈ ದೇವೀ ವಿಜ್ಞಾನವು ವಿಶೇಷವಾಗಿ ರಹಸ್ಯವಾಗಿರಿಸಬೇಕಾದ್ದು.

೫. ಸಂಸಾರಸಮುದ್ರದಲ್ಲಿ ಮುಳುಗಿದ ಪ್ರಾಣಿಗಳಿಗೆ ಅಸಾಧಾರಣ ಮೋಚಕವಾದ ಉತ್ತಮವಾದ ಈ ಬ್ರಹ್ಮಜ್ಞಾನ ಅಥವಾ ಶ್ರೇಷ್ಠವಾದ ಸಾಂಖ್ಯಮಾರ್ಗವು ಬಹು ರಹಸ್ಯವಾದುದು.

೬. ಜ್ಞಾನಸ್ವರೂಪವೂ ಅತ್ಯಂತ ಕುತೂಹಲಗಳಿಂದ ಕೂಡಿದುದೂ ಆದ ಮಾಹೇಶ್ವರೀಶಕ್ತಿ ಎಂಬುದು ವ್ಯೋಮ ಎಂಬ ಸಂಜ್ಞಾಂಕಿತವೂ ಪ್ರಾಪ್ಯಸ್ಥಾನಗಳಿಗೆ ಕಡೆಎಲ್ಲೆಯೂ ಆಗಿರುವುದು. ಮತ್ತು ಆ ಶಕ್ತಿಯು ಹಿಮವಂತನ ಪುತ್ರೀರೂಪವೂ ಆಗಿದೆ.

ಶಿವಾ ಸರ್ವಗತಾನಂತಾ ಗುಣಾತೀತಾತಿನಿಷ್ಕಲಾ ।
ಏಕಾನೇಕವಿಭಾಗಸ್ಥಾ ಜ್ಞಾನರೂಪಾತಿಲಾಲಸಾ ॥ ೭ ॥

ಅನನ್ಯಾ ನಿಷ್ಕಲೇ ತತ್ತ್ವೇ ಸಂಸ್ಥಿತಾ ತಸ್ಯ ತೇಜಸಾ ।
ಸ್ವಾಭಾವಿಕೀ ಚ ತನ್ಮೂಲಾ ಪ್ರಭಾ ಭಾನೋರಿವಾಮಲಾ ॥ ೮ ॥

ಏಕಾ ಮಾಹೇಶ್ವರೀ ಶಕ್ತಿರನೇಕೋಪಾಧಿಯೋಗತಃ ।
ಪರಾವರೇಣ ರೂಪೇಣ ಕ್ರೀಡತೇ ತಸ್ಯ ಸನ್ನಿಧೌ ॥ ೯ ॥

ಸೇಯಂ ಕರೋತಿ ಸಕಲಂ ತಸ್ಯಾಃ ಕಾರ್ಯಮಿದಂ ಜಗತ್ ।
ನ ಕಾರ್ಯಂ ನಾಪಿ ಕಾರಣಮೀಶ್ವರಸ್ಯೇತಿ ಸೂರಯಃ ॥ ೧೦ ॥

---

೭. ಆ ಶಕ್ತಿಯು ಮಂಗಳಕರವೂ, ಸರ್ವವ್ಯಾಪಿಯೂ, ಅಂತರರಹಿತವೂ, ಗುಣಾತೀತವೂ, ನಿರವಯವವೂ, ಏಕ ಮತ್ತು ಅನೇಕವಾದ ವಸ್ತುಗಳಲ್ಲಿ ಇರುವುದೂ, ಜ್ಞಾನಸ್ವರೂಪವೂ ಮತ್ತು ಮಹತ್ತಾದ ಕುತೂಹಲ ಗರ್ಭಿತವೂ ಆಗಿದೆ.

೮. ಮತ್ತು ಆ ಶಕ್ತಿಯು ನಿರ್ಮಲವಾದ ಸೂರ್ಯಬಿಂಬದಲ್ಲಿ ಸೂರ್ಯನ ಪ್ರಭೆಯು ಇರುವಂತೆ ನಿರವಯವವಾದ ಆತ್ಮತತ್ತ್ವದಲ್ಲಿ ಆ ತತ್ವದ ತೇಜಸ್ಸಿನಿಂದ ಐಕ್ಯರೂಪದಿಂದ ಇರುವುದೂ ಸ್ವಾಭಾವಿಕವೂ ಆ ತತ್ವಮೂಲಕವೂ ಆಗಿದೆ.

೯. ಅದ್ವಿತೀಯವಾದ ಮಾಹೇಶ್ವರೀ ಶಕ್ತಿಯು ಅನೇಕ ಉಪಾಧಿಗಳ ಸಂಪರ್ಕದಿಂದ ಮಹೇಶ್ವರನ ಸನ್ನಿಧಿಯಲ್ಲಿ ಉತ್ಕೃಷ್ಟ ಮತ್ತು ನಿಕೃಷ್ಟರೂಪಗಳಿಂದ ಕ್ರೀಡಿಸುತ್ತಿದೆ.

೧೦. ಆ ಶಕ್ತಿಯು ಸಮಸ್ತ ಪ್ರಪಂಚವನ್ನೂ ನಿರ್ವಹಿಸುತ್ತದೆ. ಈ ಪ್ರಪಂಚವು ಆ ಶಕ್ತಿಯ ಕಾರ್ಯವು. ಈಶ್ವರನಿಗೆ ಕಾರ್ಯವೂ ಮತ್ತು ಕಾರಣವೂ ಯಾವುದೂ ಇಲ್ಲ ಎಂದು ಜ್ಞಾನಿಗಳು ಪ್ರತಿಪಾದಿಸುತ್ತಾರೆ.

ಚತಸ್ರಃ ಶಕ್ತಯೋ ದೇವ್ಯಾಃ ಸ್ವರೂಪತ್ವೇನ ಸಂಸ್ಥಿತಾಃ ।
ಅಧಿಷ್ಠಾನವಶಾತ್ತಸ್ಯಾಃ ಶೃಣುಧ್ವಂ ಮುನಿಪುಂಗವಾಃ ॥ ೧೧ ॥

ಶಾಂತಿರ್ವಿದ್ಯಾ ಪ್ರತಿಷ್ಠಾ ಚ ನಿವೃತ್ತಿಶ್ಚೇತಿ ತಾಃ ಸ್ಮೃತಾಃ ।
ಚತುರ್ವ್ಯೂಹಸ್ತತೋ ದೇವಃ ಪ್ರೋಚ್ಯತೇ ಪರಮೇಶ್ವರಃ ॥ ೧೨ ॥

ಅನಯಾ ಪರಯಾ ದೇವಃ ಸ್ವಾತ್ಮಾನಂದಂ ಸಮಶ್ನುತೇ ।
ಚತುರ್ಷ್ವಪಿ ಚ ವೇದೇಷು ಚತುರ್ಮೂರ್ತಿರ್ಮಹೇಶ್ವರಃ ॥ ೧೩ ॥

ಅಸ್ಯಾಸ್ತ್ವನಾದಿಸಂಸಿದ್ಧಮೈಶ್ವರ್ಯಮತುಲಂ ಮಹತ್ ।
ತತ್ಸಂಬಂಧಾದನಂತೈಷಾ ರುದ್ರೇಣ ಪರಮಾತ್ಮನಾ ॥ ೧೪ ॥

---

೧೧. ಮುನಿವರ್ಯರೇ ! ಆಯಾಯ ಉಪಾಧಿರೂಪವಾದ ಅಧಿಷ್ಠಾನದ ನಿಮಿತ್ತದಿಂದ ಆ ಮಹಾದೇವಿಗೆ ನಾಲ್ಕು ಶಕ್ತಿಗಳು ಸ್ವಸ್ವರೂಪಗಳಾಗಿವೆ. ಅವುಗಳನ್ನು ಶ್ರವಣಮಾಡಿರಿ.

೧೨. ಆ ನಾಲ್ಕು ಶಕ್ತಿಗಳು ಶಾಂತಿ. ವಿದ್ಯಾ, ಪ್ರತಿಷ್ಠಾ ಮತ್ತು ನಿವೃತ್ತಿ ಎಂದು ನಾಮಾಂಕಿತಗಳಾಗಿ ಸ್ಮರಿಸಲ್ಪಟ್ಟಿವೆ. ನಾಲ್ಕು ಶಕ್ತಿವ್ಯೂಹಗಳಿಂದ ಪರಮೇಶ್ವರನು ಚತುರ್ವ್ಯೂಹನೆಂದು ಕರೆಯಲ್ಪಡುತ್ತಾನೆ.

೧೩. ನಾಲ್ಕು ವೇದಗಳಲ್ಲಿ ಪ್ರತಿಪಾದ್ಯನೂ, ಚತುರ್ಮೂರ್ತಿಸ್ವರೂಪನೂ, ಆದ ಮಹೇಶ್ವರನು ತನ್ನ ಉತ್ತಮವಾದ ಮಾಹೇಶ್ವರೀಶಕ್ತಿಯಿಂದ ಸ್ವಾತ್ಮಾನಂದವನ್ನು ಅನುಭವಿಸುತ್ತಾನೆ.

೧೪. ಈ ಮಾಹೇಶ್ವರೀಶಕ್ತಿಗೆ ನಿರುಪಮವಾಗಿಯೂ, ಮಹತ್ತರವಾಗಿಯೂ ಇರುವ ಐಶ್ವರ್ಯವು ಅನಾದಿಯಾಗಿ ಸಿದ್ಧವಾದುದು. ಆ ಐಶ್ವರ್ಯ ಸಂಬಂಧದಿಂದಲೂ ಪರಮಾತ್ಮನಾದ ರುದ್ರಮೂರ್ತಿಯಿಂದಲೂ ಶಕ್ತಿಯು ಅನಂತವಾಗಿದೆ.

ಸೈಷಾ ಸರ್ವೇಶ್ವರೀ ದೇವೀ ಸರ್ವಭೂತಪ್ರವರ್ತಿಕಾ ।
ಪ್ರೋಚ್ಯತೇ ಭಗವಾನ್ ಕಾಲೋ ಹರಿಃ ಪ್ರಾಣೋ ಮಹೇಶ್ವರಃ ॥೧೫॥

ತತ್ರ ಸರ್ವಮಿದಂ ಪ್ರೋತಮೋತಂ ಚೈವಾಖಿಲಂ ಜಗತ್ ।
ಸ ಕಾಲಾಗ್ನಿರ್ಹರೋ ದೇವೋ ಗೀಯತೇ ವೇದವಾದಿಭಿಃ ॥ ೧೬ ॥

ಕಾಲಃ ಸೃಜತಿ ಭೂತಾನಿ ಕಾಲಃ ಸಂಹರತಿ ಪ್ರಜಾಃ ।
ಸರ್ವೇ ಕಾಲಸ್ಯ ವಶಗಾ ನ ಕಾಲಃ ಕಸ್ಯಚಿದ್ವಶಃ ॥ ೧೭ ॥

ಪ್ರಧಾನಂ ಪುರುಷಸ್ತತ್ತ್ವಂ ಮಹಾನಾತ್ಮಾ ತ್ವಹಂಕೃತಿಃ ।
ಕಾಲೇನಾನ್ಯಾನಿ ತತ್ತ್ವಾನಿ ಸಮಾವಿಷ್ಟಾನಿ ಯೋಗಿನಾಮ್ ॥ ೧೮ ॥

ತಸ್ಯ ಸರ್ವಜಗನ್ಮೂರ್ತಿಃ ಶಕ್ತಿರ್ಮಾಯೇತಿ ವಿಶ್ರುತಾ ।
ತದೇಯಂ ಭ್ರಾಮಯೇದೀಶೋ ಮಾಯಾವೀ ಪುರುಷೋತ್ತಮಃ॥೧೯॥

---

೧೫. ಸರ್ವನಿಯಾಮಕವೂ, ಸರ್ವ ಪ್ರಾಣಿಗಳ ವಿವಿಧ ಪ್ರವೃತ್ತಿಗಳನ್ನು ಉಂಟುಮಾಡುವುದೂ ಆದ ಆ ದೇವಿಯು ಪೂಜ್ಯನಾದ ಕಾಲ, ಹರಿ, ಪ್ರಾಣ ಮತ್ತು ಮಹೇಶ್ವರ ಎಂದು ಅನೇಕ ವಿಧವಾಗಿ ಸ್ತುತಿಸಲ್ಪಡುತ್ತಾಳೆ.

೧೬. ಆ ಶಕ್ತಿಯಲ್ಲಿ ಈ ಸಮಸ್ತ ಜಗತ್ತೂ ಓತಪ್ರೋತಭಾವದಿಂದ ವ್ಯಾಪಿಸಿ ಕೊಂಡಿದೆ. ಆ ಶಕ್ತಿಯುತನಾದ ದೇವನು ಕಾಲಾಗ್ನಿ ರೂಪನೆಂದು ವೇದವಾದಿಗಳಿಂದ ಕರೆಯಲ್ಪಡುತ್ತಾನೆ.

೧೭. ಕಾಲಾತ್ಮನು ಭೂತಗಳನ್ನು ಸೃಜಿಸುತ್ತಾನೆ. ಕಾಲಾತ್ಮನು ಪ್ರಜೆಗಳನ್ನು ಸಂಹರಿಸುತ್ತಾನೆ. ಸರ್ವಪ್ರಾಣಿಗಳೂ ಕಾಲಕ್ಕೆ ಅಧೀನವಾಗಿವೆ. ಆದರೆ ಕಾಲಾತ್ಮನು ಯಾವುದೊಂದಕ್ಕೂ ಪರತಂತ್ರನಲ್ಲ.

೧೮. ಪ್ರಧಾನ ಪುರುಷ, ಮಹತ್ತತ್ವ, ಅಹಂಕಾರ ಮತ್ತು ಇತರ ಸಮಸ್ತ ತತ್ವಗಳು ಯೋಗಗಣ್ಯವಾದ ಕಾಲಾತ್ಮಸ್ವರೂಪದಿಂದ ವ್ಯಾಪಿಸಲ್ಪಟ್ಟಿವೆ.

೧೯. ಆ ಕಾಲಾತ್ಮನ ಸಮಸ್ತ ಜಗನ್ಮಯವಾದ ಮೂರ್ತಿಯು ಆತ್ಮಶಕ್ತಿ ಅಥವಾ ಆತ್ಮಮಾಯೆಯೆಂದು ಪ್ರಸಿದ್ಧವಾಗಿದೆ. ಮಾಯಾವಿಯಾದ ಪುರುಷೋತ್ತಮನು ಆ ಮಾಯೆಯಿಂದ ಈ ಸಮಸ್ತ ಜಗತ್ತನ್ನು ಭ್ರಮಣಮಾಡಿಸುವನು.

ಸೈಷಾ ಮಾಯಾತ್ಮಿಕಾ ಶಕ್ತಿಃ ಸರ್ವಾಕಾರಾ ಸನಾತನೀ ।
ವಿಶ್ವರೂಪಂ ಮಹೇಶಸ್ಯ ಸರ್ವದಾ ಸಂಪ್ರಕಾಶಯೇತ್ ॥ ೨೦ ॥

ಅನ್ಯಾಶ್ಚ ಶಕ್ತಯೋ ಮುಖ್ಯಾಸ್ತಸ್ಯ ದೇವಸ್ಯ ನಿರ್ಮಿತಾಃ ।
ಜ್ಞಾನಶಕ್ತಿಃ ಕ್ರಿಯಾಶಕ್ತಿಃ ಪ್ರಾಣಶಕ್ತಿರಿತಿ ತ್ರಯಮ್ ॥ ೨೧ ॥

ಸರ್ವಾಸಾಮೇವ ಶಕ್ತೀನಾಂ ಶಕ್ತಿಮಂತೋ ವಿನಿರ್ಮಿತಾಃ ।
ಮಾಯಯೈವಾಥ ವಿಪ್ರೇಂದ್ರಾಃ ಸಾ ಚಾನಾದಿರನಶ್ವರಾ ॥ ೨೨ ॥

ಸರ್ವಶಕ್ತ್ಯಾತ್ಮಿಕಾ ಮಾಯಾ ದುರ್ನಿವಾರಾ ದುರತ್ಯಯಾ ।
ಮಾಯಾವೀ ಸರ್ವಶಕ್ತೀಶಃ ಕಾಲಃ ಕಾಲಕರಃ ಪ್ರಭುಃ ॥ ೨೩ ॥

---

೨೦. ಮಾಯಾತ್ಮಕವಾದ ಆ ಈಶ್ವರಶಕ್ತಿಯು ಸರ್ವಾಕಾರಗಳಿಂದ ಬಹು ಪುರಾಣವಾಗಿರುವುದು. ಅದು ಮಹೇಶ್ವರನ ವಿಶ್ವರೂಪವನ್ನು ಸರ್ವಕಾಲದಲ್ಲಿಯೂ ಪ್ರಕಾಶಪಡಿಸುತ್ತದೆ.

೨೧. ಆ ಮಹೇಶ್ವರನಿಗೆ ಮುಖ್ಯವಾಗಿ ಮತ್ತೆ ಕೆಲವು ಶಕ್ತಿಗಳು ನಿರ್ಮಿಸಲ್ಪಟ್ಟವೆ. ಅವುಗಳಲ್ಲಿ ಜ್ಞಾನಶಕ್ತಿ, ಕ್ರಿಯಾಶಕ್ತಿ ಮತ್ತು ಪ್ರಾಣಶಕ್ತಿ ಎಂಬ ಮೂರು ಶಕ್ತಿಗಳು ಶ್ರೇಷ್ಠವಾದುವು.

೨೨. ವಿಪ್ರೋತ್ತಮರೇ!ಆ ಎಲ್ಲಾ ಶಕ್ತಿವಿಸ್ತಾರಗಳಿಗೆ ಆಧಾರಭೂತವಾಗಿ ಶಕ್ತಿಮತ್ತಾದ ಚೇತನರು ಆ ಮಾಯೆಯಿಂದಲೇ ನಿರ್ಮಿಸಲ್ಪಟ್ಟಿರುವರು. ಆ ಮಾಯೆಯು ಆದಿ ಅಂತಗಳಿಂದ ಶೂನ್ಯವಾಗಿ ಶಾಶ್ವತವಾಗಿರುವುದು.

೨೩. ಅನೇಕವಾದ ಶಕ್ತಿವಿಸ್ತಾರಗಳ ರೂಪದಿಂದ ಕೂಡಿದ ಮುಖ್ಯ ಮಾಯೆಯು ನಿವಾರಿಸಲು ಅಶಕ್ಯವೂ ನಾಶರಹಿತವೂ ಆಗಿದೆ. ಅಂತಹ ಮಾಯೆಯಿಂದ ಕೂಡಿದ ಪರಮೇಶ್ವರನು ಸರ್ವಶಕ್ತಿಗಳಿಗೆ ಪ್ರಭುವೂ, ಮೃತ್ಯುವನ್ನು ಸೃಜಿಸುವವನೂ ಮತ್ತು ಕಾಲಾತ್ಮಕನೂ ಆಗಿರುವನು.

ಕರೋತಿ ಕಾಲಃ ಸಕಲಂ ಸಂಹರೇತ್ ಕಾಲ ಏವ ಹಿ ।
ಕಾಲಃ ಸ್ಥಾಪಯತೇ ವಿಶ್ವಂ ಕಾಲಾಧೀನಮಿದಂ ಜಗತ್　　　॥ ೨೪ ॥

ಲಬ್ಧ್ವಾ ದೇವಾಧಿದೇವಸ್ಯ ಸನ್ನಿಧಿಂ ಪರಮೇಷ್ಠಿನಃ ।
ಅನಂತಸ್ಯಾಖಿಲೇಶಸ್ಯ ಶಂಭೋಃ ಕಾಲಾತ್ಮನಃ ಪ್ರಭೋಃ　　　॥ ೨೫ ॥

ಪ್ರಧಾನಂ ಪುರುಷೋ ಮಾಯಾ ಮಾಯಾ ಸೈವ ಪ್ರಪದ್ಯತೇ ।
ಏಕಾ ಸರ್ವಗತಾನಂತಾ ಕೇವಲಾ ನಿಷ್ಕಲಾ ಶಿವಾ　　　॥ ೨೬ ॥

ಏಕಾ ಶಕ್ತಿಃ ಶಿವೈಕೋಽಪಿ ಶಕ್ತಿಮಾನುಚ್ಯತೇ ಶಿವಃ ।
ಶಕ್ತಯಃ ಶಕ್ತಿಮಂತೋಽನ್ಯೇ ಸರ್ವಶಕ್ತಿಸಮುದ್ಭವಾಃ　　　॥ ೨೭ ॥

---

೨೪. ಕಾಲವು ಸರ್ವವಿಷಯಗಳನ್ನೂ ರಚಿಸುತ್ತದೆ. ಸಮಸ್ತ ಪ್ರಪಂಚವನ್ನು ನಾಶಮಾಡುತ್ತದೆ ಮತ್ತು ವಿಶ್ವವನ್ನು ಉತ್ತಮಸ್ಥಿತಿಯಲ್ಲಿ ರಕ್ಷಿಸುತ್ತದೆ. ಆದುದರಿಂದ ಈ ಸಮಸ್ತ ಪ್ರಪಂಚವೂ ಕಾಲಕ್ಕೆ ಅಧೀನವಾದುದು.

೨೫. ದೇವಾಧಿದೇವನೂ, ಪರಮಪದದಲ್ಲಿ ಇರುವವನೂ. ಅಪರಿಚ್ಛಿನ್ನನೂ, ಸರ್ವೇಶ್ವರನೂ, ಶಂಕರನೂ, ಕಾಲಾತ್ಮಕನೂ ಆದ ಸರ್ವೇಶ್ವರನ ಸನ್ನಿಧಿಯನ್ನು ಮಾಯೆಯು ಹೊಂದುತ್ತದೆ.

೨೬. ಅದರಿಂದ ಆ ಮಾಯೆಯು ಪ್ರಧಾನ, ಪುರುಷ, ಮಾಯೆ ಎಂಬ ವಿವಿಧ ರೂಪಗಳಿಂದ ಭಿನ್ನವಾಗಿದೆ. ಆ ಮಾಯೆಯು ಶಿವಸ್ವರೂಪವೂ, ನಿರವಯವವೂ, ಅದ್ವಿತೀಯವೂ ಅನಂತವೂ ಮತ್ತು ಸರ್ವವ್ಯಾಪಕವೂ ಆಗಿದೆ.

೨೭. ಆ ಶಕ್ತಿಯು ಒಂದಾಗಿದೆ. ಶಕ್ತಿಯಿಂದ ಕೂಡಿದ ಶಿವನು ಅದ್ವಿತೀಯನೆಂದು ಹೇಳಲ್ಪಡುತ್ತಾನೆ. ಮಿಕ್ಕ ಕಾರ್ಯಶಕ್ತಿಗಳು ಮತ್ತು ಶಕ್ತ್ಯಾಧಾರಗಳು ಮೂಲ ಶಕ್ತಿಯಿಂದ ಹುಟ್ಟಿರುತ್ತವೆ.

ಶಕ್ತಿಶಕ್ತಿಮತೋರ್ಭೇದಂ ವದಂತಿ ಪರಮಾರ್ಥತಃ ।
ಅಭೇದಂ ಚಾನುಪಶ್ಯಂತಿ ಯೋಗಿನಸ್ತತ್ತ್ವಚಿಂತಕಾಃ ॥ ೨೮ ॥

ಶಕ್ತಯೋ ಗಿರಿಜಾ ದೇವೀ ಶಕ್ತಿಮಾನಥ ಶಂಕರಃ ।
ವಿಶೇಷಃ ಕಥ್ಯತೇ ಚಾಯಂ ಪುರಾಣೇ ಬ್ರಹ್ಮವಾದಿಭಿಃ ॥ ೨೯ ॥

ಭೋಗ್ಯಾ ವಿಶ್ವೇಶ್ವರೀ ದೇವೀ ಮಹೇಶ್ವರಪತಿವ್ರತಾ ।
ಪ್ರೋಚ್ಯತೇ ಭಗವಾನ್ ಭೋಕ್ತಾ ಕಪರ್ದೀ ನೀಲಲೋಹಿತಃ ॥ ೩೦ ॥

ಮಂತಾ ವಿಶ್ವೇಶ್ವರೋ ದೇವಃ ಶಂಕರೋ ಮನ್ಮಥಾಂತಕಃ ।
ಪ್ರೋಚ್ಯತೇ ಮತಿರೀಶಾನೀ ಮಂತವ್ಯಾ ಚ ವಿಚಾರತಃ ॥ ೩೧ ॥

ಇತ್ಯೇತದಖಿಲಂ ವಿಪ್ರಾಃ ಶಕ್ತಿಶಕ್ತಿಮದುದ್ಭವಮ್ ।
ಪ್ರೋಚ್ಯತೇ ಸರ್ವವೇದೇಷು ಮುನಿಭಿಸ್ತತ್ತ್ವದರ್ಶಿಭಿಃ ॥ ೩೨ ॥

---

೨೮. ತತ್ತ್ವಗಳನ್ನು ವಿಮರ್ಶಿಸುವ ಯೋಗಿವರ್ಯರು ಶಕ್ತಿ ಮತ್ತು ಶಕ್ತಿಮಂತರಿಗೆ ಭೇದವನ್ನು ಪಾರಮಾರ್ಥಿಕವೆಂದು ಹೇಳುತ್ತಾರೆ. ಹಾಗು ಅವುಗಳ ಅಭೇದವನ್ನು ಸಾಕ್ಷಾತ್ಕರಿಸುತ್ತಾರೆ.

೨೯. ಬ್ರಹ್ಮವಾದಿಗಳಿಂದ ಆಯಾಯ ಪುರಾಣಗಳಲ್ಲಿ ಶಕ್ತಿಗಳು ಗಿರಿಜಾದೇವಿ ರೂಪವೆಂದೂ, ಶಕ್ತಿಮಂತನು ಶಂಕರನೆಂದೂ ವಿಶೇಷವಾಗಿ ವರ್ಣಿಸಲ್ಪಡುತ್ತದೆ.

೩೦. ಮಹೇಶ್ವರನಲ್ಲಿ ಪಾತಿವ್ರತ್ಯವ್ರತವನ್ನು ಧರಿಸಿರುವ ಸರ್ವ ಜಗದೀಶ್ವರಿಯಾದ ಗಿರಿಜೆಯು ಈಶ್ವರನಿಗೆ ಭೋಗ್ಯಳಾಗಿರುವಳು. ನೀಲಲೋಹಿತವರ್ಣಗಳಿಂದ ಕೂಡಿದ ಜಟಾಧಾರಿಯಾದ ಶಂಕರನು ಭೋಕ್ತಾ ಎಂದು ಹೇಳಲ್ಪಡುತ್ತಾನೆ.

೩೧. ಮನ್ಮಥನನ್ನು ಭಸ್ಮಾವಶೇಷವನ್ನಾಗಿ ಮಾಡಿದ ಮತ್ತು ಸರ್ವ ಜಗನ್ನಾಥನಾದ ಶಂಕರನು ಮಂತೃಸ್ವರೂಪನು. ಅವನ ಶಕ್ತಿಯು ವಿಚಾರಮಾರ್ಗದಿಂದ ವೇದ್ಯವಾದ ಮತಿರೂಪವೆಂದು ಹೇಳಲ್ಪಡುತ್ತದೆ.

೩೨. ವಿಪ್ರೋತ್ತಮರೇ ! ತತ್ತ್ವಜ್ಞಾನಿಗಳಾದ ಮುನಿವರ್ಯರಿಂದ ಸರ್ವವೇದಗಳಲ್ಲಿ ಈ ರೀತಿಯಾಗಿ ಶಕ್ತಿ ಮತ್ತು ಶಕ್ತಿಮತ್ ಇವುಗಳ ಸಮಸ್ತ ಉದ್ಭವ ಚರಿತ್ರೆಯು ವರ್ಣಿಸಲ್ಪಟ್ಟಿದೆ.

ಏತತ್ ಪ್ರದರ್ಶಿತಂ ದಿವ್ಯಂ ದೇವ್ಯಾ ಮಾಹಾತ್ಮ್ಯಮುತ್ತಮಮ್ ।
ಸರ್ವವೇದಾಂತವಾದೇಷು ನಿಶ್ಚಿತಂ ಬ್ರಹ್ಮವಾದಿಭಿಃ ॥ ೩೩ ॥

ಏಕಂ ಸರ್ವಗತಂ ಸೂಕ್ಷ್ಮಂ ಕೂಟಸ್ಥಮಚಲಂ ಧ್ರುವಮ್ ।
ಯೋಗಿನಸ್ತತ್ ಪ್ರಪಶ್ಯಂತಿ ಮಹಾದೇವ್ಯಾಃ ಪರಂ ಪದಮ್ ॥ ೩೪ ॥

ಆನಂದಮಕ್ಷರಂ ಬ್ರಹ್ಮ ಕೇವಲಂ ನಿಷ್ಕಲಂ ಪರಮ್ ।
ಯೋಗಿನಸ್ತತ್ ಪ್ರಪಶ್ಯಂತಿ ಮಹಾದೇವ್ಯಾಃ ಪರಂ ಪದಮ್ ॥ ೩೫ ॥

ಪರಾತ್ಪರತರಂ ತತ್ತ್ವಂ ಶಾಶ್ವತಂ ಶಿವಮಚ್ಯುತಮ್ ।
ಅನಂತಪ್ರಕೃತೌ ಲೀನಂ ದೇವ್ಯಾಸ್ತತ್ಪರಮಂ ಪದಮ್ ॥ ೩೬ ॥

---

೩೩. ಹೀಗೆ ಸರ್ವವೇದಾಂತ ವಾಕ್ಯಗಳಲ್ಲಿ ಬ್ರಹ್ಮವಾದಿಗಳಿಂದ ನಿಶ್ಚಯಿಸಲ್ಪಟ್ಟ ದಿವ್ಯವೂ ಮತ್ತು ಉತ್ತಮವೂ ಆದ ದೇವೀ ಮಾಹಾತ್ಮ್ಯೆಯು ಈ ರೀತಿಯಾಗಿ ಉಪದೇಶಿಸಲ್ಪಟ್ಟಿದೆ.

೩೪. ಅದ್ವಿತೀಯಳವೂ, ಸರ್ವವ್ಯಾಪಕವೂ, ಅತಿ ಸೂಕ್ಷ್ಮವೂ, ನಿರ್ವಿಕಾರವೂ, ಅಚಂಚಲವೂ, ಸ್ಥಿರವೂ ಆದ ಮಹಾದೇವಿಯ ಪರಮಪದವನ್ನು ಮಹಾಯೋಗಿಗಳು ಸಾಕ್ಷಾತ್ಕರಿಸುತ್ತಾರೆ.

೩೫. ಆನಂದ ಘನವೂ ನಾಶವಿಲ್ಲದ್ದೂ ವ್ಯಾಪಕವೂ ಅದ್ವಿತೀಯವೂ, ನಿರವಯವವೂ, ಸರ್ವೋತ್ತಮವೂ ಆದ ಮಹೇಶ್ವರಿಯ ಉತ್ತಮ ಪದವನ್ನು ಯೋಗಿಗಳು ಸಾಕ್ಷಾತ್ಕರಿಸುತ್ತಾರೆ.

೩೬. ಶ್ರೇಷ್ಠವಸ್ತುಗಳಿಗಿಂತ ಅತಿಶ್ರೇಷ್ಠವೂ, ಶಾಶ್ವತ ತತ್ವರೂಪವೂ, ಮಂಗಳ ಕರವೂ, ಚ್ಯುತಿ ಇಲ್ಲದ್ದೂ, ಅಪಾರವಾದ ಪಕೃತಿಯಲ್ಲಿ ಲೀನವೂ ಆದ ದೇವಿಯ ಪರಮ ಪದವನ್ನು ಯೋಗಿಗಳು ಸಾಕ್ಷಾತ್ಕರಿಸುತ್ತಾರೆ.

ಶುಭಂ ನಿರಂಜನಂ ಶುದ್ಧಂ ನಿರ್ಗುಣಂ ದ್ವೈತವರ್ಜಿತಮ್ ।
ಆತ್ಮೋಪಲಬ್ಧವಿಷಯಂ ದೇವ್ಯಾಸ್ತತ್ಪರಮಂ ಪದಮ್ ॥ ೩೭ ॥

ಸೈಷಾ ಧಾತ್ರೀ ವಿಧಾತ್ರೀ ಚ ಪರಮಾನಂದಮಿಚ್ಛತಾಮ್ ।
ಸಂಸಾರತಾಪಾನಖಿಲಾನ್ನಿಹಂತೀಶ್ವರಸಂಶ್ರಯಾತ್ ॥ ೩೮ ॥

ತಸ್ಮಾದ್ವಿಮುಕ್ತಿಮನ್ವಿಚ್ಛನ್ ಪಾರ್ವತೀಂ ಪರಮೇಶ್ವರೀಮ್ ।
ಆಶ್ರಯೇತ್ ಸರ್ವಭೂತಾನಾಮಾತ್ಮಭೂತಾಂ ಶಿವಾತ್ಮಿಕಾಮ್ ॥ ೩೯ ॥

ಲಬ್ಧ್ವಾ ಚ ಪುತ್ರೀಂ ಶರ್ವಾಣೀಂ ತಪಸ್ತಪ್ತ್ವಾ ಸುದುಶ್ಚರಮ್ ।
ಸಭಾರ್ಯಃ ಶರಣಂ ಯಾತಃ ಪಾರ್ವತೀಂ ಪರಮೇಶ್ವರೀಮ್ ॥ ೪೦ ॥

---

೩೭. ಪ್ರತ್ಯಗಾತ್ಮ ಅನುಭವದಲ್ಲಿ ಗೋಚರವಾದ ದೇವಿಯ ಆ ಪರಮ ಪದವು ದ್ವೈತವರ್ಜಿತವೂ, ಗುಣರಹಿತವೂ, ಶುದ್ಧವೂ, ದೋಷಶೂನ್ಯವೂ ಮತ್ತು ಶಿವಂಕರವೂ ಆಗಿದೆ.

೩೮. ಸೃಷ್ಟಿಕರ್ತ್ರಿಯೂ ನಿಯಾಮಕಳೂ ಆದ ಆ ಮಹಾದೇವಿಯು ಪರಮಾನಂದವನ್ನು ಇಚ್ಛಿಸುವ ಮುಮುಕ್ಷು ಜನಗಳಿಗೆ ಸಂಭವಿಸಿದ ಅನೇಕ ಸಂಸಾರ ತಾಪಗಳನ್ನು ಈಶ್ವರನ ಸಂಕರ್ಪದಿಂದ ಹೋಗಲಾಡಿಸುತ್ತಾಳೆ.

೩೯. ಆದುದರಿಂದ ಮುಕ್ತಿಯನ್ನು ಅಪೇಕ್ಷಿಸುವ ಮಾನವನು ಸರ್ವ ಪ್ರಾಣಿಗಳಿಗೆ ಆತ್ಮಸ್ವರೂಪಳೂ ಶಿವಾತ್ಮಕಳೂ ಪರ್ವತರಾಜನ ಕನ್ಯೆಯೂ ಆದ ಪರಮೇಶ್ವರಿಯನ್ನು ಆಶ್ರಯಿಸಬೇಕು.

೪೦. ಪರ್ವತರಾಜನು ಕಠಿಣವಾದ ತಪಸ್ಸನ್ನು ಆಚರಿಸಿ ಪಾರ್ವತಿಯನ್ನು ಪುತ್ರಿಯನ್ನಾಗಿ ಹೊಂದಿ ಪಾರ್ವತೀರೂಪದಿಂದ ಅವತರಿಸಿದ ಮಹೇಶ್ವರಿಯನ್ನು ತನ್ನ ಭಾರ್ಯಾಸಹಿತನಾಗಿ ಶರಣುಹೊಂದಿದನು.

ತಾಂ ದೃಷ್ಟ್ವಾ ಜಾಯಮಾನಾಂ ಚ ಸ್ವೇಚ್ಛಯೈವ ವರಾನನಾಮ್ ।
ಮೇನಾ ಹಿಮವತಃ ಪತ್ನೀ ಪ್ರಾಹೇದಂ ಪರ್ವತೇಶ್ವರಮ್　　॥ ೪೧ ॥

ಮೇನೋವಾಚ :—

ಪಶ್ಯ ಬಾಲಾಮಿಮಾಂ ರಾಜನ್ ರಾಜೀವಸದೃಶಾನನಾಮ್ ।
ಹಿತಾಯ ಸರ್ವಭೂತಾನಾಂ ಜಾತಾ ಚ ತಪಸಾವಯೋಃ　　॥ ೪೨ ॥

ಸೋಽಪಿ ದೃಷ್ಟ್ವಾ ತತೋ ದೇವೀಂ ತರುಣಾದಿತ್ಯಸನ್ನಿಭಾಮ್ ।
ಕಪರ್ದಿನೀಂ ಚತುರ್ವಕ್ತ್ರಾಂ ತ್ರಿನೇತ್ರಾಮತಿಲಾಲಸಾಮ್　　॥ ೪೩ ॥

ಅಷ್ಟಹಸ್ತಾಂ ವಿಶಾಲಾಕ್ಷೀಂ ಚಂದ್ರಾವಯವಭೂಷಣಾಮ್ ।
ನಿರ್ಗುಣಾಂ ಸಗುಣಾಂ ಸಾಕ್ಷಾತ್ ಸದಸದ್ವ್ಯಕ್ತಿವರ್ಜಿತಾಮ್ ॥ ೪೪ ॥

---

೪೧. ಆಗ ಹಿಮವಂತನ ಪತ್ನಿಯಾದ ಮೇನಾದೇವಿಯು ಸ್ವೇಚ್ಛಾಮಾತ್ರದಿಂದ ಜನಿಸುವ ಉತ್ತಮಾಂಗನೆಯಾದ ಆ ಪಾರ್ವತಿಯನ್ನು ನೋಡಿ ಪರ್ವತೇಶ್ವರನಾದ ಪತಿದೇವನನ್ನು ಕುರಿತು ಈ ರೀತಿಯಾಗಿ ಹೇಳಿದಳು.

೪೨. ರಾಜನೇ! ಕಮಲದಂತೆ ಸುಂದರವಾದ ಮುಖವುಳ್ಳ ಈ ಬಾಲೆಯನ್ನು ನೋಡು. ಸರ್ವಪ್ರಾಣಿಗಳಿಗೆ ಹಿತವನ್ನು ಉಂಟುಮಾಡುವುದಕ್ಕೋಸ್ಕರ ನಮ್ಮ ತಪೋಮಹಿಮೆಯಿಂದ ಪುತ್ರಿಯಾಗಿ ಜನಿಸಿರುವಳು.

೪೩. ಹಿಮವಂತನು ಮಧ್ಯಾಹ್ನಸಮಯದ ಸೂರ್ಯನಂತೆ ತೇಜಃಪುಂಜದಿಂದ ತಪಿಸುವವಳೂ ಜಟಾಜೂಟವನ್ನು ಧರಿಸಿದವಳೂ ನಾಲ್ಕು ಮುಖದಿಂದ ರಾಜಿಸುವವಳೂ ಮೂರು ಕಣ್ಣುಗಳುಳ್ಳವಳೂ ಮತ್ತು ಭಕ್ತರ ಕುತೂಹಲಕ್ಕೆ ಪಾತ್ರಳೂ ಆದ ದೇವಿಯನ್ನು ನೋಡಿದನು.

೪೪. ಮತ್ತು ಆ ದೇವಿಯು ಎಂಟು ಬಾಹು ವಿಶಾಲವಾದ ಕಣ್ಣು ಚಂದ್ರನೆಂಬ ಅಂಗಭೂಷಣ ಇವುಗಳಿಂದ ಕೂಡಿದವಳೂ ವಾಸ್ತವರೂಪದಿಂದ ಗುಣಹೀನಳೂ ಕಲ್ಪಿತಾನೇಕ ಗುಣಗಳುಳ್ಳವಳೂ ಸ್ವಸ್ವರೂಪದಿಂದ ಸತ್ ಅಸತ್ ರೂಪಗಳ ಅಭಿವ್ಯಕ್ತಿಯಿಂದ ವರ್ಜಿತಳೂ ಆಗಿದ್ದಳು.

ಪ್ರಣಮ್ಯ ಶಿರಸಾ ಭೂಮೌ ತೇಜಸಾ ಚಾತಿವಿಹ್ವಲಃ ।
ಭೀತಃ ಕೃತಾಂಜಲಿಸ್ತಸ್ಯಾಃ ಪ್ರೋವಾಚ ಪರಮೇಶ್ವರೀಮ್ ॥ ೪೫ ॥

ಹಿಮವಾನುವಾಚ :—

ಕಾ ತ್ವಂ ದೇವಿ ವಿಶಾಲಾಕ್ಷಿ ಶಶಾಂಕಾವಯವಾಂಕಿತೇ ।
ನ ಜಾನೇ ತ್ವಾಮಹಂ ವತ್ಸೇ ಯಥಾವದ್ಬ್ರೂಹಿ ಪೃಚ್ಛತೇ ॥ ೪೬ ॥

ಗಿರೀಂದ್ರವಚನಂ ಶ್ರುತ್ವಾ ತತಃ ಸಾ ಪರಮೇಶ್ವರೀ ।
ವ್ಯಾಜಹಾರ ಮಹಾಶೈಲಂ ಯೋಗಿನಾಮಭಯಪ್ರದಾ ॥ ೪೭ ॥

ಶ್ರೀ ದೇವ್ಯುವಾಚ :—

ಮಾಂ ವಿದ್ಧಿ ಪರಮಾಂ ಶಕ್ತಿಂ ಮಹೇಶ್ವರಸಮಾಶ್ರಯಾಮ್ ॥ ೪೮ ॥

---

೪೫. ಅಂತಹ ದೇವಿಗೆ ತಲೆಬಾಗಿ ನಮಸ್ಕರಿಸಿ ಆ ದೇವಿಯ ತೇಜಸ್ಸಿನಿಂದ ಅತಿಯಾಗಿ ಸ್ತಬ್ಧನಾಗಿ ಮುಂಭಾಗದಲ್ಲಿ ಅಂಜಲಿಬದ್ಧನಾಗಿ ನಿಂತು ಅತ್ಯಂತ ಭಯದಿಂದ ಪರಮೇಶ್ವರಿಯನ್ನು ಕುರಿತು ಹೇಳಿದನು.

೪೬. ಹಿಮವಂತನು ಇಂತೆಂದನು :—ವಿಶಾಲವಾದ ಕಣ್ಣುಗಳಿಂದಲೂ ಚಂದ್ರಕಲೆಯ ಆಭರಣದಿಂದಲೂ ಅಲಂಕರಿಸಲ್ಪಟ್ಟ ದೇವಿಯೇ ನೀನು ಯಾರು ? ಪುತ್ರಿಯೇ ! ನಿನ್ನ ನಿಜರೂಪವನ್ನು ನಾನು ತಿಳಿಯಲಾರೆ. ಪ್ರಶ್ನಿಸುತ್ತಿದ್ದ ನನಗೆ ಯಥಾವತ್ತಾಗಿ ಹೇಳು.

೪೭. ಯೋಗಿಗಳಿಗೆ ಅಭಯವನ್ನುಂಟುಮಾಡುವ ಆ ಪರಮೇಶ್ವರಿಯು ಪರ್ವತ ರಾಜನ ಈ ವಚನವನ್ನು ಶ್ರವಣಮಾಡಿ ತರುವಾಯ ತಂದೆಯಾದ ಹಿಮವಂತನನ್ನು ಕುರಿತು ಈ ರೀತಿಯಾಗಿ ಹೇಳಿದಳು.

೪೮. ದೇವಿಯು ಈ ರೀತಿಯಾಗಿ ಉಪದೇಶಿಸಿದಳು :–ಜನಕನೇ ! ನನ್ನನ್ನು ಮಹೇಶ್ವರನನ್ನು ಆಶ್ರಯಿಸಿರುವ ಆ ಮಹೇಶ್ವರನ ದಿವ್ಯಶಕ್ತಿ ರೂಪಳನ್ನಾಗಿ ತಿಳಿ.

ಅನನ್ಯಾಮವ್ಯಯಾಮೇಕಾಂ ಯಾಂ ಪಶ್ಯಂತಿ ಮುಮುಕ್ಷವಃ ।
ಅಹಂ ಹಿ ಸರ್ವಭಾವಾನಾಮಾತ್ಮಾ ಸರ್ವಾತ್ಮನಾ ಶಿವಾ ॥ ೪೯ ॥

ಶಾಶ್ವತೈಶ್ವರ್ಯವಿಜ್ಞಾನಮೂರ್ತಿಃ ಸರ್ವಪ್ರವರ್ತಿಕಾ ।
ಅನಂತಾನಂತಮಹಿಮಾ ಸಂಸಾರಾರ್ಣವತಾರಿಣೀ ॥ ೫೦ ॥

ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ರೂಪಮೈಶ್ವರಮ್ ।
ಏತಾವದುಕ್ತ್ವಾ ವಿಜ್ಞಾನಂ ದತ್ವಾ ಹಿಮವತೇ ಸ್ವಯಮ್ ॥ ೫೧ ॥

ಸ್ವಂ ರೂಪಂ ದರ್ಶಯಾಮಾಸ ದಿವ್ಯಂ ತತ್ ಪರಮೇಶ್ವರಮ್ ।
ಕೋಟಿಸೂರ್ಯಪ್ರತೀಕಾಶಂ ತೇಜೋಬಿಂಬಂ ನಿರಾಕುಲಮ್ ॥ ೫೨ ॥

---

೪೯. ಮೋಕ್ಷವನ್ನು ಬಯಸುವ ಯತಿಗಳು ನನ್ನನ್ನು ಅನನ್ಯಳನ್ನಾಗಿಯೂ ನಾಶಶೂನ್ಯಳನ್ನಾಗಿಯೂ ಮತ್ತು ಅದ್ವಿತೀಯಳನ್ನಾಗಿಯೂ ತಿಳಿದಿರುತ್ತಾರೆ. ಸರ್ವ ಪ್ರಕಾರಗಳಿಂದ ಶಿವಸ್ವರೂಪಳಾದ ನಾನು ಸರ್ವವಸ್ತುಗಳಿಗೆ ಆತ್ಮರೂಪ ಳಾಗಿರುವೆನು.

೫೦. ನಾನು ಶಾಶ್ವತವಾದ ಐಶ್ವರ್ಯ ಮತ್ತು ವಿಜ್ಞಾನಗಳ ಮೂರ್ತಿಯೂ ಸರ್ವಪ್ರಾಣಿಗಳಿಗೆ ಪ್ರವರ್ತಕಳೂ ಅಂತವಿಲ್ಲದವಳೂ ಅಪಾರವಾದ ಮಹಿಮೆಯುಳ್ಳ ವಳೂ ಮತ್ತು ಸಂಸಾರಸಮುದ್ರದಿಂದ ದಾಟಿಸುವವಳೂ ಆಗಿದ್ದೇನೆ.

೫೧. ನಿನಗೆ ದಿವ್ಯವಾದ ದೃಷ್ಟಿಯನ್ನು ಈಗ ಕೊಡುತ್ತೇನೆ. ಅದರಿಂದ ನನ್ನ ಈಶ್ವರರೂಪವನ್ನು ನೋಡು. ಹೀಗೆಂದು ಹೇಳಿ ಗೌರಿಯು ಹಿಮವಂತನಿಗೆ ದಿವ್ಯವಾದ ಜ್ಞಾನದೃಷ್ಟಿಯನ್ನು ಕರುಣಿಸಿದಳು.

೫೨. ಮತ್ತು ದಿವ್ಯವೂ ಪರಮೇಶ್ವರ ಸ್ವರೂಪವೂ ಕೋಟಿ ಸಂಖ್ಯೆಯ ಸೂರ್ಯಬಿಂಬಗಳಂತೆ ತಪಿಸುವುದೂ ತೇಜೋಬಿಂಬರೂಪವೂ ಮತ್ತು ಬಾಧಾ ರಹಿತವೂ ಆದ ಸ್ವಸ್ವರೂಪವನ್ನು ತೋರಿಸಿದಳು.

ಜ್ವಾಲಾಮಾಲಾಸಹಸ್ರಾಢ್ಯಂ ಕಾಲಾನಲಶತೋಪಮಮ್ ।
ದಂಷ್ಟ್ರಾಕರಾಲಂ ದುರ್ಧರ್ಷಂ ಜಟಾಮಂಡಲಮಂಡಿತಮ್ ॥ ೫೩ ॥

ಕಿರೀಟಿನಂ ಗದಾಹಸ್ತಂ ಶಂಖಚಕ್ರಧರಂ ತಥಾ ।
ತ್ರಿಶೂಲವರಹಸ್ತಂ ಚ ಘೋರರೂಪಂ ಭಯಾನಕಮ್ ॥ ೫೪ ॥

ಪ್ರಶಾಂತಂ ಸೌಮ್ಯವದನಮನಂತಾಶ್ಚರ್ಯಸಂಯುತಮ್ ।
ಚಂದ್ರಾವಯವಲಕ್ಷ್ಮಾಣಂ ಚಂದ್ರಕೋಟಿಸಮಪ್ರಭಮ್ ॥ ೫೫ ॥

ಕಿರೀಟಿನಂ ಗದಾಹಸ್ತಂ ನೂಪುರೈರುಪಶೋಭಿತಮ್ ।
ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಮ್ ॥ ೫೬ ॥

---

೫೩. ಆ ರೂಪವು ಸಹಸ್ರಾರು ಜ್ವಾಲಾಮಾಲೆಗಳಿಂದ ವ್ಯಾಪ್ತವಾದುದೂ ನೂರಾರು ಪ್ರಳಯಾಗ್ನಿಗೆ ಸಮಾನವೂ ಕೋರೆ ಹಲ್ಲುಗಳಿಂದ ಭಯಂಕರವೂ ಪರರಿಂದ ತಿರಸ್ಕರಿಸಲಾಗದ್ದೂ ಮತ್ತು ಮಂಡಲಾಕಾರದ ಜಟೆಯನ್ನು ಧರಿಸಿದ್ದೂ ಆಗಿತ್ತು.

೫೪. ಮತ್ತು ಆ ಪಾರ್ವತೀರೂಪವು ಶಿರದಲ್ಲಿ ಕಿರೀಟವನ್ನೂ ಪಾಣಿಗಳಲ್ಲಿ ಗದೆ, ಶಂಖ, ಚಕ್ರ, ತ್ರಿಶೂಲ ವರದಾನಗಳನ್ನೂ ಧರಿಸಿ ಅತ್ಯುಗ್ರವಾದ ರೂಪದಿಂದ ಪ್ರೇಕ್ಷಕರಿಗೆ ಭಯವನ್ನುಂಟುಮಾಡುತ್ತಿತ್ತು.

೫೫. ಮತ್ತು ಒಂದು ಕಡೆ ಶಾಂತವೂ ಸೌಮ್ಯವಾದ ಮುಖವುಳ್ಳದ್ದೂ ಅನೇಕ ಆಶ್ಚರ್ಯಗಳಿಂದ ಕೂಡಿರುವುದೂ ಚಂದ್ರಕಲಾಭರಣದ ಚಿಹ್ನೆಯಿಂದ ಶೋಭಿತವೂ ಮತ್ತು ಕೋಟಿ ಚಂದ್ರರಂತೆ ಪ್ರಭಾಪೂರ್ಣವೂ ಆಗಿ ಕಾಣಿಸಿತು.

೫೬. ಹಾಗೂ ಕಿರೀಟಶೋಭಿತವೂ ಕೈಯಲ್ಲಿ ಗದೆಯನ್ನು ಧರಿಸಿದುದೂ ಗೆಜ್ಜೆಗಳಿಂದ ಅಲಂಕರಿಸಲ್ಪಟ್ಟದ್ದೂ ದಿವ್ಯವಾದ ಮಾಲ್ಯವಸ್ತ್ರಗಳನ್ನು ಧರಿಸಿದುದೂ ಮತ್ತು ದಿವ್ಯವಾದ ಗಂಧಗಳಿಂದ ಅನುಲೇಪನವುಳ್ಳದ್ದೂ ಆಗಿ ಭಾಸಿಸುತ್ತಿತ್ತು.

ಶಂಖಚಕ್ರಧರಂ ಕಾಮ್ಯಂ ತ್ರೀನೇತ್ರಂ ಕೃತ್ತಿವಾಸಸಮ್ ।
ಅಂಡಸ್ಥಂ ಚಾಂಡಬಾಹ್ಯಸ್ಥಂ ಬಾಹ್ಯಮಾಭ್ಯಂತರಂ ಪರಮ್ ॥ ೫೭ ॥

ಸರ್ವಶಕ್ತಿಮಯಂ ಶುಭ್ರಂ ಸರ್ವಾಕಾರಂ ಸನಾತನಮ್ ।
ಬ್ರಹ್ಮೇಂದ್ರೋಪೇಂದ್ರಯೋಗೀಂದ್ರೈರ್ವಂದ್ಯಮಾನಪದಾಂಬುಜಮ್॥

ಸರ್ವತಃಪಾಣಿಪಾದಾಂತಂ ಸರ್ವತೋಽಕ್ಷಿಶಿರೋಮುಖಮ್ ।
ಸರ್ವಮಾವೃತ್ಯ ತಿಷ್ಠಂತೀಂ ದದರ್ಶ ಪರಮೇಶ್ವರೀಮ್ ॥ ೫೯ ॥

ದೃಷ್ಟ್ವಾ ತದೀದೃಶಂ ರೂಪಂ ದೇವ್ಯಾ ಮಾಹೇಶ್ವರಂ ಪದಮ್ ।
ಭಯೇನ ಚ ಸಮಾವಿಷ್ಟಃ ಸ ರಾಜಾ ಹೃಷ್ಟಮಾನಸಃ ॥ ೬೦ ॥

---

೫೭. ಮತ್ತು ಶಂಕಚಕ್ರಗಳನ್ನು ಧರಿಸಿರುವುದೂ ದರ್ಶನೀಯವೂ ಮೂರು ನೇತ್ರಗಳಿಂದ ರಾಜಿಸುವುದೂ ಗಜಚರ್ಮಾಂಬರವನ್ನು ಧರಿಸಿದುದೂ ಬ್ರಹ್ಮಾಂಡದ ಒಳಗಿನ ಮತ್ತು ಹೊರಗಿನ ಭಾಗಗಳನ್ನು ವ್ಯಾಪಿಸಿ ಬಾಹ್ಯ ಅಭ್ಯಂತರ ಉತ್ತಮ ವಸ್ತುಸ್ವರೂಪವೂ ಆಗಿತ್ತು.

೫೮. ಮತ್ತು ಸರ್ವಶಕ್ತಿ ಸಂಪೂರ್ಣವೂ ಪರಿಶುದ್ಧವೂ ಸರ್ವಾಕಾರಗಳಿಂದ ಶೋಭಿತವೂ ಪುರಾತನವೂ ಬ್ರಹ್ಮ, ಇಂದ್ರ, ಉಪೇಂದ್ರ ಮತ್ತು ಯೋಗೀಂದ್ರರಿಂದ ವಂದಿಸಲ್ಪಡುವ ಪಾದಕಮಲವುಳ್ಳದ್ದೂ ಆಗಿತ್ತು.

೫೯. ಸಮಸ್ತ ಚೇತನಾತ್ಮರೂಪದಿಂದ ಸರ್ವದಿಕ್ಕುಗಳಲ್ಲಿ ಕೈ, ಕಾಲು, ಕಣ್ಣು, ತಲೆ ಮತ್ತು ಮುಖವೆಂಬ ಅವಯವಗಳಿಂದ ಸರ್ವಪ್ರಪಂಚವನ್ನೂ ಆವರಿಸಿ ನಿಂತಿರುವ ಆ ಪರಮೇಶ್ವರೀದೇವಿಯನ್ನು ಹಿಮವಂತನು ಸಾಕ್ಷಾತ್ಕರಿಸಿದನು

೬೦. ಆ ಪರ್ವತರಾಜನು ಮಾಹೇಶ್ವರೀದೇವಿಯ ಅದ್ಭುತವಾದ ಈ ಪರಮ ರೂಪವನ್ನು ನೋಡಿ ಭೀತಿಯಿಂದ ಕೂಡಿದವನೂ ಸಂತೋಷಗೊಂಡ ಮಾನಸವುಳ್ಳವನೂ ಆದನು.

ಆತ್ಮನ್ಯಾಧಾಯ ಚಾತ್ಮಾನಮೋಂಕಾರಂ ಸಮನುಸ್ಮರನ್ ।
ನಾಮ್ನಾಮಷ್ಟಸಹಸ್ರೇಣ ತುಷ್ಟಾವ ಪರಮೇಶ್ವರೀಮ್ ॥ ೬೧ ॥

ಹಿಮವಾನುವಾಚ :—

ಶಿವೋಮಾ ಪರಮಾ ಶಕ್ತಿರನಂತಾ ನಿಷ್ಕಲಾಮಲಾ ।
ಶಾಂತಾ ಮಾಹೇಶ್ವರೀ ನಿತ್ಯಾ ಶಾಶ್ವತೀ ಪರಮಾಕ್ಷರಾ ॥ ೬೨ ॥

ಅಚಿಂತ್ಯಾ ಕೇವಲಾನಂತ್ಯಾ ಶಿವಾತ್ಮಾ ಪರಮಾತ್ಮಿಕಾ ।
ಅನಾದಿರವ್ಯಯಾ ಶುದ್ಧಾ ದೇವಾತ್ಮಾ ಸರ್ವಗಾಚಲಾ ॥ ೬೩ ॥

ಏಕಾನೇಕವಿಭಾಗಸ್ಥಾ ಮಾಯಾತೀತಾ ಸುನಿರ್ಮಲಾ ।
ಮಹಾಮಾಹೇಶ್ವರೀ ಸತ್ಯಾ ಮಹಾದೇವೀ ನಿರಂಜನಾ ॥ ೬೪ ॥

---

೬೧. ತನ್ನ ಅಂತಃಕರಣವನ್ನು ಆತ್ಮರೂಪದಲ್ಲಿ ಸಮಾಧಾನಪಡಿಸಿ ಓಂಕಾರ ಮಂತ್ರವನ್ನು ಸ್ಮರಿಸುತ್ತಾ ಒಂದು ಸಾವಿರದ ಎಂಟು ನಾಮಗಳಿಂದ ಕೂಡಿದ ನಾಮಾವಳಿ ಮಂತ್ರದಿಂದ ದೇವಿಯನ್ನು ಸ್ತುತಿಸಿದನು.

೬೨. ಪರ್ವತರಾಜನಾದ ಹಿಮವಂತನು ಹೀಗೆ ಸ್ತುತಿಸಿದನು. ಮಹಾ ದೇವಿಯು ಮಂಗಳಕರಳೂ ಉಮಾ ಎಂಬ ಸಂಕೇತವುಳ್ಳವಳೂ ಪರಮಶಕ್ತಿ ಸ್ವರೂಪಳೂ ಅಂತವಿಲ್ಲದವಳೂ ನಿರವಯವಳೂ ನಿರ್ಮಲಳೂ ಶಾಂತರೂಪಳೂ ಸರ್ವೇಶ್ವರಿಯೂ ವ್ಯಯರಹಿತಳೂ ಶಾಶ್ವತಳೂ ಸರ್ವೋತ್ತಮಳೂ ಮತ್ತು ವಿಕಾರ ಶೂನ್ಯಳೂ ಆಗಿರುವಳು.

೬೩. ಹಾಗೂ ಧ್ಯಾನಿಸಲು ಅಶಕ್ಯಳೂ ಕೇವಲ ರೂಪಳೂ ಅಂತವಸ್ತು ರಹಿತಳೂ ಮಂಗಳಕರರೂಪವುಳ್ಳವಳೂ ಸರ್ವೋತ್ತಮಳೂ ಆದಿ ಅಂತಗಳಿಂದ ರಹಿತಳೂ ಶುದ್ಧಳೂ, ದೇವತಾತ್ಮಕಳೂ ಸರ್ವವ್ಯಾಪಕಳೂ ಮತ್ತು ಚಲನ ವರ್ಜಿತಳೂ ಆಗಿರುವಳು.

೬೪. ಮತ್ತು ಅದ್ವಿತೀಯಳೂ ಉಪಾಧಿ ಎಂಬ ಅನೇಕ ವಸ್ತುಗಳಲ್ಲಿ ಇರುವವಳೂ ಮಾಯಾತೀತಳೂ ಅತಿ ನಿರ್ಮಲಳೂ ಶ್ರೇಷ್ಠಳಾದ ಮಾಹೇಶ್ವರೀರೂಪಳೂ ಶಾಶ್ವತಳೂ ಅತಿಶಯವಾದ ದೀಪ್ತಿಯುಳ್ಳವಳೂ ಮತ್ತು ನಿರ್ದುಷ್ಟಳೂ ಆಗಿರುವಳು

ಕಾಷ್ಠಾ ಸರ್ವಾಂತರಸ್ಥಾ ಚ ಚಿಚ್ಛಕ್ತಿರತಿಲಾಲಸಾ ।
ನಂದಾ ಸರ್ವಾತ್ಮಿಕಾ ವಿದ್ಯಾ ಜ್ಯೋತೀರೂಪಾಮೃತಾಕ್ಷರಾ ॥ ೬೫ ॥

ಶಾಂತಿಃ ಪ್ರತಿಷ್ಠಾ ಸರ್ವೇಷಾಂ ನಿವೃತ್ತಿರಮೃತಪ್ರದಾ ।
ವ್ಯೋಮಮೂರ್ತಿರ್ವ್ಯೋಮಲಯಾ ವ್ಯೋಮಾಧಾರಾಚ್ಯುತಾಲಯಾ ॥

ಅನಾದಿನಿಧನಾಮೋಘಾ ಕಾರಣಾತ್ಮಾ ಕುಲಾಕುಲಾ ।
ಸ್ವತಃ ಪ್ರಥಮಜಾ ನಾಭಿರಮೃತಸ್ಯಾತ್ಮಸಂಶ್ರಯಾ ॥ ೬೭ ॥

ಪ್ರಾಣೇಶ್ವರಪ್ರಿಯಾ ಮಾತಾ ಮಹಾಮಹಿಷವಾಸಿನೀ ।
ಪ್ರಾಣೇಶ್ವರೀ ಪ್ರಾಣರೂಪಾ ಪ್ರಧಾನಪುರುಷೇಶ್ವರೀ ॥ ೬೮ ॥

---

೬೫. ಮತ್ತು ವಸ್ತುಗಳ ಸೀಮಾರೂಪಳೂ ಸರ್ವಾಂತರ್ಯಾಮಿಯೂ ಚೈತನ್ಯ ಶಕ್ತಿರೂಪಳೂ ಅತ್ಯಂತಲಾಲಸೆಯುಳ್ಳವಳೂ ಆನಂದರೂಪಳೂ ಸರ್ವಾತ್ಮಕಳೂ ಜ್ಞಾನರೂಪಿಯೂ ಪ್ರಕಾಶಾತ್ಮಕಳೂ ಅಮೃತಸ್ವರೂಪಳೂ ಮತು ವ್ಯಯವಿಲ್ಲದ ವಳೂ ಆಗಿರುವಳು.

೬೬. ಹಾಗು ಶಾಂತಿರೂಪಳೂ ಸರ್ವವಸ್ತುಗಳಿಗೆ ಆಧಾರಸ್ವರೂಪಳೂ ಸರ್ವಲಯ ಆಧಾರಳೂ ಅಮೃತಸುಖವನ್ನು ಕೊಡುವವಳೂ ಆಕಾಶದಂತೆ ಸೂಕ್ಷ್ಮ ಶರೀರವುಳ್ಳವಳೂ ಅವ್ಯಾಕೃತದ ಲಯಾವಸ್ಥೆಗೆ ಆಸ್ಪದಳೂ ಅವ್ಯಾಕೃತಾಂತವಸ್ತುಗಳಿಗೆ ಆಧಾರಳೂ ಅಚ್ಯುತಳೂ ಮತ್ತು ಮರಣರಹಿತಳೂ ಆಗಿದ್ದಾಳೆ.

೬೭. ಮತ್ತು ಉತ್ಪತ್ತಿ ನಾಶಗಳಿಂದ ಶೂನ್ಯಳೂ ಸಫಲರೂಪಳೂ ಕಾರಣಾತ್ಮಕಳೂ-ಕುಲ ಅಕುಲ ವಿದ್ಯಾರೂಪಳೂ ಸ್ವತಂತ್ರತೆಯಿಂದ ಮೊದಲು ಆವಿರ್ಭಸಿದ ವಳೂ ಅಮೃತಕ್ಕೆ ಆಧಾರಳೂ ಮತ್ತು ಆತ್ಮಾಶ್ರಯಳೂ ಆಗಿರುವಳು.

೬೮. ಮತ್ತು ತನ್ನ ಪ್ರಾಣೇಶ್ವರನಿಗೆ ಪ್ರೇಯಸಿಯೂ ಜಗನ್ಮಾತೆಯೂ ದೊಡ್ಡ ಮಹಿಷವಾಹನವನ್ನೇರಿದವಳೂ ಪ್ರಾಣೇಶ್ವರಿಯೂ ಪ್ರಾಣಸ್ವರೂಪಳೂ ಮತ್ತು ಪ್ರಧಾನ-ಪುರುಷರಿಗೆ ನಿಯಾಮಕಳೂ ಆಗಿರುವಳು.

ಮಹಾಮಾಯಾ ಸುದುಷ್ಪೂರಾ ಮೂಲಪ್ರಕೃತಿರೀಶ್ವರೀ ।
ಸರ್ವಶಕ್ತಿಕಲಾಕಾರಾ ಜ್ಯೋತ್ಸ್ನಾ ದ್ಯೌರ್ಮಹಿಮಾಸ್ಪದಾ ॥ ೬೯ ॥

ಸರ್ವಕಾಯನಿಯಂತ್ರೀ ಚ ಸರ್ವಭೂತೇಶ್ವರೇಶರೀ ।
ಸಂಸಾರಯೋನಿಃ ಸಕಲಾ ಸರ್ವಶಕ್ತಿಸಮುದ್ಭವಾ ॥ ೭೦ ॥

ಸಂಸಾರಪೋತಾ ದುರ್ವಾರಾ ದುರ್ನಿರೀಕ್ಷ್ಯಾ ದುರಾಸದಾ ।
ಪ್ರಾಣಶಕ್ತಿಃ ಪ್ರಾಣವಿದ್ಯಾ ಯೋಗಿನೀ ಪರಮಾ ಕಲಾ ॥ ೭೧ ॥

ಮಹಾವಿಭೂತಿರ್ದುರ್ಧರ್ಷಾ ಮೂಲಪ್ರಕೃತಿಸಂಭವಾ ।
ಅನಾದ್ಯನಂತವಿಭವಾ ಪರಮಾದ್ಯಾಪಕರ್ಷಿಣೀ ॥ ೭೨ ॥

---

೬೯. ಮತ್ತು ಮಹಾಮಾಯೆಯೂ ಪೂರ್ಣಮಾಡಲು ಅಶಕ್ಯಳೂ ಮೂಲ ಪ್ರಕೃತಿರೂಪಳೂ ಸರ್ವೇಶ್ವರಿಯೂ ಸಮಸ್ತಶಕ್ತ್ಯಂಶಗಳ ಆಕಾರವುಳ್ಳವಳೂ ಚಂದ್ರಿಕಾ ರೂಪಳೂ ಸ್ವರ್ಗಸುಖರೂಪಳೂ ಮತ್ತು ಮಹಿಮೆಗೆ ಆಸ್ಪದಳೂ ಆಗಿದ್ದಾಳೆ.

೭೦. ಹಾಗೂ ಸಮಸ್ತ ಜಂತುಗಳಿಗೆ ನಿಯಾಮಕಳೂ ಸರ್ವಭೂತಗಳಿಗೆ ಈಶ್ವರಿಯೂ ಸಂಸಾರಕ್ಕೆ ಕಾರಣಳೂ ಸಂಪೂರ್ಣರೂಪಳೂ ಸಮಸ್ತ ಶಕ್ತಿಗಳಿಗೆ ಕಾರಣಳೂ ಆಗಿದ್ದಾಳೆ.

೭೧. ಮತ್ತು ಸಂಸಾರದಿಂದ ದಾಟಿಸುವವಳೂ ನಿವಾರಿಸಲು ಅಶಕ್ಯಳೂ ಪ್ರಾಣಶಕ್ತಿರೂಪಳೂ ಪ್ರಾಣವಿದ್ಯೆಯಿಂದ ಉಪಾಸ್ಯಳೂ ಯೋಗಿನೀಸ್ವರೂಪಳೂ ಮತ್ತು ಉತ್ತಮಕಲಾರೂಪಳೂ ಆಗಿದ್ದಾಳೆ.

೭೨. ಮತ್ತು ಮಹಾ ವಿಭೂತಿರೂಪಳೂ ತಿರಸ್ಕರಿಸಲು ಅಶಕ್ಯಳೂ ಮೂಲ ಪ್ರಕೃತಿಗೆ ಕಾರಣಳೂ ಆದಿ ಅಂತಗಳಿಂದ ಶೂನ್ಯವಾದ ವೈಭವವುಳ್ಳವಳೂ ಅತ್ಯಂತ ಆದಿರೂಪಳೂ ಮತ್ತು ಅನರ್ಥನಿವಾರಕಳೂ ಆಗಿದ್ದಾಳೆ.

ಸರ್ಗಸ್ಥಿತ್ಯಂತಕರಣೀ ಸುದುರ್ವಾಚ್ಯಾ ದುರತ್ಯಯಾ ।
ಶಬ್ದಯೋನಿಃ ಶಬ್ದಮಯೀ ನಾದಾಖ್ಯಾ ನಾದವಿಗ್ರಹಾ　　॥ ೭೩ ॥

ಅನಾದಿರವ್ಯಕ್ತಗುಣಾ ಮಹಾನಂದಾ ಸನಾತನೀ ।
ಆಕಾಶಯೋನಿರ್ಯೋಗಸ್ಥಾ ಮಹಾಯೋಗೇಶ್ವರೇಶ್ವರೀ　　॥ ೭೪ ॥

ಮಹಾಮಾಯಾ ಸುದುಷ್ಪಾರಾ ಮೂಲಪ್ರಕೃತಿರೀಶ್ವರೀ ।
ಪ್ರಧಾನಪುರುಷಾತೀತಾ ಪ್ರಧಾನಪುರುಷಾತ್ಮಿಕಾ ।　　॥ ೭೫ ॥

ಪುರಾಣಾ ಚಿನ್ಮಯೀ ಪುಂಸಾಮಾದಿಪೂರುಷರೂಪಿಣೀ ।
ಭೂತಾಂತರಸ್ಥಾ ಕೂಟಸ್ಥಾ ಮಹಾಪುರುಷಸಂಜ್ಞಿತಾ　　॥ ೭೬ ॥

---

೭೩. ಹಾಗೂ ಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನು ನಿರ್ವಹಿಸುವವಳೂ ವಾಗಿಂದ್ರಿಯಕ್ಕೆ ಅಗೋಚರಳೂ ನಾಶವಿಲ್ಲದವಳೂ ಶಬ್ದಕ್ಕೆ ಕಾರಣಳೂ ಶಬ್ದಪೂರ್ಣಳೂ ನಾದ ಎಂಬ ಸಂಜ್ಞಾಂಕಿತಳೂ ಮತ್ತು ನಾದರೂಪವಾದ ವಿಗ್ರಹವುಳ್ಳವಳೂ ಆಗಿದ್ದಾಳೆ.

೭೪. ಮತ್ತು ಅನಾದಿಯೂ ಅತೀಂದ್ರಿಯವಾದ ಗುಣವುಳ್ಳವಳೂ ಉತ್ತಮಾನಂದಸ್ವರೂಪಳೂ ಸನಾತನಳೂ ಆಕಾಶಕ್ಕೆ ಕಾರಣಳೂ ಯೋಗಾಭ್ಯಾಸಪರಳೂ ಮತ್ತು ಮಹಾಯೋಗೇಶ್ವರರಿಗೆ ಈಶ್ವರರೂಪಳೂ ಆಗಿದ್ದಾಳೆ.

೭೫. ಮಹಾಮಾಯೆಯೂ ಪಾರವಿಲ್ಲದವಳೂ ಮೂಲಪ್ರಕೃತಿಸ್ವರೂಪಳೂ ಸರ್ವೇಶ್ವರಿಯೂ ಪ್ರಧಾನ-ಪುರುಷರಿಂದ ಅತೀತಳೂ ಮತ್ತು ಪ್ರಧಾನ-ಪುರುಷಸ್ವರೂಪಳೂ ಆಗಿರುವಳು.

೭೬. ಮತ್ತು ಪುರಾಣಳೂ ಚೈತನ್ಯಪೂರ್ಣಳೂ ಪುರುಷಸೃಷ್ಟಿಯಲ್ಲಿ ಆದಿಪುರುಷರೂಪವನ್ನು ಧರಿಸಿದವಳೂ ಸರ್ವಭೂತಗಳಲ್ಲಿ ವಾಸಿಸುವವಳೂ ಕೂಟದಂತೆ ನಿರ್ವಿಕಾರಳೂ ಮತ್ತು ಮಹಾಪುರುಷ ಎಂಬ ಸಂಕೇತವನ್ನು ಹೊಂದಿದವಳೂ ಆಗಿದ್ದಾಳೆ.

ಜನ್ಮಮೃತ್ಯುಜರಾತೀತಾ ಸರ್ವಶಕ್ತಿಸಮನ್ವಿತಾ ।
ವ್ಯಾಪಿನೀ ಚಾನವಚ್ಛಿನ್ನಾ ಪ್ರಧಾನಾನುಪ್ರವೇಶಿನೀ ॥ ೭೭ ॥

ಕ್ಷೇತ್ರಜ್ಞಶಕ್ತಿರವ್ಯಕ್ತಲಕ್ಷಣಾ ಮಲವರ್ಜಿತಾ ।
ಅನಾದಿಮಾಯಾಸಂಭಿನ್ನಾ ತ್ರಿತತ್ತ್ವಾ ಪ್ರಕೃತಿಗ್ರಹಾ ॥ ೭೮ ॥

ಮಹಾಮಾಯಾಸಮುತ್ಪನ್ನಾ ತಾಮಸೀ ಪೌರುಷೀ ಧ್ರುವಾ ।
ವ್ಯಕ್ತಾವ್ಯಕ್ತಾತ್ಮಿಕಾ ಕೃಷ್ಣಾ ರಕ್ತಾ ಶುಕ್ಲಾ ಪ್ರಸೂತಿಕಾ ॥ ೭೯ ॥

ಅಕಾರ್ಯಾ ಕಾರ್ಯಜನನೀ ನಿತ್ಯಂ ಪ್ರಸವಧರ್ಮಿಣೀ ।
ಸರ್ಗಪ್ರಲಯನಿರ್ಮುಕ್ತಾ ಸೃಷ್ಟಿಸ್ಥಿತ್ಯಂತಧರ್ಮಿಣೀ ॥ ೮೦ ॥

---

೭೭. ಜನ್ಮ ಮೃತ್ಯು ಮತ್ತು ವಾರ್ಧಕ್ಯಗಳಿಂದ ಅತೀತಳೂ ಸರ್ವಶಕ್ತಿಗಳಿಂದ ಪೂರ್ಣಳೂ ಸರ್ವವ್ಯಾಪಕಳೂ ಪರಿಚ್ಛೇದ ಶೂನ್ಯಳೂ ಮತ್ತು ಪ್ರಧಾನ ತತ್ವವನ್ನು ಪ್ರವೇಶಿಸಿದವಳೂ ಆಗಿದ್ದಾಳೆ.

೭೮. ಕ್ಷೇತ್ರಜ್ಞ (ಜೀವ) ಶಕ್ತಿಸ್ವರೂಪಳೂ ಕರಣಗಳಿಗೆ ಅಗೋಚರವಾದ ಸ್ವರೂಪವುಳ್ಳವಳೂ ನಿರ್ಮಲಳೂ ಅನಾದಿಯಾದ ಮಾಯೆಯಿಂದ ಸೇರಿದವಳೂ ತತ್ತ್ವತ್ರಯಸ್ವರೂಪಳೂ ಮತ್ತು ಪ್ರಕೃತಿರೂಪವಾಗಿ ಗ್ರಾಹ್ಯಳೂ ಆಗಿದ್ದಾಳೆ.

೭೯. ಮಹಾಮಾಯೆಯಿಂದ ಉತ್ಪತ್ತಿ ಹೊಂದಿದವಳೂ ತಮೋಗುಣ ಮೂರ್ತಿಯುಳ್ಳವಳೂ ಪೂರ್ಣರೂಪವುಳ್ಳವಳೂ ಶಾಶ್ವತಳೂ ವ್ಯಕ್ತ ಅಥವಾ ಅವ್ಯಕ್ತವೆಂಬ ಬಹುರೂಪವುಳ್ಳವಳೂ ಕೃಷ್ಣ, ರಕ್ತ, ಶುಕ್ಲವೆಂಬ ಗುಣವರ್ಣಗಳಿಂದ ರಂಜಿತಳೂ ಮತ್ತು ಸರ್ವವಸ್ತು ಕಾರಣಳೂ ಆಗಿದ್ದಾಳೆ.

೮೦. ಹಾಗೂ ಕಾರ್ಯಸ್ವರೂಪವಲ್ಲದವಳೂ ಸಮಸ್ತ ಕಾರ್ಯಗಳಿಗೆ ಜನನಿಯೂ ಸಂತತವಾಗಿ ಕಾರ್ಯಸೃಷ್ಟಿಯಲ್ಲಿ ಉನ್ಮುಖಳೂ ಸೃಷ್ಟಿಲಯಗಳಿಂದ ನಿರ್ಮುಕ್ತಳೂ ಮತ್ತು ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ನಿರ್ವಹಿಸುವವಳೂ ಆಗಿದ್ದಾಳೆ.

ಬ್ರಹ್ಮಗರ್ಭಾ ಚತುರ್ವಿಂಶಾ ಪದ್ಮನಾಭಾಚ್ಯುತಾತ್ಮಿಕಾ ।
ವೈದ್ಯುತೀ ಶಾಶ್ವತೀ ಯೋನಿರ್ಜಗನ್ಮಾತೇಶ್ವರಪ್ರಿಯಾ ॥ ೮೧ ॥

ಸರ್ವಾಧಾರಾ ಮಹಾರೂಪಾ ಸರ್ವೈಶ್ವರ್ಯಸಮನ್ವಿತಾ ।
ವಿಶ್ವರೂಪಾ ಮಹಾಗರ್ಭಾ ವಿಶ್ವೇಶೇಚ್ಛಾನುವರ್ತಿನೀ ॥ ೮೨ ॥

ಮಹೀಯಸೀ ಬ್ರಹ್ಮಯೋನಿರ್ಮಹಾಲಕ್ಷ್ಮೀಸಮುದ್ಭವಾ ।
ಮಹಾವಿಮಾನಮಧ್ಯಸ್ಥಾ ಮಹಾನಿದ್ರಾತ್ಮಹೇತುಕಾ ॥ ೮೩ ॥

ಸರ್ವಸಾಧಾರಣೀ ಸೂಕ್ಷ್ಮಾ ಹ್ಯವಿದ್ಯಾ ಪಾರಮಾರ್ಥಿಕಾ ।
ಅನಂತರೂಪಾನಂತಸ್ಥಾ ದೇವೀ ಪುರುಷಮೋಹಿನೀ ॥ ೮೪ ॥

---

೮೧. ವೇದದ ಉತ್ಪತ್ತಿಗೆ ಕಾರಣಗಳೂ ಇಪ್ಪತ್ತುನಾಲ್ಕು ತತ್ವಸ್ವರೂಪಳೂ ನಾಭಿಯಲ್ಲಿ ಪದ್ಮವನ್ನು ಧರಿಸಿದಳೂ ಮಹಾ ವಿಷ್ಣುಸ್ವರೂಪಳೂ ಮಿಂಚಿನಂತೆ ತೇಜೋಮಯಳೂ ಶಾಶ್ವತಳೂ ಸರ್ವಕಾರಣಳೂ ಜಗನ್ಮಾತೆಯೂ ಮತ್ತು ಜಗದೀಶ್ವರನ ಪ್ರಿಯೆಯೂ ಆಗಿದ್ದಾಳೆ.

೮೨. ಸಮಸ್ತ ವಸ್ತುಗಳಿಗೆ ಆಧಾರಳೂ ಬೃಹದಾಕಾರವುಳ್ಳವಳೂ ಸರ್ವೈಶ್ವರ್ಯಗಳಿಂದ ಪರಿಪೂರ್ಣಳೂ ವಿಶ್ವರೂಪಳೂ ಸರ್ವವಸ್ತು ಸೃಷ್ಟಿಗೆ ಕಾರಣಳಾದ ಮಹಾಗರ್ಭರೂಪಳೂ ಮತ್ತು ಸರ್ವೇಶ್ವರನ ಸಂಕಲ್ಪದಂತೆ ನಡೆಯುವವಳೂ ಆಗಿದ್ದಾಳೆ.

೮೩. ಮತ್ತು ಸರ್ವೋನ್ನತಳೂ ಬ್ರಹ್ಮನಿಗೆ ಕಾರಣಳೂ ಮಹಾಲಕ್ಷ್ಮಿಯ ಉತ್ಪತ್ತಿಗೆ ಹೇತುಭೂತಳೂ ಮಹಾವಿಮಾನದ ಮಧ್ಯದಲ್ಲಿ ವಾಸಿಸುವಳೂ ಮಹಾನಿದ್ರಾರೂಪಿಣಿಯೂ ಮತ್ತು ಅನ್ಯಹೇತುಶೂನ್ಯಳೂ ಆಗಿದ್ದಾಳೆ.

೮೪. ಸರ್ವತತ್ವಗಳಲ್ಲಿ ಸಾಧಾರಣರೂಪಳೂ ಸೂಕ್ಷ್ಮಳೂ ಅವಿದ್ಯಾತ್ಮಕಳೂ ಪರಮಾರ್ಥರೂಪಳೂ ಅನಂತವಾದ ರೂಪವುಳ್ಳವಳೂ ಅನಂತವಸ್ತುವಿನಲ್ಲಿ ಇರುವವಳೂ ಪ್ರಕಾಶಿಸುವವಳೂ ಮತ್ತು ಪುರುಷನನ್ನು ಮೋಹಿಸುವವಳೂ ಆಗಿದ್ದಾಳೆ.

ಅನೇಕಾಕಾರಸಂಸ್ಥಾನಾ ಕಾಲತ್ರಯವಿವರ್ಜಿತಾ ।
ಬ್ರಹ್ಮಜನ್ಮಾ ಹರೇರ್ಮೂರ್ತಿರ್ಬ್ರಹ್ಮವಿಷ್ಣುಶಿವಾತ್ಮಿಕಾ ॥ ೮೫ ॥

ಬ್ರಹ್ಮೇಶವಿಷ್ಣುಜನನೀ ಬ್ರಹ್ಮಾಖ್ಯಾ ಬ್ರಹ್ಮಸಂಶ್ರಯಾ ।
ವ್ಯಕ್ತಾ ಪ್ರಥಮಜಾ ಬ್ರಾಹ್ಮೀ ಮಹತೀ ಬ್ರಹ್ಮರೂಪಿಣೀ ॥ ೮೬ ॥

ವೈರಾಗ್ಯೈಶ್ವರ್ಯಧರ್ಮಾತ್ಮಾ ಬ್ರಹ್ಮಮೂರ್ತಿರ್ಹೃದಿ ಸ್ಥಿತಾ ।
ಅಪಾಂ ಯೋನಿಃ ಸ್ವಯಂಭೂತಿರ್ಮಾನಸೀ ತತ್ತ್ವಸಂಭವಾ ॥ ೮೭ ॥

ಈಶ್ವರಾಣೀ ಚ ಶರ್ವಾಣೀ ಶಂಕರಾರ್ಧಶರೀರಿಣೀ ।
ಭವಾನೀ ಚೈವ ರುದ್ರಾಣೀ ಮಹಾಲಕ್ಷ್ಮೀರಥಾಂಬಿಕಾ ॥ ೮೮ ॥

---

೮೫. ಹಾಗು ಅನೇಕವಾದ ಆಕಾರ ಸನ್ನಿವೇಶಗಳುಳ್ಳವಳೂ ಭೂತಾದಿ ಕಾಲತ್ರಯವರ್ಜಿತಳೂ ಬ್ರಹ್ಮನ ಉತ್ಪತ್ತಿಗೆ ಕಾರಣಳೂ ಮಹಾ ವಿಷ್ಣುವಿನ ಮೂರ್ತಿ ಸ್ವರೂಪಳೂ ಬ್ರಹ್ಮ ವಿಷ್ಣು ಶಿವ ಎಂಬ ತ್ರಿಮೂರ್ತಿಸ್ವರೂಪಳೂ ಆಗಿದ್ದಾಳೆ.

೮೬. ಮತ್ತು ಬ್ರಹ್ಮ ಶಿವ ವಿಷ್ಣುವೆಂಬ ತ್ರಿಮೂರ್ತಿಗಳಿಗೆ ಕಾರಣಳೂ ಬ್ರಹ್ಮ ಎಂಬ ಸಂಜ್ಞಾಂಕಿತಳೂ ವೇದವಾಣಿಯಿಂದ ವೇದ್ಯಳೂ ವ್ಯಕ್ತರೂಪವುಳ್ಳವಳೂ ಆದಿಯಲ್ಲಿ ಹುಟ್ಟಿದ ಹಿರಣ್ಯಗರ್ಭರೂಪಳೂ ಬ್ರಹ್ಮಾತ್ಮಕಳೂ ಮಹಾರೂಪಳೂ ಮತ್ತು ಬ್ರಹ್ಮರೂಪದಿಂದ ಪರಿಣಮಿಸಿದವಳೂ ಆಗಿರುವಳು.

೮೭. ಹಾಗೂ ವೈರಾಗ್ಯ ಐಶ್ವರ್ಯಗಳೆಂಬ ಧರ್ಮಸ್ವರೂಪಳೂ ಬ್ರಹ್ಮ ಮೂರ್ತಿಯೂ ಸರ್ವಪ್ರಾಣಿಗಳ ಹೃದಯದಲ್ಲಿ ವಾಸಿಸುವವಳೂ ಜಲಸೃಷ್ಟಿಗೆ ಕಾರಣ ವಾದ ತೇಜೋರೂಪಳೂ ಸ್ವತಂತ್ರವಾಗಿ ಉತ್ಪನ್ನಳೂ ಮನೋಮಾತ್ರಕ್ಕೆ ಗೋಚರಳೂ ಮತ್ತು ತತ್ತ್ವೋತ್ಪತ್ತಿಗೆ ಆಶ್ರಯಳೂ ಆಗಿದ್ದಾಳೆ.

೮೮. ಮತ್ತು ಶಿವನ ಪತಿಯಾದುದರಿಂದ ಈಶ್ವರಾಣೀ ಶರ್ವಾಣೀ ಭವಾನೀ ರುದ್ರಾಣೀ ಎಂಬ ಪತಿಯ ಸಂಕೇತದ ಸಂಜ್ಞೆಗಳಿಂದ ಅಂಕಿತಳೂ ಶಿವನ ವಾಮಾಂಗದಲ್ಲಿ ವಾಸಿಸುವವಳೂ ಮಹಾಲಕ್ಷ್ಮೀಸ್ವರೂಪಳೂ ಮತ್ತು ಜಗನ್ಮಾತೆಯೂ ಆಗಿರುತ್ತಾಳೆ.

ಮಹೇಶ್ವರಸಮುತ್ಪನ್ನಾ ಭುಕ್ತಿಮುಕ್ತಿಫಲಪ್ರದಾ ।
ಸರ್ವೇಶ್ವರೀ ಸರ್ವವಂದ್ಯಾ ನಿತ್ಯಂ ಮುದಿತಮಾನಸಾ ॥ ೮೯ ॥

ಬ್ರಹ್ಮೇಂದ್ರೋಪೇಂದ್ರನಮಿತಾ ಶಂಕರೇಚ್ಛಾನುವರ್ತಿನೀ ।
ಈಶ್ವರಾರ್ಧಾಸನಗತಾ ಮಹೇಶ್ವರಪತಿವ್ರತಾ ॥ ೯೦ ॥

ಸಕೃದ್ವಿಭಾತಾ ಸರ್ವಾರ್ತಿಸಮುದ್ರಪರಿಶೋಷಿಣೀ ।
ಪಾರ್ವತೀ ಹಿಮವತ್ಪುತ್ರೀ ಪರಮಾನಂದದಾಯಿನೀ ॥ ೯೧ ॥

ಗುಣಾಢ್ಯಾ ಯೋಗಜಾ ಯೋಗ್ಯಾ ಜ್ಞಾನಮೂರ್ತಿವಿಕಾಶಿನೀ ।
ಸಾವಿತ್ರೀ ಕಮಲಾ ಲಕ್ಷ್ಮೀಃ ಶ್ರೀರನಂತೋರಸಿ ಸ್ಥಿತಾ ॥ ೯೨ ॥

---

೮೯. ಸರ್ವೇಶ್ವರನಿಂದ ಜನಿಸಿದವಳೂ ಭಕ್ತರಿಗೆ ಭೋಗ ಮೋಕ್ಷಗಳೆಂಬ ಫಲಗಳನ್ನು ನೀಡುವವಳೂ ಸರ್ವೇಶ್ವರಿಯೂ ಸರ್ವರಿಂದ ನಮಸ್ಕಾರ್ಯಳೂ ಮತ್ತು ಯಾವಾಗಲೂ ಸಂತುಷ್ಟವಾದ ಚಿತ್ತವುಳ್ಳವಳೂ ಆಗಿರುವಳು.

೯೦. ಮತ್ತು ಬ್ರಹ್ಮ ಇಂದ್ರ ಉಪೇಂದ್ರರಿಂದ ವಂದಿಸಲ್ಪಟ್ಟವಳೂ ಶಿವನ ಸಂಕಲ್ಪಾನುವರ್ತಿಯೂ ಈಶ್ವರನೊಡನೆ ಅರ್ಧಾಸನದಲ್ಲಿ ಕುಳಿತಿರುವವಳೂ ಮತ್ತು ಮಹೇಶ್ವರನಲ್ಲಿ ಪಾತಿವ್ರತ್ಯವನ್ನು ಪಾಲಿಸುವವಳೂ ಆಗಿದ್ದಾಳೆ.

೯೧. ಮತ್ತು ಸಂತತವಾಗಿ ಪ್ರಕಾಶಸ್ವರೂಪಳೂ ಸರ್ವಪ್ರಾಣಿಗಳ ಕಷ್ಟಗಳೆಂಬ ಸಮುದ್ರವನ್ನು ಒಣಗಿಸುವವಳೂ ಪರ್ವತರಾಜನಾದ ಹಿಮವಂತನ ಪುತ್ರಿಯೂ ಮತ್ತು ಪರಮಾನಂದವನ್ನು ಕರುಣಿಸುವವಳೂ ಆಗಿದ್ದಾಳೆ.

೯೨. ಮತ್ತು ಸದ್ಗುಣಗಳಿಂದ ಆಢ್ಯಳೂ ಯೋಗಮಯವಾದ ಉತ್ಪತ್ತಿಯುಳ್ಳವಳೂ ಯೋಗ್ಯಳೂ ಜ್ಞಾನಮೂರ್ತಿಯೂ ವಿಕಾಶಸ್ವಭಾವವುಳ್ಳವಳೂ ಸಾವಿತ್ರೀ ಸ್ವರೂಪಳೂ ಮಹಾವಿಷ್ಣುವಿನ ವಕ್ಷಸ್ಥಳದಲ್ಲಿರುವ ಲಕ್ಷ್ಮೀಸ್ವರೂಪಳೂ ಮತ್ತು ಕಮಲಾ ಎಂಬ ನಾಮಾಂಕಿತಳೂ ಆಗಿದ್ದಾಳೆ.

ಸರೋಜನಿಲಯಾ ಗಂಗಾ ಯೋಗನಿದ್ರಾ ಸುರಾರ್ದಿನೀ ।
ಸಾರಸ್ವತೀ ಸರ್ವವಿದ್ಯಾ ಜಗಜ್ಜ್ಯೇಷ್ಠಾ ಸುಮಂಗಲಾ ॥ ೯೩ ॥

ವಾಗ್ದೇವೀ ವರದಾऽವಾಚ್ಯಾ ಕೀರ್ತಿಃ ಸರ್ವಾರ್ಥಸಾಧಿಕಾ ।
ಯೋಗೀಶ್ವರೀ ಬ್ರಹ್ಮವಿದ್ಯಾ ಮಹಾವಿದ್ಯಾ ಸುಶೋಭನಾ ॥ ೯೪ ॥

ಗುಹ್ಯವಿದ್ಯಾತ್ಮವಿದ್ಯಾ ಚ ಧರ್ಮವಿದ್ಯಾತ್ಮಭಾವಿತಾ ।
ಸ್ವಾಹಾ ವಿಶ್ವಂಭರಾ ಸಿದ್ಧಿಃ ಸ್ವಧಾ ಮೇಧಾ ಧೃತಿಃ ಶ್ರುತಿಃ ॥ ೯೫ ॥

ನೀತಿಃ ಸುನೀತಿಃ ಸುಕೃತಿರ್ಮಾಧವೀ ನರವಾಹಿನೀ ।
ಪೂಜ್ಯಾ ವಿಭಾವತೀ ಸೌಮ್ಯಾ ಭೋಗಿನೀ ಭೋಗಶಾಯಿನೀ ॥ ೯೬ ॥

---

೯೩. ಮತ್ತು ಪದ್ಮಗರ್ಭದಲ್ಲಿ ವಾಸಿಸುವವಳೂ ಗಂಗಾನದೀರೂಪಳೂ ಯೋಗನಿದ್ರಾಸ್ವರೂಪಳೂ ಅಸುರರನ್ನು ಮರ್ದಿಸುವವಳೂ ಸರಸ್ವತೀಸ್ವರೂಪಳೂ ಸರ್ವ ವಿದ್ಯೆಗಳ ಪ್ರತಿಷ್ಠಾರೂಪಳೂ ಜಗತ್ತಿಗೆಲ್ಲ ಜ್ಯೇಷ್ಠಳೂ ಮತ್ತು ಸೌಮಂಗಲ್ಯ ಶೋಭಿತಳೂ ಆಗಿದ್ದಾಳೆ.

೯೪. ಮತ್ತು ವಾಗ್ದೇವತೆಯೂ ವರಗಳನ್ನು ನೀಡುವವಳೂ ನಿರ್ದುಷ್ಟಳೂ ಕೀರ್ತಿಸ್ವರೂಪಳೂ ಸರ್ವಾರ್ಥಗಳನ್ನು ಸಾಧಿಸುವವಳೂ ಯೋಗೀಶ್ವರಿಯೂ ಬ್ರಹ್ಮ ವಿದ್ಯಾಗಮ್ಯಳೂ ಮಹಾ ವಿದ್ಯಾಸ್ವರೂಪಿಣಿಯೂ ಪರಮಮಂಗಳಾತ್ಮಕಳೂ ಆಗಿರುವಳು.

೯೫. ರಹಸ್ಯವಿದ್ಯಾಸ್ವರೂಪಳೂ ಆತ್ಮವಿದ್ಯಾರೂಪಿಣಿಯೂ ಧರ್ಮವಿದ್ಯೆ ಗಳಿಂದ ಗಮ್ಯಳೂ ಅಹಂಗ್ರಹೋಪಾಸನೆಯಿಂದ ಉಪಾಸ್ಯಳೂ ಸ್ವಾಹಾಸ್ವರೂಪಳೂ ವಿಶ್ವವ್ಯಾಪಕಳೂ ಸರ್ವಸಿದ್ಧಿಸ್ವರೂಪಳೂ ಸ್ವಧಾಸ್ವರೂಪಿಣಿಯೂ ಧಾರಣಶಕ್ತಿಸ್ವರೂ ಪಳೂ ಧೈರ್ಯರೂಪಳೂ ಮತ್ತು ಶ್ರವಣ ಸಂಸ್ಕಾರಸ್ವರೂಪಳೂ ಆಗಿದ್ದಾಳೆ.

೯೬. ನೀತಿಸ್ವರೂಪಳೂ ಉತ್ತಮಗತಿಪ್ರಾಪಕಳೂ ಪ್ರಶಸ್ತವ್ಯಾಪಾರವುಳ್ಳವಳೂ ವಿಷ್ಣುಶಕ್ತಿಸ್ವರೂಪಳೂ ಕುಬೇರನ ಶಕ್ತಿರೂಪಳೂ ಪೂಜ್ಯಳೂ ಕಾಂತಿಶೋಭಿತಳೂ ಸೌಮ್ಯಸ್ವಭಾವವುಳ್ಳವಳೂ ಉತ್ತಮಭೋಗವುಳ್ಳವಳೂ ಸುಖಶಯನವುಳ್ಳವಳೂ ಆಗಿದ್ದಾಳೆ.

ಶೋಭಾ ಚ ಶಂಕರೀ ಲೋಲಾ ಮಾಲಿನೀ ಪರಮೇಷ್ಠಿನೀ ।
ತ್ರೈಲೋಕ್ಯಸುಂದರೀ ನಮ್ಯಾ ಸುಂದರೀ ಕಾಮಚಾರಿಣೀ ॥ ೯೭ ॥

ಮಹಾನುಭಾವಾ ಸತ್ತ್ವಸ್ಥಾ ಮಹಾಮಹಿಷಮರ್ದಿನೀ ।
ಪದ್ಮನಾಭಾ ಪಾಪಹರಾ ವಿಚಿತ್ರಮುಕುಟಾಂಗದಾ ॥ ೯೮ ॥

ಕಾಂತಾ ಚಿತ್ರಾಂಬರಧರಾ ದಿವ್ಯಾಭರಣಭೂಷಿತಾ ।
ಹಂಸಾಖ್ಯಾ ವ್ಯೋಮನಿಲಯಾ ಜಗತ್ಸೃಷ್ಟಿವಿವರ್ಧಿನೀ ॥ ೯೯ ॥

ನಿಯಂತ್ರೀ ಯಂತ್ರಮಧ್ಯಸ್ಥಾ ನಂದಿನೀ ಭದ್ರಕಾಲಿಕಾ ।
ಆದಿತ್ಯವರ್ಣಾ ಕೌಬೇರೀ ಮಯೂರವರವಾಹನಾ ॥ ೧೦೦ ॥

---

೯೭. ಕಾಂತಿಸ್ವರೂಪಳೂ ಶಿವಕಾಂತೆಯೂ ಚಂಚಲಸ್ವಭಾವಳೂ ಪುಷ್ಪ ಮಾಲಾಧಾರಿಣಿಯೂ ಉತ್ತಮಸ್ಥಾನದಲ್ಲಿರುವವಳೂ ತ್ರಿಲೋಕಗಳಲ್ಲಿ ಅತಿಸುಂದರಿಯೂ ನಮಸ್ಕಾರಾರ್ಹಳೂ ಮತ್ತು ರಮಣೀಯಳೂ ಸ್ವಚ್ಛಂದವಾದ ಸಂಚಾರವುಳ್ಳವಳೂ ಆಗಿದ್ದಾಳೆ.

೯೮. ಹಾಗೂ ಮಹಾಮಹಿಮೆಯುಳ್ಳವಳೂ ಸತ್ವದಲ್ಲಿರುವವಳೂ ಮಹಾ ಮಹಿಷಾಸುರನನ್ನು ಸಂಹರಿಸಿದವಳೂ ಮಹಾವಿಷ್ಣುರೂಪದಿಂದ ನಾಭಿಯಲ್ಲಿ ಪದ್ಮವನ್ನು ಧರಿಸಿದವಳೂ ಪಾಪಗಳನ್ನು ನಿವಾರಿಸುವವಳೂ ಮತ್ತು ಉಜ್ವಲವಾದ ಕಿರೀಟ ಅಂಗದ ಮುಂತಾದ ಭೂಷಣಗಳನ್ನು ಧರಿಸಿದವಳೂ ಆಗಿರುವಳು.

೯೯. ಹಾಗೂ ಮನೋಹರಳೂ ವಿಚಿತ್ರವಾದ ವಸ್ತ್ರವನ್ನು ಧರಿಸಿದವಳೂ ದಿವ್ಯವಾದ ಆಭರಣಗಳಿಂದ ಅಲಂಕರಿಸಲ್ಪಟ್ಟವಳೂ ಹಂಸ ಎಂಬ ಸಂಜ್ಞಾಂಕಿತಳೂ ಹೃದಯ ಗುಹೆಯಲ್ಲಿ ವಾಸಿಸುವವಳೂ ಜಗತ್ತಿನ ಸೃಷ್ಟಿಯನ್ನು ಬೆಳೆಸುವವಳೂ ಆಗಿದ್ದಾಳೆ.

೧೦೦. ಸರ್ವನಿಯಾಮಕಳೂ ಯಂತ್ರಮಧ್ಯದಲ್ಲಿ ವಾಸಿಸುವವಳೂ ಆನಂದ ದಾಯಕಳೂ ಭದ್ರಕಾಳೀ ಸ್ವರೂಪಳೂ ಸೂರ್ಯನಂತೆ ಉಜ್ವಲಕಾಂತಿಯುಳ್ಳವಳೂ ಕುಬೇರನ ಅಸಾಧಾರಣಶಕ್ತಿಯುಳ್ಳವಳೂ ಉತ್ತಮವಾದ ಮಯೂರವಾಹನಾ ರೂಢಳೂ ಆಗಿದ್ದಾಳೆ.

ವೃಷಾಸನಗತಾ ಗೌರೀ ಮಹಾಕಾಲೀ ಸುರಾರ್ಚಿತಾ ।
ಅದಿತಿರ್ನಿಯತಾ ರೌದ್ರಾ ಪದ್ಮಗರ್ಭಾ ವಿವಾಹನಾ ॥ ೧೦೧ ॥

ವಿರೂಪಾಕ್ಷೀ ಲೇಲಿಹಾನಾ ಮಹಾಸುರವಿನಾಶಿನೀ ।
ಮಹಾಫಲಾನವದ್ಯಾಂಗೀ ಕಾಮರೂಪಾ ವಿಭಾವರೀ ॥ ೧೦೨ ॥

ವಿಚಿತ್ರರತ್ನಮುಕುಟಾ ಪ್ರಣತಾರ್ತಿಪ್ರಭಂಜನೀ ।
ಕೌಶಿಕೀ ಕರ್ಷಿಣೀ ರಾತ್ರಿಸ್ತ್ರಿದಶಾರ್ತಿವಿನಾಶಿನೀ ॥ ೧೦೩ ॥

ಬಹುರೂಪಾ ಸ್ವರೂಪಾ ಚ ವಿರೂಪಾ ರೂಪವರ್ಜಿತಾ ।
ಭಕ್ತಾರ್ತಿಶಮನೀ ಭವ್ಯಾ ಭವತಾಪವಿನಾಶಿನೀ ॥ ೧೦೪ ॥

---

೧೦೧. ಮತ್ತು ಆ ಮಹಾದೇವಿಯು ವೃಷಭವಾಹನಾರೂಢಳೂ ಗೌರವರ್ಣವುಳ್ಳವಳೂ ಮಹಾಕಾಳೀ ಸ್ವರೂಪಳೂ ದೇವತೆಗಳಿಂದ ಪೂಜಿತಳೂ ಸರ್ವಸಂಹಾರಕಳೂ ನಿಯಮವುಳ್ಳವಳೂ ಮತ್ತು ವಿವಿಧವಾಹನವುಳ್ಳವಳೂ ಆಗಿದ್ದಾಳೆ.

೧೦೨. ಮತ್ತು ವಿರೂಪವಾದ ನೇತ್ರವುಳ್ಳವಳೂ ಅತ್ಯಾಸ್ವಾದನಶೀಲಳೂ ಮಹಾರಾಕ್ಷಸರ ವಿಧ್ವಂಸಕಳೂ ಅನಂತ ಫಲವನ್ನು ನೀಡುವವಳೂ ನಿರ್ದೋಷವಾದ ಅಂಗವುಳ್ಳವಳೂ ಕಾಮರೂಪಳೂ ಮತ್ತು ಶೋಭಾವತಿಯೂ ಆಗಿದ್ದಾಳೆ.

೧೦೩. ಹಾಗೂ ವಿಚಿತ್ರವಾದ ರತ್ನಗಳಿಂದ ಶೋಭಿಸುವ ಕಿರೀಟವುಳ್ಳವಳೂ ಭಕ್ತರ ಪೀಡೆಗಳನ್ನು ನಿವಾರಿಸುವವಳೂ ಶರೀರ ಕೋಶದಿಂದ ಜಗದ್ರಕ್ಷಕಳೂ ಪಾಪಗಳನ್ನು ಕರ್ಷಿಸುವವಳೂ ಸೌಖ್ಯದಾತ್ರಿಯೂ ದೇವತೆಗಳ ವಿಪತ್ತನ್ನು ನಾಶಮಾಡುವವಳೂ ಆಗಿರುವಳು.

೧೦೪. ಉಪಾಧಿಕಲ್ಪಿತವಾದ ಬಹುರೂಪವುಳ್ಳವಳೂ ಸತ್ಯಸ್ವರೂಪವುಳ್ಳವಳೂ ಅಸಂಗತರೂಪವುಳ್ಳವಳೂ ರೂಪಶೂನ್ಯಳೂ ಭಕ್ತರ ಅನರ್ಥನಿವಾರಕಳೂ ಮಂಗಳಕರಳೂ ಮತ್ತು ಸಂಸಾರತಾಪಮೋಚಕಳೂ ಆಗಿದ್ದಾಳೆ.

ನಿರ್ಗುಣಾ ನಿತ್ಯವಿಭವಾ ನಿಸ್ಸಾರಾ ನಿರಪತ್ರಪಾ ।
ತಪಸ್ವಿನೀ ಸಾಮಗೀತಿರ್ಭವಾಂಕನಿಲಯಾಲಯಾ　　॥ ೧೦೫ ॥

ದೀಕ್ಷಾ ವಿದ್ಯಾಧರೀ ದೀಪ್ತಾ ಮಹೇಂದ್ರವಿನಿಪಾತಿನೀ ।
ಸರ್ವಾತಿಶಾಯಿನೀ ವಿಶ್ವಾ ಸರ್ವಸಿದ್ಧಿಪ್ರದಾಯಿನೀ　　॥ ೧೦೬ ॥

ಸರ್ವೇಶ್ವರಪ್ರಿಯಾ ಭಾರ್ಯಾ ಸಮುದ್ರಾಂತರವಾಸಿನೀ ।
ಅಕಲಂಕಾ ನಿರಾಧಾರಾ ನಿತ್ಯಸಿದ್ಧಾ ನಿರಾಮಯಾ　　॥ ೧೦೭ ॥

ಕಾಮಧೇನುರ್ಬೃಹದ್ಗರ್ಭಾ ಧೀಮಂತೀ ಮೋಹನಾಶಿನೀ ।
ನಿಃಸಂಕಲ್ಪಾ ನಿರಾತಂಕಾ ವಿನಯಾ ವಿನಯಪ್ರಿಯಾ　　॥ ೧೦೮ ॥

---

೧೦೫. ಗುಣಾತೀತಳೂ ನಿರಂತರವಾದ ವೈಭವವುಳ್ಳವಳೂ ಸಾರಾಂಶ ಶೂನ್ಯಳೂ ಲಜ್ಜಾಹೀನಳೂ ತಪಸ್ವಿನಿಯೂ ಸಾಮಗಾನಪ್ರಿಯಳೂ ಮತ್ತು ಈಶ್ವರನ ನಾಮಾಂಕವೆಂಬ ನಿಲಯದಲ್ಲಿ ವಾಸಿಸುವವಳೂ ಆಗಿರುವಳು.

೧೦೬. ದೀಕ್ಷಾರೂಪಿಣಿಯೂ ವಿದ್ಯಾಧರೀಯೂ ದೀಪ್ತಸ್ವರೂಪಳೂ ಇಂದ್ರನ ನಿಪಾತಕ್ಕೆ ಕಾರಣಳೂ ಸರ್ವಾತಿಶಾಯಿನಿಯೂ ವಿಶ್ವರೂಪಳೂ ಮತ್ತು ಸಮಸ್ತ ಸಿದ್ಧಿಗಳನ್ನು ಕೊಡುವವಳೂ ಆಗಿದ್ದಾಳೆ.

೧೦೭. ಸರ್ವೇಶ್ವರನಿಗೆ ಪ್ರೀತಿಪಾತ್ರಳಾದ ಭಾರ್ಯೆಯೂ ಸಮುದ್ರದೊಳಗಿನ ದ್ವೀಪದಲ್ಲಿ ವಾಸಿಸುವವಳೂ ಕಳಂಕರಹಿತಳೂ ಆಧಾರಶೂನ್ಯಳೂ ನಿತ್ಯಸಿದ್ಧಸ್ವರೂಪಳೂ ಮತ್ತು ವ್ಯಥಾ ವರ್ಜಿತಳೂ ಆಗಿದ್ದಾಳೆ.

೧೦೮. ಹಾಗೂ ಇಷ್ಟಾರ್ಥಗಳನ್ನು ಕೊಡುವ ಕಾಮಧೇನುವೂ ಮಹತ್ತಾದ ಗರ್ಭಸ್ವರೂಪಳೂ ಜ್ಞಾನವತಿಯೂ ಮೋಹನಾಶಕಳೂ ಸಂಕಲ್ಪಶೂನ್ಯಳೂ ಆತಂಕ ವರ್ಜಿತಳೂ ವಿನಯವತಿಯೂ ಮತ್ತು ವಿನಯದಲ್ಲಿ ಪ್ರೀತಿಯುಳ್ಳವಳೂ ಆಗಿರುವಳು.

ಜ್ವಾಲಾಮಾಲಾಸಹಸ್ರಾಢ್ಯಾ ದೇವದೇವೀ ಮನೋಮಯೀ ।
ಮಹಾಭಗವತೀ ಭರ್ಗಾ ವಾಸುದೇವಸಮುದ್ಭವಾ ॥ ೧೦೯ ॥

ಮಹೇಂದ್ರೋಪೇಂದ್ರಭಗಿನೀ ಭಕ್ತಿಗಮ್ಯಾ ಪರಾವರಾ ।
ಜ್ಞಾನಜ್ಞೇಯಾ ಜರಾತೀತಾ ವೇದಾಂತವಿಷಯಾ ಗತಿಃ ॥ ೧೧೦ ॥

ದಕ್ಷಿಣಾ ದಹತೀ ದೀರ್ಘಾ ಸರ್ವಭೂತನಮಸ್ಕೃತಾ ।
ಯೋಗಮಾಯಾ ವಿಭಾಗಜ್ಞಾ ಮಹಾಮೋಹಾ ಗರೀಯಸೀ ॥ ೧೧೧ ॥

ಸಂಧ್ಯಾ ಸರ್ವಸಮುದ್ಭೂತಿರ್ಬ್ರಹ್ಮವಿದ್ಯಾಶ್ರಯಾದಿಭಿಃ ।
ಬೀಜಾಂಕುರಸಮುದ್ಭೂತಿರ್ಮಹಾಶಕ್ತಿರ್ಮಹಾಮತಿಃ ॥ ೧೧೨ ॥

---

೧೦೯. ಮತ್ತು ಸಹಸ್ರಾರು ಜ್ವಾಲಾಮಾಲೆಗಳಿಂದ ಪ್ರಕಾಶಿತಳೂ ದೇವತೆಗಳಿಗೆ ದೇವತಾರೂಪಳೂ ಸರ್ವಮನೋಮಯಳೂ ಮಹಾ ಭಗವತೀಯೂ ಪಾಪ ಭಂಜಕಳೂ ಮತ್ತು ಪರಮಾತ್ಮನಿಂದ ಉತ್ಪನ್ನಳೂ ಆಗಿದ್ದಾಳೆ.

೧೧೦. ಮಹೇಂದ್ರ ಉಪೇಂದ್ರರಿಗೆ ಭಗಿನಿಯೂ ಭಕ್ತಿಗಮ್ಯಳೂ ಉತ್ಕೃಷ್ಟ ನಿಕೃಷ್ಟ ವಸ್ತುಸ್ವರೂಪಳೂ ಜ್ಞಾನಗಮ್ಯಳೂ ಜರಾವರ್ಜಿತಳೂ ವೇದಾಂತಗೋಚರಳೂ ಮತ್ತು ಗಮ್ಯಸ್ಥಾನಸ್ವರೂಪಳೂ ಆಗಿದ್ದಾಳೆ.

೧೧೧. ದಕ್ಷಿಣಾದೇವೀರೂಪಳೂ ವಿಶ್ವದಾಹಕಳೂ ದೀರ್ಘಮೂರ್ತಿಯುಳ್ಳವಳೂ ಸರ್ವಭೂತಗಳಿಂದ ವಂದ್ಯಳೂ ಯೋಗಮಾಯಾಸ್ವರೂಪಳೂ ವಸ್ತುವಿಭಾಗವನ್ನು ಅರಿತವಳೂ ಮತ್ತು ಜಗದ್ಗುರುವೂ ಆಗಿದ್ದಾಳೆ.

೧೧೨. ಹಾಗೂ ಸಂಧ್ಯಾದೇವತಾರೂಪಿಯೂ ಸರ್ವವಸ್ತುಗಳಿಗೆ ಕಾರಣಳೂ ಬ್ರಹ್ಮವಿದ್ಯಾಶ್ರಯಳೂ ನಮಸ್ಕಾರ್ಯಳೂ ಬೀಜ ಅಂಕುರಗಳಿಗೆ ಕಾರಣಳೂ ಮಹಾ ಶಕ್ತಿ ಸ್ವರೂಪಳೂ ಮತ್ತು ಮಹಾಜ್ಞಾನವತಿಯೂ ಆಗಿದ್ದಾಳೆ.

ಕ್ಷಾಂತಿಃ ಪ್ರಜ್ಞಾ ಚಿತಿಃ ಸಚ್ಚಿನ್ಮಹಾಭೋಗೀಂದ್ರಶಾಯಿನೀ ।
ವಿಕೃತಿಃ ಶಾಂಕರೀ ಶಾಸ್ತ್ರೀರ್ಗಣಗಂಧರ್ವಸೇವಿತಾ ॥ ೧೧೩ ॥

ವೈಶ್ವಾನರೀ ಮಹಾಶಾಲಾ ಮಹಾಸೇನಾ ಗುಹಪ್ರಿಯಾ ।
ಮಹಾರಾತ್ರಿಃ ಶಿವಾನಂದಾ ಶಚೀ ದುಃಸ್ವಪ್ನನಾಶಿನೀ ॥ ೧೧೪ ॥

ಇಜ್ಯಾ ಪೂಜ್ಯಾ ಜಗದ್ಧಾತ್ರೀ ದುರ್ವಿನೇಯಾ ಸುರೂಪಿಣೀ ।
ತಪಸ್ವಿನೀ ಸಮಾಧಿಸ್ಥಾ ತ್ರಿನೇತ್ರಾ ದಿವಿ ಸಂಸ್ಥಿತಾ ॥ ೧೧೫ ॥

ಗುಹಾಂಬಿಕಾ ಗುಣೋತ್ಪತ್ತಿರ್ಮಹಾಪೀಠಾ ಮರುತ್ಸುತಾ ।
ಹವ್ಯವಾಹಾಂತರಾಗಾದಿರ್ಹವ್ಯವಾಹಸಮುದ್ಭವಾ ॥ ೧೧೬ ॥

---

೧೧೩. ಮತ್ತು ಕ್ಷಮಾಸ್ವರೂಪಳೂ ಪ್ರಜ್ಞಾರೂಪಿಣಿಯೂ ಚೈತನ್ಯಾತ್ಮಕಳೂ ಸಚ್ಚಿತ್ ಸ್ವರೂಪಳೂ ಮಹಾಭೋಗೀಂದ್ರನಲ್ಲಿ ಶಯನಮಾಡಿದವಳೂ ವಿಕಾರ ರೂಪಳೂ ಶಂಕರನ ಸತಿಯೂ ಶಾಸಕಳೂ ಗಂಧರ್ವಗಣಗಳಿಂದ ಸೇವಿತಳೂ ಆಗಿದ್ದಾಳೆ.

೧೧೪. ಸರ್ವಜೀವಪ್ರೇರಕಳೂ ಸರ್ವರಿಗೆ ಆಶ್ರಯಳೂ ಮಹಾಸೇನಾಧ್ಯಕ್ಷಳೂ ಷಣ್ಮುಖಪ್ರಿಯಳೂ ಪ್ರಳಯಾಂತರಾತ್ರಿ ಸ್ವರೂಪಳೂ ಶಿವನ ಆನಂದಕ್ಕೆ ನಿಮಿತ್ತಳೂ ಶಚೀದೇವಿರೂಪಿಣಿಯೂ ಮತ್ತು ದುಸ್ವಪ್ನ ಫಲಗಳನ್ನು ನಾಶಮಾಡುವವಳೂ ಆಗಿರುವಳು.

೧೧೫. ಯಾಗ ಕರ್ಮದಿಂದ ಸೇವ್ಯಳೂ ಸರ್ವಪೂಜ್ಯಳೂ ಜಗತ್ತಿಗೆ ಧಾರಕಳೂ ಪರರಿಂದ ಶಿಕ್ಷಿಸಲಾಗದವಳೂ ಸುಂದರರೂಪಧಾರಿಣಿಯೂ ತಪಸ್ವಿನಿಯೂ ಸಮಾಧಿ ಅವಸ್ಥೆಯಲ್ಲಿ ನಿರತಳೂ ತ್ರಿನೇತ್ರಧಾರಿಣಿಯೂ ಮತ್ತು ಆಕಾಶದಲ್ಲಿ ವಾಸಿಸುವಳೂ ಆಗಿದ್ದಾಳೆ.

೧೧೬. ಮತ್ತು ಕುಮಾರಸ್ವಾಮಿಯ ತಾಯಿಯೂ ಗುಣಗಳಿಗೆ ಕಾರಣಳೂ ಮಹಾಪೀಠವಾಸಿನಿಯೂ ಸೂತ್ರಾತ್ಮನ ತಾಯಿಯೂ ಅಗ್ನಿ ಸ್ವರೂಪಳೂ ವ್ಯಾತು.ರೂಪ ವಾದ ರಾಗದೋಷಕ್ಕೆ ಆದಿಯೂ ಮತ್ತು ಅಗ್ನಿಯ ಉತ್ಪತ್ತಿಗೆ ಕಾರಣಳೂ ಆಗಿದ್ದಾಳೆ.

ಜಗದ್ಯೋನಿರ್ಜಗನ್ಮಾತಾ ಜನ್ಮಮೃತ್ಯುಜರಾತಿಗಾ ।
ಬುದ್ಧಿರ್ಮಹಾಬುದ್ಧಿಮತೀ ಪುರುಷಾಂತರವಾಸಿನೀ ॥ ೧೧೭ ॥

ತರಸ್ವಿನೀ ಸಮಾಧಿಸ್ಥಾ ತ್ರಿನೇತ್ರಾ ದಿವಿ ಸಂಸ್ಥಿತಾ ।
ಸರ್ವೇಂದ್ರಿಯಮನೋಮಾತಾ ಸರ್ವಭೂತಹೃದಿ ಸ್ಥಿತಾ ॥ ೧೧೮ ॥

ಸಂಸಾರತಾರಿಣೀ ವಿದ್ಯಾ ಬ್ರಹ್ಮವಾದಿಮನೋಲಯಾ ।
ಬ್ರಹ್ಮಾಣೀ ಬೃಹತೀ ಬ್ರಾಹ್ಮೀ ಬ್ರಹ್ಮಭೂತಾ ಭವಾರಣೀ ॥ ೧೧೯ ॥

ಹಿರಣ್ಮಯೀ ಮಹಾರಾತ್ರಿಃ ಸಂಸಾರಪರಿವರ್ತಿಕಾ ।
ಸುಮಾಲಿನೀ ಸುರೂಪಾ ಚ ಭಾವಿನೀ ಹಾರಿಣೀ ಪ್ರಭಾ ॥ ೧೨೦ ॥

---

೧೧೭. ಪ್ರಪಂಚಕ್ಕೆ ಕಾರಣಳೂ ಜಗದಂಬಾರೂಪಳೂ ಜನನ ಮರಣ ಮುಪ್ಪುಗಳನ್ನು ಮೀರಿದವಳೂ ಜ್ಞಾನಶಕ್ತಿರೂಪಳೂ ಮಹಾಜ್ಞಾನವತಿಯೂ ಮತ್ತು ಪುರುಷಮಧ್ಯವಾಸಿನಿಯೂ ಆಗಿರುವಳು.

೧೧೮. ಹಾಗೂ ವೇಗವತಿಯೂ ಸಮಾಧಿ ನಿರತಳೂ ತ್ರಿಣೇತ್ರಗಳಿಂದ ಶೋಭಿತಳೂ ಆಕಾಶವಾಸಿನಿಯೂ ಸರ್ವಪ್ರಾಣಿಗಳ ಇಂದ್ರಿಯ ಮತ್ತು ಮನಸ್ಸುಗಳಿಗೆ ಮಾತೆಯೂ ಮತ್ತು ಸಮಸ್ತ ಪ್ರಾಣಿಗಳ ಹೃದಯಾಕಾಶದಲ್ಲಿ ವಾಸಿಸುವವಳೂ ಆಗಿದ್ದಾಳೆ.

೧೧೯. ಮತ್ತು ಸಂಸಾರವನ್ನು ದಾಟಿಸುವವಳೂ ತತ್ವಜ್ಞಾನರೂಪಳೂ ಬ್ರಹ್ಮವಾದಿಗಳ ಚಿತ್ತದಲ್ಲಿ ವಾಸಿಸುವವಳೂ ಬ್ರಹ್ಮಪತ್ನೀರೂಪಳೂ ಮಹಾರೂಪಳೂ ಬ್ರಹ್ಮಶಕ್ತಿಸ್ವರೂಪಳೂ ಬ್ರಹ್ಮಾತ್ಮಕಳೂ ಸಂಸಾರದ ಸೃಷ್ಟಿಗೆ ಕಾರಣಳೂ ಆಗಿದ್ದಾಳೆ.

೧೨೦. ತೇಜೋಮಯಳೂ ಮಹಾರಾತ್ರಿಸ್ವರೂಪಳೂ ಸಂಸಾರಮೋಚಕಳೂ ಸುಂದರಮಾಲಾಧಾರಿಣಿಯೂ ರೂಪವತಿಯೂ ಸೃಷ್ಟಿಕಾರಣಳೂ ಸಂಹಾರ ನಿಮಿತ್ತಳೂ ಮತ್ತು ಪ್ರಭಾವತಿಯೂ ಆಗಿರುವಳು.

ಉನ್ಮೀಲನೀ ಸರ್ವಸಹಾ ಸರ್ವಪ್ರತ್ಯಯಸಾಕ್ಷಿಣೀ ।
ಸುಸೌಮ್ಯಾ ಚಂದ್ರವದನಾ ತಾಂಡವಾಸಕ್ತಮಾನಸಾ ॥ ೧೨೧ ॥

ಸತ್ತ್ವಶುದ್ಧಿಕರೀ ಶುದ್ಧಿರ್ಮಲತ್ರಯವಿನಾಶಿನೀ ।
ಜಗತ್ಪ್ರಿಯಾ ಜಗನ್ಮೂರ್ತಿಸ್ತ್ರಿಮೂರ್ತಿರಮೃತಾಶ್ರಯಾ ॥ ೧೨೨ ॥

ನಿರಾಶ್ರಯಾ ನಿರಾಹಾರಾ ನಿರಂಕುಶಪದೋದ್ಭವಾ ।
ಚಂದ್ರಹಸ್ತಾ ವಿಚಿತ್ರಾಂಗೀ ಸ್ರಗ್ವಿಣೀ ಪದ್ಮಧಾರಿಣೀ ॥ ೧೨೩ ॥

ಪರಾವರವಿಧಾನಜ್ಞಾ ಮಹಾಪುರುಷಪೂರ್ವಜಾ ।
ವಿಶ್ವೇಶ್ವರಪ್ರಿಯಾ ವಿದ್ಯುದ್ವಿದ್ಯುಜ್ಜಿಹ್ವಾ ಜಿತಶ್ರಮಾ ॥ ೧೨೪ ॥

---

೧೨೧. ಜಗತ್ಸಾಕ್ಷಿಸ್ವರೂಪಳೂ ಸರ್ವಾವಸ್ಥೆಗಳನ್ನು ಸಹಿಸುವವಳೂ ಸರ್ವ ಮನೋವೃತ್ತಿಗೆ ಸಾಕ್ಷಿಸ್ವರೂಪಳೂ ಸೌಮ್ಯಾಕಾರಳೂ ಚಂದ್ರನಂತೆ ಸುಂದರವಾದ ಮುಖವುಳ್ಳವಳೂ ಮತ್ತು ತಾಂಡವನೃತ್ಯದಲ್ಲಿ ಪ್ರಿಯವಾದ ಮಾನಸ ಉಳ್ಳವಳೂ ಆಗಿದ್ದಾಳೆ.

೧೨೨. ಚಿತ್ತ ಶುದ್ಧಿಯನ್ನು ಕೊಡುವವಳೂ ಶುದ್ಧಿಸ್ವರೂಪಳೂ ಮಲತ್ರಯ ವನ್ನು ನಿವಾರಿಸುವವಳೂ ಜಗತ್ತಿಗೆ ಪ್ರಿಯಳೂ ಜಗದಾಕಾರಳೂ ತ್ರಿಮೂರ್ತಿ ಸ್ವರೂಪಳೂ ಮತ್ತು ಅಮೃತಕ್ಕೆ ಆಶ್ರಯಳೂ ಆಗಿದ್ದಾಳೆ.

೧೨೩. ಆಧಾರಶೂನ್ಯಳೂ ಆಹಾರವರ್ಜಿತಳೂ ನಿರಂಕುಶವಾದ ಪದವಿಗೆ ಕಾರಣಳೂ ಪಾಣಿಯಲ್ಲಿ ಚಕ್ರವನ್ನು ಧರಿಸಿದವಳೂ ವಿಚಿತ್ರವಾದ ಆಕಾರವುಳ್ಳವಳೂ ಮಾಲೆಗಳನ್ನು ಧರಿಸಿದವಳೂ ಪದ್ಮವನ್ನು ಧಸಿರಿದವಳೂ ಆಗಿದ್ದಾಳೆ.

೧೨೪. ಉತ್ಕೃಷ್ಟ ಮತ್ತು ನಿಕೃಷ್ಟ ವಿಧಾನಗಳನ್ನು ತಿಳಿದವಳೂ ಮಹಾ ಪುರುಷನಿಂದ ಆದಿಯಲ್ಲಿ ಆವಿರ್ಭವಿಸಿದವಳೂ ಸರ್ವೇಶ್ವರನ ಪ್ರಿಯೆಯೂ ಮಿಂಚಿನ ಸ್ವರೂಪಳೂ ಮಿಂಚುವ ಜಿಹ್ವೆಯುಳ್ಳವಳೂ ಮತ್ತು ಜಯಿಸಿದ ಶ್ರಮವುಳ್ಳವಳೂ ಆಗಿದ್ದಾಳೆ.

ವಿದ್ಯಾಮಯೀ ಸಹಸ್ರಾಕ್ಷೀ ಸಹಸ್ರವದನಾತ್ಮಜಾ ।
ಸಹಸ್ರರಶ್ಮಿಃ ಸತ್ತ್ವಸ್ಥಾ ಮಹೇಶ್ವರಪದಾಶ್ರಯಾ ॥ ೧೨೫ ॥

ಕ್ಷಾಲಿನೀ ಮೃಣ್ಮಯೀ ವ್ಯಾಪ್ತಾ ತೈಜಸೀ ಪದ್ಮಬೋಧಿಕಾ ।
ಮಹಾಮಾಯಾಶ್ರಯಾ ಮಾನ್ಯಾ ಮಹಾದೇವಮನೋರಮಾ॥ ೧೨೬ ॥

ವ್ಯೋಮಲಕ್ಷ್ಮೀಃ ಸಿಂಹರಥಾ ಚೇಕಿತಾನಾ ಮಿತಪ್ರಭಾ ।
ವೀರೇಶ್ವರೀ ವಿಮಾನಸ್ಥಾ ವಿಶೋಕಾ ಶೋಕನಾಶಿನೀ ॥ ೧೨೭ ॥

ಅನಾಹತಾ ಕುಂಡಲಿನೀ ನಲಿನೀ ಪದ್ಮಭಾಸಿನೀ ।
ಸದಾನಂದಾ ಸದಾಕೀರ್ತಿಃ ಸರ್ವಭೂತಾಶ್ರಯಸ್ಥಿತಾ ॥ ೧೨೮ ॥

---

೧೨೫. ವಿದ್ಯಾಪೂರ್ಣಳೂ ಸಹಸ್ರನೇತ್ರ ಶೋಭಿತಳೂ ಸಹಸ್ರಮುಖವುಳ್ಳ ಪರಮಾತ್ಮನ ಆತ್ಮಜೆಯೂ ಸಹಸ್ರ ಕಿರಣಶೋಭಿತಳೂ ಚಿತ್ತದಲ್ಲಿ ವಾಸಿಸುವವಳೂ ಮಹೇಶ್ವರನ ಚರಣವನ್ನು ಆಶ್ರಯಿಸಿದವಳೂ ಆಗಿದ್ದಾಳೆ.

೧೨೬. ಪ್ರಪಂಚವನ್ನು ಶೋಧಿಸುವವಳೂ ಮೃತ್ತಿಕಾರೂಪಿಣಿಯೂ ವ್ಯಾಪಕಳೂ ತೇಜೋರೂಪಿಣಿಯೂ ಪದ್ಮಗಳನ್ನು ಅರಳಿಸುವವಳೂ ಮಹಾ ಮಾಯಾ ಶಕ್ತಿಯ ಆಶ್ರಯಳೂ ಮಾನ್ಯಳೂ ಮತ್ತು ಮಹಾದೇವನ ಪ್ರಿಯಭಾರ್ಯೆಯೂ ಆಗಿದ್ದಾಳೆ.

೧೨೭. ಆಕಾಶಲಕ್ಷ್ಮಿಸ್ವರೂಪಳೂ ಸಿಂಹವಾಹನಾರೂಢಳೂ ಪ್ರಜ್ಞಾತ್ಮಕಳೂ ಅಪಾರವಾದ ಶೋಭೆಯುಳ್ಳವಳೂ ವಿಶ್ವಕ್ಕೆ ಈಶ್ವರಿಯೂ ವಿಮಾನಾರೂಢಳೂ ಶೋಕವರ್ಜಿತಳೂ ಮತ್ತು ಶೋಕನಿವಾರಕಳೂ ಆಗಿದ್ದಾಳೆ.

೧೨೮. ಅನಾಹತಚಕ್ರರೂಪಳೂ ಕುಂಡಲಿನೀಸ್ವರೂಪಳೂ ಪದ್ಮಲತಾರೂಪಿಣಿಯೂ ಪದ್ಮದಲ್ಲಿ ವಾಸಿಸುವವಳೂ ಸದಾನಂದಮೂರ್ತಿಯೂ ಸಂತತಕೀರ್ತಿಸ್ವರೂಪಳೂ ಮತ್ತು ಸರ್ವಭೂತಗಳಿಗೆ ಆಶ್ರಯರೂಪಳಾಗಿರುವವಳೂ ಆಗಿದ್ದಾಳೆ.

ವಾಗ್ದೇವತಾ ಬ್ರಹ್ಮಕಲಾ ಕಲಾತೀತಾ ಕಲಾರಣೀ ।
ಬ್ರಹ್ಮಶ್ರೀರ್ಬ್ರಹ್ಮಹೃದಯಾ ಬ್ರಹ್ಮವಿಷ್ಣುಶಿವಪ್ರಿಯಾ ॥ ೧೨೯ ॥

ವ್ಯೋಮಶಕ್ತಿಃ ಕ್ರಿಯಾಶಕ್ತಿರ್ಜ್ಞಾನಶಕ್ತಿಃ ಪರಾ ಗತಿಃ ।
ಕ್ಷೋಭಿಕಾ ಬಂಧಿಕಾ ಭೇದ್ಯಾ ಭೇದಾಭೇದವಿವರ್ಜಿತಾ ॥ ೧೩೦ ॥

ಅಭಿನ್ನಾ ಭಿನ್ನಸಂಸ್ಥಾನಾ ವಶಿನೀ ವಂಶಹಾರಿಣೀ ।
ಗುಹ್ಯಶಕ್ತಿರ್ಗುಣಾತೀತಾ ಸರ್ವದಾ ಸರ್ವತೋಮುಖೀ ॥ ೧೩೧ ॥

ಭಗಿನೀ ಭಗವತ್ಪತ್ನೀ ಸಕಲಾ ಕಾಲಹಾರಿಣೀ ।
ಸರ್ವವಿತ್ ಸರ್ವತೋಭದ್ರಾ ಗುಹ್ಯಾತೀತಾ ಗುಹಾವಲಿಃ ॥ ೧೩೨ ॥

---

೧೨೯. ಹಾಗು ವಾಗ್ದೇವತಾ ರೂಪಿಣಿಯೂ, ಪರಮಾತ್ಮಾಂಶರೂಪಿಣಿಯೂ ಕಲಾವರ್ಜಿತಳೂ, ಕಲೆಗಳೆಂಬ ಅಗ್ನಿಗೆ ಅರಣಿಸ್ವರೂಪಳೂ, ಬ್ರಹ್ಮಶ್ರೀ ರಾಜಿತಳೂ, ವೇದದ ಹೃದಯ ಸ್ವರೂಪಳೂ, ಬ್ರಹ್ಮ-ವಿಷ್ಣು-ಶಿವ ಎಂಬ ತ್ರಿಮೂರ್ತಿಗಳ ಪ್ರೇಮಾಧಾರಳೂ ಆಗಿದ್ದಾಳೆ.

೧೩೦. ಮತ್ತು ವ್ಯೋಮಶಕ್ತಿ,ಕ್ರಿಯಾಶಕ್ತಿ, ಜ್ಞಾನಶಕ್ತಿ ಎಂಬ ಶಕ್ತಿತ್ರಯ ಸ್ವರೂಪಳೂ, ಪರಮಗತಿ ಸ್ವರೂಪಳೂ, ಜಗತ್ತನ್ನು ಕ್ಷೋಭಿಸುವವಳೂ, ಸರ್ವ ಬಂಧಕಳೂ,ಅಭೇದ್ಯಳೂ ಮತ್ತು ಭೇದ ಅಭೇದಾಂಶಗಳಿಂದ ವರ್ಜಿತಳೂ ಆಗಿದ್ದಾಳೆ.

೧೩೧. ಐಕ್ಯಸ್ವರೂಪಳೂ, ವಿಭಿನ್ನವಾದ ಸನ್ನಿವೇಶವುಳ್ಳವಳೂ, ಸರ್ವ ವಶಂಕರಿಯೂ, ವಂಶವನ್ನು ನಡೆಸುವವಳೂ, ಗುಹ್ಯವಾದ ಶಕ್ತಿಸ್ವರೂಪಳೂ, ಗುಣಾತೀತಳೂ, ಸರ್ವಇಷ್ಟಗಳನ್ನು ಅನುಗ್ರಹಿಸುವವಳೂ ಮತ್ತು ಸರ್ವತೋಮುಖಿಯೂ ಆಗಿರುವಳು.

೧೩೨. ಮತ್ತು ಭಗವತಿಯೂ, ಭಗವಂತನ ಪತ್ನಿಯೂ ಸರ್ವಾತ್ಮಕಳೂ ಮೃತ್ಯುನಾಶಕಳೂ ಸರ್ವಜ್ಞಳೂ ಸರ್ವಾಂಶಗಳಲ್ಲಿ ಭದ್ರಂಕರಳೂ ರಹಸ್ಯಾತೀತಳೂ ಮತ್ತು ಗುಹಾಶ್ರೇಣಿ ಸ್ವರೂಪಳೂ ಆಗಿದ್ದಾಳೆ.

ಪ್ರಕ್ರಿಯಾ ಯೋಗಿಮಾತಾ ಚ ಗಂಗಾ ವಿಶ್ವೇಶ್ವರೇಶ್ವರೀ ।
ಕಲಿಲಾ ಕಪಿಲಾ ಕಾಂತಾ ಕಮಲಾಭಾ ಕಲಾಂತರಾ ॥ ೧೩೩ ॥

ಪುಣ್ಯಾ ಪುಷ್ಕರಿಣೀ ಭೋಕ್ತ್ರೀ ಪುರಂದರಪುರಃಸರಾ ।
ಪೋಷಿಣೀ ಪರಮೈಶ್ವರ್ಯಭೂತಿದಾ ಭೂತಿಭೂಷಣಾ ॥ ೧೩೪ ॥

ಪಂಚಬ್ರಹ್ಮಸಮುತ್ಪತ್ತಿಃ ಪರಮಾರ್ಥಾರ್ಥವಿಗ್ರಹಾ ।
ಧರ್ಮೋದಯಾ ಭಾನುಮತೀ ಯೋಗಿಜ್ಞೇಯಾ ಮನೋಜವಾ ।೧೩೫।

ಮನೋರಮಾ ಮನೋರಸ್ಕಾ ತಾಪಸೀ ವೇದರೂಪಿಣೀ ।
ವೇದಶಕ್ತಿರ್ವೇದಮಾತಾ ವೇದವಿದ್ಯಾಪ್ರಕಾಶಿನೀ ॥ ೧೩೬ ॥

---

೧೩೩. ಜಗದ್ರಚನಾ ಸ್ವರೂಪಳೂ ಯೋಗ ಮಾತೆಯೂ ಗಂಗಾನದೀ ರೂಪಿಣಿಯೂ ವಿಶ್ವೇಶ್ವರನ ನಿಯಾಮಕಳೂ ಕಲಿಲಾವಸ್ಥಾ ರೂಪಳೂ ಕಪಿಲವರ್ಣವುಳ್ಳವಳೂ ರಮಣೀಯಳೂ ಕಮಲದಂತೆ ಪ್ರಕಾಶಿಸುವವಳೂ ಮತ್ತು ಅವಯವ ಸಮಷ್ಟಿ ಸ್ವರೂಪಳೂ ಆಗಿದ್ದಾಳೆ.

೧೩೪. ಹಾಗು ಪುಣ್ಯಾತ್ಮಕಳೂ ಕಮಲಧಾರಿಣಿಯೂ ಭೋಗವತಿಯೂ ಇಂದ್ರನೆಂಬ ಸೇವಕನುಳ್ಳವಳೂ ಸರ್ವರಕ್ಷಕಳೂ ಪರಮೈಶ್ವರ್ಯಸಂಪತ್ತನ್ನು ನೀಡುವವಳೂ ಮತ್ತು ಭಸ್ಮಾಲಂಕಾರ ರಂಜಿತಳೂ ಆಗಿದ್ದಾಳೆ

೧೩೫. ಮತ್ತು ಗಣೇಶಾದಿ ಪಂಚಬ್ರಹ್ಮೋತ್ಪತ್ತಿಗೆ ಕಾರಣಳೂ ಪಾರಮಾರ್ಥಿಕ ತತ್ವದ ವಿಗ್ರಹವುಳ್ಳವಳೂ ಧರ್ಮಕ್ಕೆ ಉದಯ ರೂಪಳೂ ಕಿರಣ ಪಂಕ್ತಿ ಶೋಭಿತಳೂ ಯೋಗಿಗಳಿಗೆ ಗಮ್ಯಳೂ ಮತ್ತು ಮನೋವೇಗವುಳ್ಳವಳೂ ಆಗಿದ್ದಾಳೆ.

೧೩೬. ಮನಸ್ಸನ್ನು ರಂಜಿಸುವವಳೂ ಹೃದಯ ಮಧ್ಯದಲ್ಲಿರುವ ಚಿತ್ತದಲ್ಲಿ ವಾಸಿಸುವವಳೂ ತಾಪಸಿಯೂ ವೇದ ಸ್ವರೂಪಳೂ ವೇದಶಕ್ತಿ ಸ್ವರೂಪಳೂ ವೇದಗಳ ಜನನಿಯೂ ಮತ್ತು ವೇದವಿದ್ಯೆಯನ್ನು ಪ್ರಕಾಶಗೊಳಿಸಿದವಳೂ ಆಗಿದ್ದಾಳೆ.

ಯೋಗೇಶ್ವರೇಶ್ವರೀ ಮಾತಾ ಮಹಾಶಕ್ತಿರ್ಮನೋಮಯೀ ।
ವಿಶ್ವಾವಸ್ಥಾ ವಿಯನ್ಮೂರ್ತಿರ್ವಿದ್ಯುನ್ಮಾಲಾ ವಿಹಾಯಸೀ　　॥ ೧೩೭ ॥

ಕಿನ್ನರೀ ಸುರಭೀ ವಿದ್ಯಾ ನಂದಿನೀ ನಂದಿವಲ್ಲಭಾ ।
ಭಾರತೀ ಪರಮಾನಂದಾ ಪರಾಪರವಿಭೇದಿಕಾ　　॥ ೧೩೮ ॥

ಸರ್ವಪ್ರಹರಣೋಪೇತಾ ಕಾಮ್ಯಾ ಕಾಮೇಶ್ವರೇಶ್ವರೀ ।
ಅಚಿಂತ್ಯಾನಂತವಿಭವಾ ಭೂಲೇಖಾ ಕನಕಪ್ರಭಾ　　॥ ೧೩೯ ॥

ಕೂಷ್ಮಾಂಡೀ ಧನರತ್ನಾಢ್ಯಾ ಸುಗಂಧಾ ಗಂಧದಾಯಿನೀ ।
ತ್ರಿವಿಕ್ರಮಪದೋದ್ಭೂತಾ ಧನುಷ್ಪಾಣಿಃ ಶಿವೋದಯಾ　　॥ ೧೪೦ ॥

---

೧೩೭. ಮಹಾಯೋಗೇಶ್ವರರಿಗೆ ಈಶ್ವರಿಯೂ ಜಗಜ್ಜನನಿಯೂ ಮಹಾಶಕ್ತಿ ಸ್ವರೂಪಳೂ ಮನೋಮಯಳೂ ವಿಶ್ವಾತ್ಮಕವಾದ ಅವಸ್ಥೆ ಯುಳ್ಳವಳೂ ಆಕಾಶ ಮೂರ್ತಿಯುಳ್ಳವಳೂ ಮಿಂಚಿನ ಶ್ರೇಣಿಯಂತೆ ಹೊಳೆಯುವವಳೂ ಮತ್ತು ಆಕಾಶ ವಾಸಿನಿಯೂ ಆಗಿದ್ದಾಳೆ.

೧೩೮. ಕಿನ್ನರಾಂಗನೆಯೂ ಕಾಮಧೇನು ರೂಪಳೂ ಜ್ಞಾನರೂಪಿಣಿಯೂ ಆನಂದ ದಾಯಕಳೂ ನಂದಿಪ್ರಿಯಳೂ ವಾಗ್ದೇವತಾರೂಪಿಣಿಯೂ ಪರಮಾನಂದ ಸ್ವರೂಪಳೂ ಮತ್ತು ಪರಾಪರವಸ್ತುಗಳನ್ನು ವಿಂಗಡಿಸುವವಳೂ ಆಗಿದ್ದಾಳೆ.

೧೩೯. ಸರ್ವಾಯುಧಗಳನ್ನು ಧರಿಸಿದವಳೂ ಸರ್ವಭೂತಗಳಿಗೆ ಕಾಮ್ಯಳೂ ಕಾಮೇಶ್ವರನ ರಾಜ್ಞಿಯೂ ಧ್ಯಾನಾತೀತಳೂ ಅಪಾರ ವೈಭವವುಳ್ಳವಳೂ ಹ್ರೀಂಕಾರ ಸ್ವರೂಪಳೂ ಸುವರ್ಣದಂತೆ ಉಜ್ವಲ ಕಾಂತಿಯುಳ್ಳವಳೂ ಆಗಿದ್ದಾಳೆ.

೧೪೦. ಕೂಷ್ಮಾಂಡದೇವತಾರೂಪಳೂ ಧನರತ್ನ ಸಂಪತ್ತಿಯಿಂದ ಆಢ್ಯಳೂ ಸುಗಂಧವುಳ್ಳವಳೂ ಸುಗಂಧದಾಯಕಳೂ ಮಹಾವಿಷ್ಣುವಿನ ಪಾದದಿಂದ ಜನಿಸಿ ದವಳೂ ಪಾಣಿಯಲ್ಲಿ ಬಿಲ್ಲನ್ನು ಹಿಡಿದವಳೂ ಭಾಗ್ಯೋದಯ ಸ್ವರೂಪಳೂ ಆಗಿದ್ದಾಳೆ.

ಸುದುರ್ಲಭಾ ಧನಾಧ್ಯಕ್ಷಾ ಧನ್ಯಾ ಪಿಂಗಲಲೋಚನಾ ।
ಶಾಂತಿಃ ಪ್ರಭಾವತೀ ದೀಪ್ತಿಃ ಪಂಕಜಾಯತಲೋಚನಾ ॥ ೧೪೧ ॥

ಆದ್ಯಾ ಭೂಃ ಕಮಲೋದ್ಭೂತಾ ಗವಾಂ ಮಾತಾ ರಣಪ್ರಿಯಾ ।
ಸತ್ಕ್ರಿಯಾ ಗಿರಿಶಾ ಶುದ್ಧಿರ್ನಿತ್ಯಪುಷ್ಟಾ ನಿರಂತರಾ ॥ ೧೪೨ ॥

ದುರ್ಗಾ ಕಾತ್ಯಾಯನೀ ಚಂಡೀ ಚರ್ಚಿತಾಂಗಾ ಸುವಿಗ್ರಹಾ ।
ಹಿರಣ್ಯವರ್ಣಾ ಜಗತೀ ಜಗದ್ಯಂತ್ರಪ್ರವರ್ತಿಕಾ ॥ ೧೪೩ ॥

ಮಂದರಾದ್ರಿನಿವಾಸಾ ಚ ಗರದಾ ಸ್ವರ್ಣಮಾಲಿನೀ ।
ರತ್ನಮಾಲಾ ರತ್ನಗರ್ಭಾ ಪುಷ್ಟಿರ್ವಿಶ್ವಪ್ರಮಾಥಿನೀ ॥ ೧೪೪ ॥

---

೧೪೧. ಅತ್ಯಂತ ದುರ್ಲಭಳೂ ಧನಕ್ಕೆ ಅಧ್ಯಕ್ಷಳೂ ಕೃತಕೃತ್ಯಳೂ ಪಿಂಗಲ ವರ್ಣದ ನೇತ್ರವುಳ್ಳವಳೂ ಶಾಂತಿಸ್ವರೂಪಳೂ ಕಾಂತಿಯುಳ್ಳವಳೂ ಉಜ್ವಲಸ್ವರೂಪಳೂ ತಾವರೆಯಂತೆ ದೀರ್ಘವಾದ ನೇತ್ರವುಳ್ಳವಳೂ ಆಗಿದ್ದಾಳೆ.

೧೪೨. ಎಲ್ಲಕ್ಕೂ ಆದಿರೂಪಳೂ ಭೂದೇವತಾ ರೂಪಿಣಿಯೂ ಕಮಲದಿಂದ ಜನಿಸಿದವಳೂ ವೇದವಾಕ್ಯ-ಗೋವುಗಳ ಮಾತೆಯೂ ಯುದ್ಧಪ್ರಿಯಳೂ ಸತ್ಕಾರ ಸ್ವರೂಪಳೂ ಪರ್ವತದಲ್ಲಿ ಶಯನಮಾಡುವವಳೂ ಶುದ್ಧಿಸ್ವರೂಪಳೂ ಸಂತತವಾದ ಪೂರ್ಣರೂಪವುಳ್ಳವಳೂ ಮತ್ತು ತಾರತಮ್ಯರಹಿತಳೂ ಆಗಿದ್ದಾಳೆ.

೧೪೩. ದುರ್ಗಮ ಸ್ವರೂಪಳೂ ಕಾತ್ಯಾಯಿನೀ ದೇವಿಯೂ ಚಂಡಸ್ವರೂಪವುಳ್ಳವಳೂ ಸುಗಂಧದಿಂದ ಲೇಪಿಸಿದ ಅಂಗವುಳ್ಳವಳೂ ಸುಂದರ ವಿಗ್ರಹವುಳ್ಳವಳೂ ಸುವರ್ಣದಂತೆ ವರ್ಣವುಳ್ಳವಳೂ ಜಗತೀಛಂದಃಸ್ವರೂಪಳೂ ಜಗದ್ಯಂತ್ರವನ್ನು ಪ್ರವರ್ತಿಸುವವಳೂ ಆಗಿದ್ದಾಳೆ.

೧೪೪. ಮಂದರ ಪರ್ವತದಲ್ಲಿ ವಾಸಿಸುವವಳೂ ವಿಷಭಂಜಕಳೂ ಸುವರ್ಣ ಮಾಲಾಧಾರಿಣಿಯೂ ರತ್ನಶ್ರೇಣಿ ಸ್ವರೂಪಳೂ ರತ್ನವನ್ನು ಗರ್ಭದಲ್ಲಿರಿಸಿದವಳೂ ಪುಷ್ಟಿಸ್ವರೂಪಳೂ ಪ್ರಪಂಚವನ್ನು ಸಂಹರಿಸುವವಳೂ ಆಗಿದ್ದಾಳೆ.

ಪದ್ಮನಾಭಾ ಪದ್ಮನಿಭಾ ನಿತ್ಯರುಷ್ಟಾನ್ಮೃತೋದ್ಭವಾ।
ಧುನ್ವತೀ ದುಷ್ಪ್ರಕಂಪಾ ಚ ಸೂರ್ಯಮಾತಾ ದೃಷದ್ವತೀ ॥ ೧೪೫ ॥

ಮಹೇಂದ್ರಭಗಿನೀ ಸೌಮ್ಯಾ ವರೇಣ್ಯಾ ವರದಾಯಿಕಾ ।
ಕಲ್ಯಾಣೀ ಕಮಲಾವಾಸಾ ಪಂಚಚೂಡಾ ವರಪ್ರದಾ ॥ ೧೪೬ ॥

ವಾಚ್ಯಾಮರೇಶ್ವರೀ ವಿದ್ಯಾ ದುರ್ಜಯಾ ದುರತಿಕ್ರಮಾ ।
ಕಾಲರಾತ್ರಿರ್ಮಹಾವೇಗಾ ವೀರಭದ್ರಪ್ರಿಯಾ ಹಿತಾ ॥ ೧೪೭ ॥

ಭದ್ರಕಾಲೀ ಜಗನ್ಮಾತಾ ಭಕ್ತಾನಾಂ ಭದ್ರದಾಯಿನೀ ।
ಕರಾಲಾ ಪಿಂಗಲಾಕಾರಾ ಕಾಮಭೇದಾ ಮಹಾಸ್ವನಾ ॥ ೧೪೮ ॥

---

೧೪೫. ನಾಭಿಯಲ್ಲಿ ಪದ್ಮವನ್ನು ಧರಿಸಿದವಳೂ ಪದ್ಮದಂತೆ ಸುಂದರಕಾಂತಿಯುಳ ವಳೂ ನಿರಂತರವಾದ ಕ್ರೋಧದಿಂದ ಜ್ವಲಿಸುವವಳೂ ಅಮೃತಕ್ಕೆ ಕಾರಣಳೂ ವಿಪತ್ತುಗಳನ್ನು ದೂರಮಾಡುವವಳೂ ಅಚಲ ಸ್ವಭಾವಳೂ ಸೂರ್ಯನ ಮಾತೆಯೂ ಮತ್ತು ರತ್ನ ಮುಂತಾದ ಉತ್ತಮ ಶಿಲಾಭರಣಗಳನ್ನು ಧರಿಸಿದವಳೂ ಆಗಿದ್ದಾಳೆ.

೧೪೬. ಮಹೇಂದ್ರನ ಭಗಿನಿಯೂ ಸೌಮ್ಯಾಕಾರವುಳ್ಳವಳೂ ಶ್ರೇಷ್ಠರೂಪಳೂ ವರಗಳನ್ನು ಕರುಣಿಸುವವಳೂ ಮಂಗಳಸ್ವರೂಪಳೂ ಕಮಲದಲ್ಲಿ ವಾಸಿಸುವವಳೂ ಪಂಚಚೂಡಾಲಂಕೃತಳೂ ಮತ್ತು ಇಷ್ಟಾರ್ಥದಾಯಕಳೂ ಆಗಿದ್ದಾಳೆ.

೧೪೭. ಸರ್ವರಿಗೆ ಸ್ತೋತ್ರಾರ್ಹಳೂ ದೇವತೆಗಳಿಗೆ ಈಶ್ವರಿಯೂ ಜ್ಞಾನರೂಪಿಣಿಯೂ ಜಯಿಸಲು ಅಶಕ್ಯಳೂ ಅತಿಕ್ರಮಿಸಲಾಗದವಳೂ ಕಲ್ಪಾಂತರಾತ್ರಿರೂಪಳೂ ಮಹಾ ವೇಗವುಳ್ಳವಳೂ ವೀರಭದ್ರನ ಪ್ರಿಯೆಯೂ ಹಿತಕರಳೂ ಆಗಿದ್ದಾಳೆ.

೧೪೮. ಮತ್ತು ಭದ್ರಕಾಳೀಸ್ವರೂಪಳೂ ಜಗನ್ಮಾತೆಯೂ ಭಕ್ತರ ಕಲ್ಯಾಣಗಳನ್ನು ಕೊಡುವವಳೂ ಕರಾಳರೂಪಳೂ ಪಿಂಗಲವರ್ಣದ ಆಕಾರವುಳ್ಳವಳೂ ಕಾಮನನ್ನು ಭೇದಿಸಿದವಳೂ ಉಗ್ರನಾದವುಳ್ಳವಳೂ ಆಗಿದ್ದಾಳೆ.

ಯಶಸ್ವಿನೀ ಯಶೋದಾ ಚ ಷಡಧ್ವಪರಿವರ್ತಿಕಾ ।
ಶಂಖಿನೀ ಪದ್ಮಿನೀ ಸಾಂಖ್ಯಾ ಸಾಂಖ್ಯಯೋಗಪ್ರವರ್ತಿಕಾ ॥ ೧೪೯ ॥

ಚೈತ್ರಾ ಸಂವತ್ಸರಾರೂಢಾ ಜಗತ್ಸಂಪೂರಣೀ ಧ್ವಜಾ ।
ಶುಂಭಾರಿಃ ಖೇಚರೀ ಸ್ವಸ್ಥಾ ಕಂಬುಗ್ರೀವಾ ಕಲಿಪ್ರಿಯಾ ॥ ೧೫೦ ॥

ಖಗಧ್ವಜಾ ಖಗಾರೂಢಾ ವಾರಾಹೀ ಪೂಗಮಾಲಿನೀ ।
ಐಶ್ವರ್ಯಪದ್ಮನಿಲಯಾ ವಿರಕ್ತಾ ಗರುಡಾಸನಾ ॥ ೧೫೧ ॥

ಜಯಂತೀ ಹೃದ್ಗುಹಾಗಮ್ಯಾ ಗಹ್ವರೇಷ್ಠಾ ಗಣಾಗ್ರಣೀಃ ।
ಸಂಕಲ್ಪಸಿದ್ಧಾ ಸಾಮ್ಯಸ್ಥಾ ಸರ್ವವಿಜ್ಞಾನದಾಯಿನೀ ॥ ೧೫೨ ॥

---

೧೪೯. ಕೀರ್ತಿಶಾಲಿನಿಯೂ ಕೀರ್ತಿದಾಯಕಳೂ ಷಡಧ್ವಗಳನ್ನು ಪರಿವರ್ತಿಸುವವಳೂ ಶಂಖಪದ್ಮಗಳನ್ನು ಧರಿಸಿದವಳೂ ತತ್ವವಿದ್ಯಾಗಮ್ಯಳೂ ಸಾಂಖ್ಯಯೋಗಗಳ ಪ್ರವರ್ತಕಳೂ ಆಗಿದ್ದಾಳೆ.

೧೫೦. ಚೈತ್ರಾದಿಮಾಸರೂಪಳೂ ಸಂವತ್ಸರಾದಿ ಕಾಲಾತ್ಮಕಳೂ ಜಗತ್ತನ್ನು ಪೂರ್ಣಗೊಳಿಸುವವಳೂ ಧ್ವಜಸ್ವರೂಪಳೂ ಶುಂಭಾಸುರನನ್ನು ನಿಗ್ರಹಿಸಿದವಳೂ ಸ್ವಸ್ವರೂಪದಲ್ಲಿರುವವಳೂ ಶಂಖದಂತೆ ಕಂಠವುಳ್ಳವಳೂ ಮತ್ತು ಕಲಿಯುಗಪ್ರಿಯಳೂ ಆಗಿದ್ದಾಳೆ.

೧೫೧. ಮತ್ತು ಪಕ್ಷಿ ಎಂಬ ಧ್ವಜಚಿಹ್ನವುಳ್ಳವಳೂ ಪಕ್ಷಿವಾಹನಾರೂಢಳೂ ವರಾಹಮೂರ್ತಿಸ್ವರೂಪಳೂ ಪೂಗಪುಷ್ಪಮಾಲೆಯುಳ್ಳವಳೂ ಐಶ್ವರ್ಯವೆಂಬ ಪದ್ಮವಾಸಿನಿಯೂ ವಿರಕ್ತಳೂ ಮತ್ತು ಗರುಡಾಸನದಲ್ಲಿ ಕುಳಿತಿರುವವಳೂ ಆಗಿದ್ದಾಳೆ.

೧೫೨. ಜಯಂತೀರೂಪಳೂ ಹೃದಯಗುಹೆಯಲ್ಲಿ ಗಮ್ಯಳೂ ಗಹನಸ್ಥಾನದಲ್ಲಿರುವವಳೂ ಗಣಗಳಿಗೆ ನಾಯಕಳೂ ಸಂಕಲ್ಪಸಿದ್ಧಿಯುಳ್ಳವಳೂ ಸಾಮ್ಯರೂಪದಲ್ಲಿರುವವಳೂ ಸಮಸ್ತ ಜ್ಞಾನವನ್ನು ಕೊಡುವವಳೂ ಆಗಿದ್ದಾಳೆ.

ಕಲಿಃ ಕಲ್ಕವಿಹಂತ್ರೀ ಚ ಗುಹ್ಯೋಪನಿಷದುತ್ತಮಾ ।
ನಿಷ್ಠಾ ದೃಷ್ಟಿಃ ಸ್ಮೃತಿರ್ವ್ಯಾಪ್ತಿಃ ಪುಷ್ಟಿಸ್ತುಷ್ಟಿಃ ಕ್ರಿಯಾವತೀ ॥ ೧೫೩ ॥

ವಿಶ್ವಾಮರೇಶ್ವರೇಶಾನಾ ಭುಕ್ತಿರ್ಮುಕ್ತಿಃ ಶಿವಾಮೃತಾ ।
ಲೋಹಿತಾ ಸರ್ಪಮಾಲಾ ಚ ಭೀಷಣೀ ವನಮಾಲಿನೀ ॥ ೧೫೪ ॥

ಅನಂತಶಯನಾನನ್ತಾ ನರನಾರಾಯಣೋದ್ಭವಾ ।
ನೃಸಿಂಹೀ ದೈತ್ಯಮಥನೀ ಶಂಖಚಕ್ರಗದಾಧರಾ ॥ ೧೫೫ ॥

ಸಂಕರ್ಷಣೀ ಸಮುತ್ಪತ್ತಿರಂಬಿಕಾ ಪಾದಸಂಶ್ರಯಾ ।
ಮಹಾಜ್ವಾಲಾ ಮಹಾಭೂತಿಃ ಸುಮೂರ್ತಿಃ ಸರ್ವಕಾಮಧುಕ್ ॥೧೫೬॥

---

೧೫೩. ಕಲಿಸ್ವರೂಪಳೂ ಕಲ್ಮಶವನ್ನು ನಿವಾರಿಸುವವಳೂ ರಹಸ್ಯವಿದ್ಯಾರೂಪಳೂ ಶ್ರೇಷ್ಠಳೂ ನಿತ್ಯರೂಪಳೂ ದೃಷ್ಟಿರೂಪಳೂ ಸ್ಮೃತಿರೂಪಳೂ ವ್ಯಾಪ್ತಿಯುಳ್ಳವಳೂ ಪುಷ್ಟಿಸ್ವರೂಪಳೂ ಸಂತೋಷಾತ್ಮಕಳೂ ಮತ್ತು ಕ್ರಿಯಾಧಾರಳೂ ಆಗಿದ್ದಾಳೆ.

೧೫೪. ಹಾಗೂ ಸಮಸ್ತ ದೇವತಾಧಿಪತಿಗಳಿಗೆ ಪ್ರಭುವೂ ಭೋಗಮೋಕ್ಷ ಮಂಗಳ ಅಮೃತಸ್ವರೂಪಳೂ ಲೋಹಿತವರ್ಣವುಳ್ಳವಳೂ ಸರ್ಪಮಾಲಾಧಾರಿಣಿಯೂ ಭಯಂಕರಳೂ ವನಮಾಲಾಧಾರಿಣಿಯೂ ಆಗಿರುವಳು.

೧೫೫. ಶೇಷಶಯನದಲ್ಲಿ ಇರುವವಳೂ ಅಂತಶೂನ್ಯಳೂ ನರನಾರಾಯಣರಿಗೆ ಕಾರಣಳೂ ನರಸಿಂಹಸ್ವರೂಪಳೂ ದೈತ್ಯರನ್ನು ಮರ್ದಿಸುವವಳೂ ಮತ್ತು ಶಂಖ ಚಕ್ರಗದಾಧಾರಿಣಿಯೂ ಆಗಿದ್ದಾಳೆ.

೧೫೬. ಸಂಕರ್ಷಣಸ್ವರೂಪಳೂ ಜಗತ್ಕಾರಣಳೂ ಜಗನ್ಮಾತೆಯೂ ಪಾದವೆಂಬ ಆಶ್ರಯದಾತೃವೂ ಮಹಾಜ್ವಾಲಾಸ್ವರೂಪಳೂ ಪರಮೈಶ್ವರ್ಯರೂಪಳೂ ಸುಂದರವಾದ ವಿಗ್ರಹವುಳ್ಳವಳೂ ಮತ್ತು ಸಮಸ್ತ ಇಷ್ಟಾರ್ಥಗಳನ್ನು ನೀಡುವವಳೂ ಆಗಿದ್ದಾಳೆ.

ಶುಭ್ರಾ ಚ ಸುಸ್ತನಾ ಸೌರೀ ಧರ್ಮಕಾಮಾರ್ಥಮೋಕ್ಷದಾ ।
ಭ್ರೂಮಧ್ಯನಿಲಯಾ ಪೂರ್ವಾ ಪುರಾಣಪುರುಷಾರಣಿಃ ॥ ೧೫೭ ॥

ಮಹಾವಿಭೂತಿದಾ ಮಧ್ಯಾ ಸರೋಜನಯನಾ ಸಮಾ !
ಅಷ್ಟಾದಶಭುಜಾನಾದ್ಯಾ ನೀಲೋತ್ಪಲದಲಪ್ರಭಾ । ॥ ೧೫೮ ॥

ಸರ್ವಶಕ್ತ್ಯಾಸನಾರೂಢಾ ಧರ್ಮಾಧರ್ಮವಿವರ್ಜಿತಾ
ವೈರಾಗ್ಯಜ್ಞಾನನಿರತಾ ನಿರಾಲೋಕಾ ನಿರಿಂದ್ರಿಯಾ ॥ ೧೫೯ ॥

ವಿಚಿತ್ರಗಹನಾಧಾರಾ ಶಾಶ್ವತಸ್ಥಾನವಾಸಿನೀ ।
ಸ್ಥಾನೇಶ್ವರೀ ನಿರಾನಂದಾ ತ್ರಿಶೂಲವರಧಾರಿಣೀ ॥ ೧೬೦ ॥

---

೧೫೭. ಶುಭ್ರವರ್ಣವುಳ್ಳವಳೂ ಸುಂದರವಾದ ಸ್ತನವುಳ್ಳವಳೂ ಸೂರ್ಯ ಪ್ರಭಾರೂಪಳೂ ಧರ್ಮ ಅರ್ಥ ಕಾಮ ಮೋಕ್ಷಗಳನ್ನು ಅನುಗ್ರಹಿಸುವವಳೂ ಭ್ರೂಮಧ್ಯದಲ್ಲಿ ವಾಸಿಸುವವಳೂ ಪುರಾಣಸ್ವರೂಪಳೂ ಮತ್ತು ಪುರಾಣಪುರುಷನಿಗೆ ಕಾರಣಳೂ ಆಗಿದ್ದಾಳೆ.

೧೫೮. ಪರಮೈಶ್ವರ್ಯದಾಯಕಳೂ ಮಧ್ಯಾವಸ್ಥೆಯುಳ್ಳವಳೂ ಕಮಲದಂತೆ ನೇತ್ರವುಳ್ಳವಳೂ ಸರ್ವಸಾಮ್ಯವುಳ್ಳವಳೂ ಹದಿನೆಂಟು ಭುಜಗಳಿಂದ ಅಲಂಕೃತಳೂ ಆದ್ಯವಸ್ತುರಹಿತಳೂ ಮತ್ತು ಕನ್ನೈದಿಲೆಯ ದಳದಂತೆ ಪ್ರಭೆಯುಳ್ಳವಳೂ ಆಗಿದ್ದಾಳೆ.

೧೫೯. ಸರ್ವಶಕ್ತಿಮಯವಾದ ಆಸನವನ್ನು ಏರಿದವಳೂ ಧರ್ಮ ಅಧರ್ಮಗಳಿಂದ ಬಾಹ್ಯಳೂ ವೈರಾಗ್ಯ-ಜ್ಞಾನ ಇವುಗಳಲ್ಲಿ ನಿರತಳೂ ಆಲೋಕಶೂನ್ಯಳೂ ಮತ್ತು ಇಂದ್ರಿಯರಹಿತಳೂ ಆಗಿರುವಳು.

೧೬೦. ವಿಚಿತ್ರವೂ ಗಹನವೂ ಆದ ಆಧಾರದಲ್ಲಿರುವವಳೂ ಶಾಶ್ವತವಾದ ಸ್ಥಾನದಲ್ಲಿ ವಾಸಮಾಡುವವಳೂ ಸ್ಥಾನಕ್ಕೆ ಈಶ್ವರಿಯೂ ಆನಂದ ಶೂನ್ಯಳೂ ಉತ್ತಮವಾದ ತ್ರಿಶೂಲವನ್ನು ಧರಿಸಿದವಳೂ ಆಗಿದ್ದಾಳೆ.

ಅಶೇಷದೇವತಾಮೂರ್ತಿರ್ದೇವತಾ ವರದೇವತಾ ।
ಗಣಾಂಬಿಕಾ ಗಿರೇಃ ಪುತ್ರೀ ನಿಶುಂಭವಿನಿಪಾತಿನೀ ॥ ೧೬೧ ॥

ಅವರ್ಣಾ ವರ್ಣರಹಿತಾ ತ್ರಿವರ್ಣಾ ಜೀವಸಂಭವಾ ।
ಅನಂತವರ್ಣಾನನ್ಯಸ್ಥಾ ಶಂಕರೀ ಶಾಂತಮಾನಸಾ ॥ ೧೬೨ ॥

ಅಗೋತ್ರಾ ಗೋಮತೀ ಗೋಪ್ತ್ರೀ ಗುಹ್ಯರೂಪಾ ಗುಣೋತ್ತರಾ ।
ಗೌರ್ಗೀರ್ಗವ್ಯಪ್ರಿಯಾ ಗೌಣೀ ಗಣೇಶ್ವರನಮಸ್ಕೃತಾ ॥ ೧೬೩ ॥

ಸತ್ಯಭಾಮಾ ಸತ್ಯಸಂಧಾ ತ್ರಿಸಂಧ್ಯಾ ಸಂಧಿವರ್ಜಿತಾ ।
ಸರ್ವವಾದಾಶ್ರಯಾ ಸಂಖ್ಯಾ ಸಾಂಖ್ಯಯೋಗಸಮುದ್ಭವಾ ॥ ೧೬೪ ॥

---

೧೬೧. ಮತ್ತು ಸಮಸ್ತ ದೇವತಾಮೂರ್ತಿಸ್ವರೂಪಳೂ ದೇದೀಪ್ಯಮಾನಳೂ ಉತ್ತಮ ದೇವತಾತ್ಮಕಳೂ ಗುಣಗಳಿಗೆ ಜನನಿಯೂ ಪರ್ವತ ರಾಜನ ಪುತ್ರಿಯೂ ನಿಶುಂಭಾಸುರನನ್ನು ಕೆಡವಿದವಳೂ ಆಗಿದ್ದಾಳೆ.

೧೬೨. ರೂಪರಹಿತಳೂ ವರ್ಣಶೂನ್ಯಳೂ ಪ್ರಕೃತಿರೂಪದಿಂದ ವರ್ಣತ್ರಯ ವುಳ್ಳವಳೂ ಜೀವನಿಗೆ ಕಾರಣಳೂ ಅನಂತವಾದ ವರ್ಣಗಳಿಂದ ಶೋಭಿತಳೂ ಐಕ್ಯ ರೂಪದಿಂದ ಇರುವವಳೂ ಶಂಕರನ ಸತಿಯೂ ಮತ್ತು ಶಾಂತವಾದ ಚಿತ್ತವುಳ್ಳವಳೂ ಆಗಿದ್ದಾಳೆ.

೧೬೩. ಗೋತ್ರ ವರ್ಜಿತಳೂ ವಾಙ್ಮಯರೂಪಳೂ ಸರ್ವರಕ್ಷಕಳೂ ಗುಹ್ಯವಾದ ಆಕೃತಿ ಯುಳ್ಳವಳೂ ಸದ್ಗುಣಶೋಭಿತಳೂ ಗೋಮಾತಾರೂಪಳೂ ವಾಣೀ ರೂಪಳೂ ಗವ್ಯದಲ್ಲಿ ಪ್ರೀತಿಯುಳ್ಳವಳೂ ಗುಣಮಯಳೂ ಮತ್ತು ಗಣೇಶನಿಂದ ನಮಸ್ಕರಿಸಲ್ಪಟ್ಟವಳೂ ಆಗಿದ್ದಾಳೆ.

೧೬೪. ಸತ್ಯಭಾಮಾ ಸ್ವರೂಪಳೂ ಸತ್ಯಪ್ರತಿಜ್ಞೆಯುಳ್ಳವಳೂ ಸಂಧ್ಯಾತ್ರಯ ಸ್ವರೂಪಳೂ ಸಂಧಿಯಿಂದ ವರ್ಜಿತಳೂ ಸಮಸ್ತವಾದಗಳಿಗೆ ಆಶ್ರಯಳೂ ಪ್ರಜ್ಞಾ ಸ್ವರೂಪಳೂ ಮತ್ತು ಸಾಂಖ್ಯ ಯೋಗಮಾರ್ಗಗಳಿಂದ ಅಭಿವ್ಯಕ್ತಳೂ ಆಗಿದ್ದಾಳೆ.

ಅಸಂಖ್ಯೇಯಾಪ್ರಮೇಯಾಖ್ಯಾ ಶೂನ್ಯಾ ಶುದ್ಧಕುಲೋದ್ಭವಾ ।
ಬಿಂದುನಾದಸಮುತ್ಪತ್ತಿಃ ಶಂಭುವಾಮಾ ಶಶಿಪ್ರಭಾ ॥ ೧೬೫ ॥

ಪಿಶಂಗಾ ಭೇದರಹಿತಾ ಮನೋಜ್ಞಾ ಮಧುಸೂದನೀ ।
ಮಹಾಶ್ರೀಃ ಶ್ರೀಸಮುತ್ಪತ್ತಿಸ್ತಮಃಪಾರೇ ಪ್ರತಿಷ್ಠಿತಾ ॥ ೧೬೬ ॥

ತ್ರಿತತ್ತ್ವಮಾತಾ ತ್ರಿವಿಧಾ ಸುಸೂಕ್ಷ್ಮಪದಸಂಶ್ರಯಾ ।
ಶಾಂತಾ ಭೀತಾ ಮಲಾತೀತಾ ನಿರ್ವಿಕಾರಾ ಶಿವಾಶ್ರಯಾ ॥ ೧೬೭ ॥

ಶಿವಾಖ್ಯಾ ಚಿತ್ತನಿಲಯಾ ಶಿವಜ್ಞಾನಸ್ವರೂಪಿಣೀ ।
ದೈತ್ಯದಾನವನಿರ್ಮಾಥೀ ಕಾಶ್ಯಪೀ ಕಾಲಕರ್ಣಿಕಾ ॥ ೧೬೮ ॥

---

೧೬೫. ಗಣನಾತೀತಳೂ ಅಳೆಯಲಾಗದ್ದರಿಂದ ಅಪ್ರಮೇಯ ಎಂಬ ಸಂಜ್ಞಾಂಕಿತಳೂ ಶೂನ್ಯಸ್ವರೂಪಳೂ ಶುದ್ಧವಂಶದಲ್ಲಿ ಜನಿಸಿದವಳೂ ಬಿಂದು-ನಾದಗಳಿಗೆ ಕಾರಣಳೂ ಈಶ್ವರನ ಭಾರ್ಯೆಯೂ ಮತ್ತು ಚಂದ್ರನಂತೆ ಕಾಂತಿಯುಳ್ಳವಳೂ ಆಗಿರುವಳು.

೧೬೬. ಪಿಶಂಗವರ್ಣವುಳ್ಳವಳೂ ಭೇದಶೂನ್ಯಳೂ ಹೃದಯಂಗಮಳೂ ಮಧು ಎಂಬ ಅಸುರನನ್ನು ಸಂಹರಿಸಿದವಳೂ ಮಹಾಲಕ್ಷ್ಮೀರೂಪಳೂ ಲಕ್ಷ್ಮಿಗೆ ಕಾರಣಳೂ ತಮೋಗುಣದ ಪಾರದಲ್ಲಿ ಪ್ರತಿಷ್ಠೆ ಹೊಂದಿದವಳೂ ಆಗಿದ್ದಾಳೆ.

೧೬೭. ತತ್ವತ್ರಯಕ್ಕೆ ಮಾತೆಯೂ ಮೂರು ಪ್ರಕಾರಗಳನ್ನು ಹೊಂದಿದವಳೂ ಅತ್ಯಂತ ಸೂಕ್ಷ್ಮಪದವನ್ನು ಆಶಿಸಿದವಳೂ ಶಾಂತಸ್ವರೂಪಳೂ ಭೀತಿಶೂನ್ಯಳೂ ನಿರ್ಮಲಳೂ ನಿರ್ವಿಕಾರಳೂ ಮತ್ತು ಶಿವನನ್ನು ಆಶ್ರಯಿಸಿದವಳೂ ಆಗಿದ್ದಾಳೆ.

೧೬೮. ಶಿವಾ ಎಂಬ ಸಂಜ್ಞಾಂಕಿತಳೂ ಚಿತ್ತದಲ್ಲಿ ವಾಸಿಸುವವಳೂ ಪರಮಾತ್ಮಜ್ಞಾನರೂಪಿಣಿಯೂ ದೈತ್ಯ ದಾನವರನ್ನು ಸಂಹರಿಸುವವಳೂ ಕಶ್ಯಪಾತ್ಮಜೆಯೂ ಕಾಲಪ್ರವರ್ತಕಳೂ ಆಗಿರುವಳು.

ಶಾಸ್ತ್ರಯೋನಿಃ ಕ್ರಿಯಾಮೂರ್ತಿಶ್ಚತುರ್ವರ್ಗಪ್ರದರ್ಶಿಕಾ ।
ನಾರಾಯಣೀ ನರೋತ್ಪತ್ತಿಃ ಕೌಮುದೀ ಲಿಂಗಧಾರಿಣೀ ॥ ೧೬೯ ॥

ಕಾಮುಕೀ ಕಲಿತಾಭಾವಾ ಪರಾವರವಿಭೂತಿದಾ ।
ಪರಾಂಗಜಾತಮಹಿಮಾ ಬಡವಾ ವಾಮಲೋಚನಾ ॥ ೧೭೦ ॥

ಸುಭದ್ರಾ ದೇವಕೀ ಸೀತಾ ವೇದವೇದಾಂಗಪಾರಗಾ ।
ಮನಸ್ವಿನೀ ಮನ್ಯುಮಾತಾ ಮಹಾಮನ್ಯುಸಮುದ್ಭವಾ ॥ ೧೭೧ ॥

ಅಮನ್ಯುರಮೃತಾಸ್ವಾದಾ ಪುರುಹೂತಾ ಪುರುಷ್ಟುತಾ ।
ಅಶೋಚ್ಯಾ ಭಿನ್ನವಿಷಯಾ ಹಿರಣ್ಯರಜತಪ್ರಿಯಾ ॥ ೧೭೨ ॥

---

೧೬೯. ಮತ್ತು ಶಾಸ್ತ್ರಕ್ಕೆ ಕಾರಣಳೂ ಕ್ರಿಯಾಮೂರ್ತಿರೂಪಳೂ ಧರ್ಮಾದಿ ಚತುರ್ವರ್ಗವನ್ನು ಕೊಡುವವಳೂ ನಾರಾಯಣ ಶಕ್ತಿ ಸ್ವರೂಪಳೂ ನರನಿಗೆ ಕಾರಣಳೂ ಚಂದ್ರಿಕೆಯಂತಿರುವವಳೂ ಅಸಾಮಾನ್ಯವಾದ ಚಿಹ್ನವನ್ನು ಧರಿಸಿದವಳೂ ಆಗಿದ್ದಾಳೆ.

೧೭೦. ಕಾಮುಕಿಯೂ ಅಭಾವವನ್ನು ತೋರಿಸಿದವಳೂ ಉತ್ತಮ ಅಧಮ ಐಶ್ವರ್ಯದಾಯಕಳೂ ಪರಮಾತ್ಮನ ಜ್ಞಾನಮಹಿಮಾ ರೂಪಳೂ ಬಡಬಾರೂಪಳೂ ಮತ್ತು ಉತ್ತಮಾಂಗನಾರೂಪಳೂ ಆಗಿರುವಳು.

೧೭೧. ಸುಭದ್ರಾ ದೇವಕೀ ಸೀತಾ ಮುಂತಾದ ಉತ್ತಮಾಂಗನಾರೂಪಳೂ ವೇದವೇದಾಂಗಗಳ ಪಾರಂಗತಳೂ ಮಾನಿನಿಯೂ ಮನ್ಯುವಿಗೆ ತಾಯಿಯೂ ಮಹಾ ಮನ್ಯುವಿನ ಉತ್ಪತ್ತಿ ಕಾರಣಳೂ ಆಗಿದ್ದಾಳೆ.

೧೭೨. ಕೋಪಶೂನ್ಯಳೂ ಅಮೃತದ ಆಸ್ವಾದನೆ ಯುಳ್ಳವಳೂ ಅನೇಕರಿಂದ ಆಹ್ವಾನಿಸಲ್ಪಟ್ಟವಳೂ ಬಹುಜನರಿಂದ ಸ್ತುತಿಸಲ್ಪಟ್ಟವಳೂ ಅಶೋಚ್ಯಳೂ ವಿಷಯ ಗಳನ್ನು ಭೇದಿಸಿದವಳೂ ಮತ್ತು ಸುವರ್ಣ ರಜತಗಳಲ್ಲಿ ಪ್ರೀತಿಯುಳ್ಳವಳೂ ಆಗಿದ್ದಾಳೆ.

ಹಿರಣ್ಮರಜನೀ ಹೈಮಾ ಹೈಮಾಭರಣಭೂಷಿತಾ ।
ವಿಭ್ರಾಜಮಾನಾ ದುರ್ಜ್ಞೇಯಾ ಜ್ಯೋತಿಷ್ಟೋಮಫಲಪ್ರದಾ ॥ ೧೭೩ ॥

ಮಹಾನಿದ್ರಾಸಮುದ್ಭೂತಿರನಿದ್ರಾ ಸತ್ಯದೇವತಾ ।
ದೀರ್ಘಾ ಕಕುದ್ಮಿನೀ ಹೃದ್ಯಾ ಶಾಂತಿದಾ ಶಾಂತಿವರ್ಧಿನೀ ॥ ೧೭೪ ॥

ಲಕ್ಷ್ಮ್ಯಾದಿಶಕ್ತಿಜನನೀ ಶಕ್ತಿಚಕ್ರಪ್ರವರ್ತಿಕಾ ।
ತ್ರಿಶಕ್ತಿಜನನೀ ಜನ್ಯಾ ಷಡೂರ್ಮಿಪರಿವರ್ಜಿತಾ ॥ ೧೭೫ ॥

ಸುಧೌತಾ ಕರ್ಮಕರಣೀ ಯುಗಾಂತದಹನಾತ್ಮಿಕಾ ।
ಸಂಕರ್ಷಣೀ ಜಗದ್ಧಾತ್ರೀ ಕಾಮಯೋನಿಃ ಕಿರೀಟಿನೀ ॥ ೧೭೬ ॥

---

೧೭೩. ಸುವರ್ಣರಜತ ಸ್ವರೂಪಳೂ ಸುವರ್ಣ ಮಯಳೂ ಸುವರ್ಣಾಲಂಕಾರ ಭೂಷಿತಳೂ ಪ್ರಕಾಶಮಾನಳೂ ಜ್ಞಾನಮಾರ್ಗ ಅತೀತಳೂ ಮತ್ತು ಜ್ಯೋತಿಷ್ಟೋಮಯಾಗದ ಫಲವನ್ನು ಅನುಗ್ರಹಿಸುವವಳೂ ಆಗಿದ್ದಾಳೆ.

೧೭೪. ಮಹಾನಿದ್ರೆಗೆ ಕಾರಣಳೂ ನಿದ್ರಾಶೂನ್ಯಳೂ ಶಾಶ್ವತದೇವತಾರೂಪಳೂ ದೀರ್ಘಾಕೃತಿಯೂ ಪ್ರಶಸ್ತಸ್ವರೂಪಳೂ ಮನೋಹರಳೂ ಶಾಂತಿಯನ್ನು ಕೊಡುವವಳೂ ಶಾಂತಿಯನ್ನು ಪೋಷಿಸುವವಳೂ ಆಗಿದ್ದಾಳೆ.

೧೭೫. ಲಕ್ಷ್ಮೀಮುಂತಾದ ಶಕ್ತಿಗಳ ತಾಯಿಯೂ ಶಕ್ತಿ ಚಕ್ರ ಆಯುಧಗಳ ಪ್ರೇರಕಳೂ ಶಕ್ತಿತ್ರಯಕ್ಕೆ ಜನನಿಯೂ ಸರ್ವಮಾತೆಯೂ ಊರ್ಮಿಷಟ್ಕದಿಂದ ವರ್ಜಿತಳೂ ಆಗಿರುವಳು.

೧೭೬. ಪವಿತ್ರರೂಪಳೂ ಕ್ರಿಯಾಪ್ರವರ್ತಳೂ ಪ್ರಳಯ ಕಾಲದ ಅಗ್ನಿಸ್ವರೂಪಳೂ ಸಂಕರ್ಷಣ ರೂಪಳೂ ಜಗದ್ಧಾರಕಳೂ ಕಾಮನಿಗೆ ಕಾರಣಳೂ ಮತ್ತು ಕಿರೀಟವನ್ನು ಧರಿಸಿದವಳೂ ಆಗಿದ್ದಾಳೆ.

ಐಂದ್ರೀ ತ್ರೈಲೋಕ್ಯನಮಿತಾ ವೈಷ್ಣವೀ ಪರಮೇಶ್ವರೀ ।
ಪ್ರದ್ಯುಮ್ನದಯಿತಾ ದಾತ್ರೀ ಯುಗ್ಮದೃಷ್ಟಿಸ್ತ್ರಿಲೋಚನಾ ॥ ೧೭೭ ॥

ಮದೋತ್ಕಟಾ ಹಂಸಗತಿಃ ಪ್ರಚಂಡಾ ಚಂಡವಿಕ್ರಮಾ ।
ವೃಷಾವೇಶಾ ವಿಯನ್ಮಾತಾ ವಿಂಧ್ಯಪರ್ವತವಾಸಿನೀ ॥ ೧೭೮ ॥

ಹಿಮವನ್ಮೇರುನಿಲಯಾ ಕೈಲಾಸಗಿರಿವಾಸಿನೀ ।
ಚಾಣೂರಹಂತೃತನಯಾ ನೀತಿಜ್ಞಾ ಕಾಮರೂಪಿಣೀ ॥ ೧೭೯ ॥

ವೇದವಿದ್ಯಾ ವ್ರತಸ್ನಾತಾ ಬ್ರಹ್ಮಶೈಲನಿವಾಸಿನೀ ।
ವೀರಭದ್ರಪ್ರಜಾ ವೀರಾ ಮಹಾಕಾಮಸಮುದ್ಭವಾ ॥ ೧೮೦ ॥

---

೧೭೭. ಇಂದ್ರನ ಶಚೀರೂಪಳೂ ತ್ರಿಲೋಕವಂದಿತಳೂ ವಿಷ್ಣುಶಕ್ತಿಸ್ವರೂಪಳೂ ಈಶ್ವರನ ಪತ್ನಿಯೂ ವಿಷ್ಣುವಿನ ಭಾರ್ಯೆಯೂ ಇಷ್ಟದಾಯಕಳೂ ಸಮವಾದ ದೃಷ್ಟಿಯುಳ್ಳವಳೂ ಮತ್ತು ನೇತ್ರತ್ರಯವುಳ್ಳವಳೂ ಆಗಿದ್ದಾಳೆ.

೧೭೮. ಉತ್ಕಟವಾದ ಮದವುಳ್ಳವಳೂ ಹಂಸದಂತೆ ಗಮನವುಳ್ಳವಳೂ ಪ್ರಚಂಡರೂಪಳೂ ಅತ್ಯುಗ್ರವಾದ ವಿಕ್ರಮವುಳ್ಳವಳೂ ಧರ್ಮದಲ್ಲಿ ಆಸಕ್ತಿಯುಳ್ಳವಳೂ ಆಕಾಶಕ್ಕೆ ಜನನಿಯೂ ಮತ್ತು ವಿಂಧ್ಯಾದ್ರಿ ವಾಸಿನಿಯೂ ಆಗಿದ್ದಾಳೆ.

೧೭೯. ಹಿಮಾಲಯ ಮೇರು ಮುಂತಾದ ಪರ್ವತಗಳಲ್ಲಿ ವಾಸಿಸುವವಳೂ ಕೈಲಾಸಾದ್ರಿಯಲ್ಲಿ ವಿಹರಿಸುವವಳೂ ಚಾಣೂರನನ್ನು ಕೊಂದ ಕೃಷ್ಣನೆಂಬ ಪುತ್ರವತಿಯೂ ನೀತಿಮಾರ್ಗವನ್ನು ಅರಿತವಳೂ ಇಚ್ಛಾರೂಪವನ್ನು ಧರಿಸುವವಳೂ ಆಗಿದ್ದಾಳೆ.

೧೮೦. ವೇದವಿದ್ಯಾಸ್ವರೂಪಳೂ ಬ್ರಹ್ಮಚಾರಿ ವ್ರತದಿಂದ ಸಮಾವೃತ್ತಳೂ ಬ್ರಹ್ಮಶೈಲದಲ್ಲಿ ವಾಸಿಸುವವಳೂ ವೀರಭದ್ರನೆಂಬ ಪ್ರಜೆಯುಳ್ಳವಳೂ ವೀರಸ್ವರೂಪಳೂ ಮಹಾ ಕಾಮನಿಗೆ ಕಾರಣಳೂ ಆಗಿದ್ದಾಳೆ.

ವಿದ್ಯಾಧರಪ್ರಿಯಾ ಸಿದ್ಧಾ ವಿದ್ಯಾಧರನಿರಾಕೃತಿಃ ।
ಆಪ್ಯಾಯನೀ ಹರಂತೀ ಚ ಪಾವನೀ ಪೋಷಣೀ ಕಲಾ ॥ ೧೮೧ ॥

ಮಾತೃಕಾ ಮನ್ಮಥೋದ್ಭೂತಾ ವಾರಿಜಾ ವಾಹನಪ್ರಿಯಾ ।
ಕರೀಷಿಣೀ ಸುಧಾವಾಣೀ ವೀಣಾವಾದನತತ್ಪರಾ ॥ ೧೮೨ ॥

ಸೇವಿತಾ ಸೇವಿಕಾ ಸೇವ್ಯಾ ಸಿನೀವಾಲೀ ಗರುತ್ಮತೀ ।
ಅರುಂಧತೀ ಹಿರಣ್ಯಾಕ್ಷೀ ಮೃಗಾಂಕಾ ಮಾನದಾಯಿನೀ ॥ ೧೮೩ ॥

ವಸುಪ್ರದಾ ವಸುಮತೀ ವಸೋರ್ಧಾರಾ ವಸುಂಧರಾ ।
ಧಾರಾಧಾರಾ ವರಾರೋಹಾ ವರಾವಾಸಸಹಸ್ರದಾ ॥ ೧೮೪ ॥

---

೧೮೧. ವಿದ್ಯಾಧರನಿಗೆ ಪ್ರಿಯೆಯೂ ಸಿದ್ಧಿಯುಳ್ಳವಳೂ ವಿದ್ಯಾಧರನನ್ನು ನಿರಾಕರಿಸುವ ಶಕ್ತಿರೂಪಳೂ ಸಮಸ್ತ ವೃದ್ಧಿ ನಿಮಿತ್ತಳೂ ಸರ್ವ ಸಂಹಾರಕಳೂ ಪಾವನೆಯೂ ಪುಷ್ಟಿಯನ್ನು ಕೊಡುವವಳೂ ಮತ್ತು ಕಲಾತ್ಮಕಳೂ ಆಗಿದ್ದಾಳೆ.

೧೮೨. ಮತ್ತು ವರ್ಣಮಾತೃಕಾ ರೂಪಳೂ ಕಾಮಾಧೀನವಾದ ಉತ್ಪತ್ತಿಯುಳ್ಳವಳೂ ಜಲದಲ್ಲಿ ಉದ್ಭವಿಸಿದವಳೂ ವಾಹನದಲ್ಲಿ ಪ್ರೀತಿಯನ್ನು ತೋರುವವಳೂ ಪಾವನ ಸ್ವರೂಪಳೂ ಅಮೃತವಾಣೀ ಸ್ವರೂಪಳೂ ವೀಣೆಯನ್ನು ನುಡಿಸುವುದರಲ್ಲಿ ಆಸಕ್ತಳೂ ಆಗಿದ್ದಾಳೆ.

೧೮೩. ಸೇವಿಸಲ್ಪಟ್ಟವಳೂ ಸೇವಕಿಯೂ ಸೇವಿಸಲು ಅರ್ಹಳೂ ಸಿನೀವಾಲೀ ಗರುತ್ಮತೀ ಮುಂತಾದ ದೇವತಾ ರೂಪಳೂ ಅರುಂಧತೀ ರೂಪಳೂ ಸುವರ್ಣದಂತೆ ತೇಜೋಮಯ ನೇತ್ರವುಳ್ಳವಳೂ ಮೃಗ ಚಿಹ್ನಾಂಕಿತಳೂ ಮಾನದಾಯಕಳೂ ಆಗಿದ್ದಾಳೆ.

೧೮೪. ಐಶ್ವರ್ಯವನ್ನು ಕೊಡುವವಳೂ ಧನಸಂಪನ್ನಳೂ ವಸುಧಾರಾ ರೂಪಳೂ ಭೂದೇವತಾತ್ಮಕಳೂ ವಸ್ತುಧಾರೆಗಳಿಗೆ ಆಧಾರಳೂ ಉತ್ತಮವಾದ ಊರುಗಳಿಂದ ಶೋಭಿತಳೂ ಶ್ರೇಷ್ಠವಾದ ಸಹಸ್ರಾರು ಆವಾಸಗಳನ್ನು ಕೊಡುವವಳೂ ಆಗಿರುವಳು.

ಶ್ರೀಫಲಾ ಶ್ರೀಮತೀ ಶ್ರೀಶಾ ಶ್ರೀನಿವಾಸಾ ಶಿವಪ್ರಿಯಾ ।
ಶ್ರೀಧರಾ ಶ್ರೀಕರೀ ಕಲ್ಯಾ ಶ್ರೀಧರಾರ್ಧಶರೀರಿಣೀ ॥ ೧೮೫ ॥

ಅನಂತದೃಷ್ಟಿರಕ್ಷುದ್ರಾ ಧಾತ್ರೀಶಾ ಧನದಪ್ರಿಯಾ ।
ನಿಹಂತ್ರೀ ದೈತ್ಯಸಂಘಾನಾಂ ಸಿಂಹಿಕಾ ಸಿಂಹವಾಹನಾ ॥ ೧೮೬ ॥

ಸುವರ್ಚಲಾ ಚ ಸುಶ್ರೋಣೀ ಸುಕೀರ್ತಿಶ್ಛಿನ್ನಸಂಶಯಾ ।
ರಸಜ್ಞಾ ರಸದಾ ರಾಮಾ ಲೇಲಿಹಾನಾಮೃತಸ್ರವಾ ॥ ೧೮೭ ॥

ನಿತ್ಯೋದಿತಾ ಸ್ವಯಂಜ್ಯೋತಿರುತ್ಸುಕಾ ಮೃತಜೀವನಾ ।
ವಜ್ರದಂಡಾ ವಜ್ರಜಿಹ್ವಾ ವೈದೇಹೀ ವಜ್ರವಿಗ್ರಹಾ ॥ ೧೮೮ ॥

---

೧೮೫. ಸಂಪತ್ತಿಯ ಫಲದಾಯಕಳೂ ಕಾಂತಿಯುಕ್ತಳೂ ಸಂಪತ್ತಿಗೆ ಅಧಿಪತಿಯೂ ಲಕ್ಷ್ಮಿಯ ವಾಸಾಧಾರಳೂ ಶಿವನ ಪ್ರಿಯೆಯೂ ಸಂಪತ್ತಿಯನ್ನು ಧರಿಸಿದವಳೂ ಸಂಪತ್ತನ್ನು ಕೊಡುವವಳೂ ದಕ್ಷಳೂ ಮತ್ತು ಶಂಕರನ ಶರೀರಾರ್ಧ ಸ್ವರೂಪಳೂ ಆಗಿದ್ದಾಳೆ.

೧೮೬. ಅಪಾರವಾದ ದೃಷ್ಟಿಯುಳ್ಳವಳೂ ಉನ್ನತಶೀಲಳೂ ಜಗದ್ಧಾರಕಳೂ ಈಶ್ವರಳೂ ಕುಬೇರನ ಪ್ರಿಯೆಯೂ ದೈತ್ಯವರ್ಗ ಸಂಹಾರಕಳೂ ಸಿಂಹಿಕಾಸ್ವರೂಪಳೂ ಸಿಂಹವಾಹನಾರೂಢಳೂ ಆಗಿದ್ದಾಳೆ.

೧೮೭. ಉತ್ತಮವಾದ ವರ್ಚಸ್ಸಿನಿಂದ ಪೂರ್ಣಳೂ ಸುಂದರವಾದ ನಿತಂಬ ಭಾಗವುಳ್ಳವಳೂ ಪ್ರಶಸ್ತ ಕೀರ್ತಿಯುಳ್ಳವಳೂ ಸಂಶಯ ನಿವಾರಕಳೂ ರಸಗಳನ್ನರಿತವಳೂ ಪುರುಷಾರ್ಥ ದಾಯಕಳೂ ಸುಂದರಿಯೂ ಆಸ್ವಾದಪ್ರಿಯಳೂ ಮತ್ತು ಅಮೃತವನ್ನು ಸುರಿಸುವವಳೂ ಆಗಿದ್ದಾಳೆ.

೧೮೮. ಸಂತತವಾಗಿ ಉದಯಿಸಿದವಳೂ ಸ್ವಯಂಪ್ರಕಾಶರೂಪಳೂ ಔತ್ಸುಕ್ಯವುಳ್ಳವಳೂ ಮೃತಸಂಜೀವಿನೀ ರೂಪಳೂ ವಜ್ರಮಯವಾದ ದಂಡಧಾರಿಣಿಯೂ ವಜ್ರದಂತೆ ಹೊಳೆಯುವ ಜಿಹ್ವೆಯುಳ್ಳವಳೂ ವೈದೇಹೀ ರೂಪಳೂ ಮತ್ತು ವಜ್ರಮಯವಾದ ವಿಗ್ರಹವುಳ್ಳವಳೂ ಆಗಿದ್ದಾಳೆ.

ಮಂಗಲ್ಯಾ ಮಂಗಲಾ ಮಾಲಾ ನಿರ್ಮಲಾ ಮಲಹಾರಿಣೀ ।
ಗಾಂಧರ್ವೀ ಗರುಡಾ ಚಾಂದ್ರೀ ಕಂಬಲಾಶ್ವತರಪ್ರಿಯಾ ॥ ೧೮೯ ॥

ಸೌದಾಮಿನೀ ಜನಾನಂದಾ ಭ್ರುಕುಟೀಕುಟಿಲಾನನಾ ।
ಕರ್ಣಿಕಾರಕರಾ ತ್ರ್ಯಕ್ಷಾ ಕಂಸಪ್ರಾಣಾಪಹಾರಿಣೀ ॥ ೧೯೦ ॥

ಯುಗಂಧರಾ ಯುಗಾವರ್ತಾ ತ್ರಿಸಂಧ್ಯಾ ಹರ್ಷವರ್ಧನೀ ।
ಪ್ರತ್ಯಕ್ಷದೇವತಾ ದಿವ್ಯಾ ದಿವ್ಯಗಂಧಾ ದಿವಃ ಪರಾ ॥ ೧೯೧ ॥

ಶಕ್ರಾಸನಗತಾ ಶಾಕ್ರೀ ಸಾಧ್ಯಾ ಚಾರುಶರಾಸನಾ ।
ಇಷ್ಟಾ ವಿಶಿಷ್ಟಾ ಶಿಷ್ಟೇಷ್ಟಾ ಶಿಷ್ಟಾಶಿಷ್ಟಪ್ರಪೂಜಿತಾ ॥ ೧೯೨ ॥

---

೧೮೯. ಮಂಗಲಪ್ರದಳೂ ಮಂಗಳ ಸ್ವರೂಪಳೂ ಮಾಲಾಧಾರಿಣಿಯೂ ಮಲಗಳನ್ನು ಅಪಹರಿಸುವವಳೂ ನಿರ್ಮಲಳೂ ಗಂಧರ್ವಪ್ರಿಯೆಯೂ ಗಾರುಡೀ ರೂಪಳೂ ಚಂದ್ರಿಕಾ ರೂಪಳೂ ಕಂಬಲ ಅಶ್ವತರ ವಾಹನಗಳಲ್ಲಿ ಪ್ರಿಯಳೂ ಆಗಿದ್ದಾಳೆ.

೧೯೦. ಮಿಂಚಿನರೂಪಳೂ ಜನರನ್ನು ಆನಂದಪಡಿಸುವವಳೂ ಭ್ರೂಭಂಗದಿಂದ ಕುಟಿಲವಾದ ಮುಖವುಳ್ಳವಳೂ ಕರ್ಣಿಕಾರಪುಷ್ಪದಂತೆ ಹಸ್ತವುಳ್ಳವಳೂ ಮೂರು ನೇತ್ರವುಳ್ಳವಳೂ ಕಂಸಾಸುರನ ಪ್ರಾಣಗಳನ್ನು ಅಪಹರಿಸಿದವಳೂ ಆಗಿದ್ದಾಳೆ.

೧೯೧. ಯುಗವ್ಯವಸ್ಥಾಧಾರಕಳೂ ಯುಗಪರ್ಯಾಯಸ್ವರೂಪಳೂ ತ್ರಿಸಂಧ್ಯಾಸ್ವರೂಪಳೂ ಆನಂದದಾಯಕಳೂ ಪ್ರತ್ಯಕ್ಷದೇವತಾರೂಪಳೂ ದಿವ್ಯಾಕೃತಿಯೂ ದಿವ್ಯಗಂಧಧಾರಕಳೂ ದ್ಯುಲೋಕದ ಮೇಲಿರುವವಳೂ ಆಗಿದ್ದಾಳೆ.

೧೯೨. ಇಂದ್ರನ ಆಸನದಲ್ಲಿರುವ ಶಕ್ತಿರೂಪಳೂ ಇಂದ್ರಭಾರ್ಯಾಸ್ವರೂಪಳೂ ಸಾಧ್ಯಾದೇವಿಯೂ ಸುಂದರವಾದ ಬಿಲ್ಲನ್ನು ಧರಿಸಿದವಳೂ ಸರ್ವಪ್ರೇಮಾಸ್ಪದಳೂ ಶ್ರೇಷ್ಠರೂಪಳೂ ಶಿಷ್ಟರಿಂದ ಪೂಜಿತಳೂ ಶಿಷ್ಟ ಅಶಿಷ್ಟರಿಂದ ಸೇವ್ಯಳೂ ಆಗಿದ್ದಾಳೆ.

ಶತರೂಪಾ ಶತಾವರ್ತಾ ವಿನತಾ ಸುರಭಿಃ ಸುರಾ ।
ಸುರೇಂದ್ರಮಾತಾ ಸುದ್ಯುಮ್ನಾ ಸುಷುಮ್ನಾ ಸೂರ್ಯಸಂಸ್ಥಿತಾ ೧೯೩

ಸಮೀಕ್ಷ್ಯಾ ಸತ್ಪ್ರತಿಷ್ಠಾ ಚ ನಿವೃತ್ತಿರ್ಜ್ಞಾನಪಾರಗಾ ।
ಧರ್ಮಶಾಸ್ತ್ರಾರ್ಥಕುಶಲಾ ಧರ್ಮಜ್ಞಾ ಧರ್ಮವಾಹನಾ ॥ ೧೯೪ ॥

ಧರ್ಮಾಧರ್ಮವಿನಿರ್ಮಾತ್ರೀ ಧಾರ್ಮಿಕಾಣಾಂ ಶಿವಪ್ರದಾ ।
ಧರ್ಮಶಕ್ತಿರ್ಧರ್ಮಮಯೀ ವಿಧರ್ಮಾ ವಿಶ್ವಧರ್ಮಿಣೀ ॥ ೧೯೫ ॥

ಧರ್ಮಾಂತರಾ ಧರ್ಮಮಯೀ ಧರ್ಮಪೂರ್ವಾ ಧನಾವಹಾ ।
ಧರ್ಮೋಪದೇಷ್ಟ್ರೀ ಧರ್ಮಾತ್ಮಾ ಧರ್ಮಗಮ್ಯಾ ಧರಾಧರಾ ॥ ೧೯೬ ॥

---

೧೯೩. ನಾನಾ ರೂಪವುಳ್ಳವಳೂ, ನಾನಾ ಪರ್ಯಾಯವುಳ್ಳವಳೂ, ನಮ್ರಾಕೃತಿಯುಳ್ಳವಳೂ, ಕಾಮಧೇನುರೂಪಳೂ, ದೇವತಾಸ್ವರೂಪಳೂ, ದೇವೇಂದ್ರನ ತಾಯಿಯೂ ಧನ ಸಂಪನ್ನೆಯೂ ಸುಷುಮ್ನಾ ನಾಡೀರೂಪಳೂ ಮತ್ತು ಸೂರ್ಯ ಬಿಂಬದಲ್ಲಿರುವವಳೂ ಆಗಿದ್ದಾಳೆ.

೧೯೪. ದರ್ಶನೀಯಳೂ ಸದ್ರೂಪದಿಂದ ಪ್ರತಿಷ್ಠಿಸಿದವಳೂ ನಿವೃತ್ತಿಮಾರ್ಗ ರೂಪಳೂ ಜ್ಞಾನಸೀಮಾನಿಷ್ಠಳೂ ಧರ್ಮಶಾಸ್ತ್ರಗಳ ಅರ್ಥದಲ್ಲಿ ನಿಷ್ಣಾತಳೂ ಧರ್ಮ ವನ್ನರಿತವಳೂ ಧರ್ಮವನ್ನು ನಡೆಸುವವಳೂ ಆಗಿದ್ದಾಳೆ.

೧೯೫. ಧರ್ಮ ಅಧರ್ಮಗಳನ್ನು ನಿರ್ಮಿಸುವವಳೂ ಧಾರ್ಮಿಕರಿಗೆ ಮಂಗಳ ಪ್ರದಳೂ ಧರ್ಮಶಕ್ತಿಸ್ವರೂಪಳೂ ಧರ್ಮಪೂರ್ಣಳೂ ಧರ್ಮಾತೀತಳೂ ವಿಶ್ವ ವ್ಯಾಪಾರದ ಧರ್ಮವುಳ್ಳವಳೂ ಆಗಿರುವಳು.

೧೯೬. ಧರ್ಮಾಂತರ್ಯಾಮಿಯೂ ಧರ್ಮಪೂರ್ಣಳೂ ಧರ್ಮಕಾರಣಳೂ ಧನದಾಯಕಳೂ ಧರ್ಮದ ಉಪದೇಶಕಳೂ ಧರ್ಮಾತ್ಮಳೂ ಧರ್ಮಮಾರ್ಗ ಗಮ್ಯಳೂ ಮತ್ತು ಭೂಮಂಡಲಧಾರಿಣಿಯೂ ಆಗಿರುವಳು.

ಕಾಪಾಲೀ ಶಕಲಾ ಮೂರ್ತಿಃ ಕಲಾಕಲಿತವಿಗ್ರಹಾ ।
ಸರ್ವಶಕ್ತಿವಿನಿರ್ಮುಕ್ತಾ ಸರ್ವಶಕ್ತ್ಯಾಶ್ರಯಾಶ್ರಯಾ ॥ ೧೯೭ ॥

ಸರ್ವಾ ಸರ್ವೇಶ್ವರೀ ಸೂಕ್ಷ್ಮಾ ಸೂಕ್ಷ್ಮಜ್ಞಾನಸ್ವರೂಪಿಣೀ ।
ಪ್ರಧಾನಪುರುಷೇಶೇಶಾ ಮಹಾದೇವೈಕಸಾಕ್ಷಿಣೀ ॥ ೧೯೮ ॥

ಸದಾಶಿವಾ ವಿಯನ್ಮೂರ್ತಿರ್ವೇದಮೂರ್ತಿರಮೂರ್ತಿಕಾ ।
ಏವಂ ನಾಮ್ನಾಂ ಸಹಸ್ರೇಣ ಸ್ತುತ್ವಾಸೌ ಹಿಮವಾನ್ ಗಿರಿಃ ॥ ೧೯೯ ॥

ಭೂಯಃ ಪ್ರಣಮ್ಯ ಭೀತಾತ್ಮಾ ಪ್ರೋವಾಚೇದಂ ಕೃತಾಂಜಲಿಃ ।
ಯದೇತದೈಶ್ವರಂ ರೂಪಂ ಘೋರಂ ತೇ ಪರಮೇಶ್ವರಿ ॥ ೨೦೦ ॥

---

೧೯೭. ಕಪಾಲಧಾರಿಣಿಯೂ ಖಂಡಮೂರ್ತಿಸ್ವರೂಪಳೂ ಚಂದ್ರಕಲೆಯಿಂದ ಶೋಭಿತವಾದ ವಿಗ್ರಹವುಳ್ಳವಳೂ ಸರ್ವಶಕ್ತಿಗಳಿಂದ ತ್ಯಜಿಸಲ್ಪಟ್ಟವಳೂ ಸರ್ವಶಕ್ತಿಗಳಿಗೆ ಆಶ್ರಯವನ್ನು ಕೊಡುವವಳೂ ಆಗಿದ್ದಾಳೆ.

೧೯೮. ಮತ್ತು ಸರ್ವಾತ್ಮಕಳೂ ಸರ್ವೇಶ್ವರಿಯೂ ಸೂಕ್ಷ್ಮರೂಪವುಳ್ಳವಳೂ ಸೂಕ್ಷ್ಮವಸ್ತುವಿನ ವಿಜ್ಞಾನಸ್ವರೂಪಳೂ ಪ್ರಧಾನ-ಪುರುಷರಿಗೆ ಈಶ್ವರಿಯೂ ಮಹಾದೇವನಿಗೆ ಮುಖ್ಯವಾಗಿ ಸಾಕ್ಷಿರೂಪಳೂ ಆಗಿರುವಳು.

೧೯೯. ಸದಾ ಮಂಗಳಸ್ವರೂಪಳೂ ಆಕಾಶದಂತೆ ಸೂಕ್ಷ್ಮಮೂರ್ತಿಯುಳ್ಳವಳೂ ವೇದಮೂರ್ತಿಯಾಗಿ ಅವತರಿಸಿದವಳೂ ಪಾರಮಾರ್ಥಿಕ ವಿಗ್ರಹಶೂನ್ಯಳೂ ಆಗಿರುವಳು. ಪರ್ವತರಾಜನಾದ ಹಿಮವಂತನು ಈ ರೀತಿಯಾಗಿ ಸಹಸ್ರನಾಮಗಳಿಂದ ಅಂಬಿಕೆಯನ್ನು ಸ್ತುತಿಸಿದನು.

೨೦೦. ಮತ್ತು ಭಯಗೊಂಡ ಚಿತ್ತವುಳ್ಳವನಾಗಿ ಅಂಜಲಿ ಕಟ್ಟಿಕೊಂಡು ಮತ್ತೆ ನಮಸ್ಕಾರಮಾಡಿ, ಈ ವಚನವನ್ನು ಹೇಳಿದನು, ಜಗದೀಶ್ವರಿಯೇ ! ವಿಶ್ವರೂಪವನ್ನು ತೋರಿಸುವ ನಿನ್ನ ಈ ರೂಪವು ಅತಿ ಘೋರವಾಗಿದೆ.

ಭೀತೋಽಸ್ಮಿ ಸಾಂಪ್ರತಂ ದೃಷ್ಟ್ವಾ ರೂಪಮನ್ಯತ್ಪ್ರದರ್ಶಯ ।
ಏವಮುಕ್ತಾಥ ಸಾ ದೇವೀ ತೇನ ಶೈಲೇನ ಪಾರ್ವತೀ ॥ ೨೦೧ ॥

ಸಂಹೃತ್ಯ ದರ್ಶಯಾಮಾಸ ಸ್ವರೂಪಮಪರಂ ಪುನಃ ।
ನೀಲೋತ್ಪಲದಲಪ್ರಖ್ಯಂ ನೀಲೋತ್ಪಲಸುಗಂಧಿ ಚ ॥ ೨೦೨ ॥

ದ್ವಿನೇತ್ರಂ ದ್ವಿಭುಜಂ ಸೌಮ್ಯಂ ನೀಲಾಲಕವಿಭೂಷಿತಮ್ ।
ರಕ್ತಪಾದಾಂಬುಜತಲಂ ಸುರಕ್ತಕರಪಲ್ಲವಮ್ ॥ ೨೦೩ ॥

ಶ್ರೀಮದ್ವಿಲಾಸಸದ್ವೃತ್ತಂ ಲಲಾಟತಿಲಕೋಜ್ವಲಮ್ ।
ಭೂಷಿತಂ ಚಾರುಸರ್ವಾಂಗಂ ಭೂಷಣೈರತಿಕೋಮಲಮ್ ॥ ೨೦೪ ॥

---

೨೦೧. ಈಗ ಈ ಘೋರರೂಪವನ್ನು ನೋಡಿ ಅತಿಯಾಗಿ ಭಯಗೊಂಡಿದ್ದೇನೆ. ಮತ್ತೊಂದು ಸೌಮ್ಯರೂಪವನ್ನು ತೋರಿಸು, ಹೀಗೆಂದು ಪರ್ವತರಾಜನಿಂದ ಆ ಪಾರ್ವತೀದೇವಿಯು ಹೇಳಲ್ಪಟ್ಟವಳಾದಳು.

೨೦೨. ಆಗ ಪಾರ್ವತಿಯು ಆ ಘೋರರೂಪವನ್ನು ಅದೃಶ್ಯವನ್ನಾಗಿಮಾಡಿ ಕನ್ನೈದಲೆಯ ದಳದಂತೆ ಪ್ರಕಾಶಿಸುವ ಮತ್ತು ಕನ್ನೈದಲೆಯಂತೆ ಸುವಾಸನೆಯುಳ್ಳ ಮತ್ತೊಂದು ಸೌಮ್ಯರೂಪವನ್ನು ತೋರಿಸಿದಳು.

೨೦೩. ಆ ಸೌಮ್ಯರೂಪವು ಎರಡು ನೇತ್ರ ಎರಡು ಭುಜ ಸೌಮ್ಯವಾದ ಆಕಾರ ಕಪ್ಪಾದ ಮುಂಗೂದಲು ಕೆಂಪಾದ ಕಮಲದಂತಿರುವ ಅಡಿಗಾಲು ಕೆಂಪಾದ ಚಿಗುರಿನಂತಿರುವ ಕೈಗಳಿಂದ ಭೂಷಿತವಾಗಿತ್ತು.

೨೦೪. ಮತ್ತು ಕಾಂತಿಯುಕ್ತವೂ ಸುಂದರ ವಿಲಾಸಗಳಿಂದ ಸುತ್ತಲ್ಪಟ್ಟದ್ದೂ ಲಲಾಟದಲ್ಲಿನ ತಿಲಕದಿಂದ ಉಜ್ವಲವೂ ಅಲಂಕಾರ ಶೋಭಿತವೂ ಸುಂದರವಾದ ಸರ್ವಾವಯಗಳಿಂದ ಪೂರ್ಣವೂ ಮತ್ತು ಅನೇಕ ಆಭರಣಗಳಿಂದ ಶೃಂಗರಿಸಿ ಅತಿ ಕೋಮಲವೂ ಆಗಿತ್ತು.

ದಧಾನಮುರಸಾ ಮಾಲಾಂ ವಿಶಾಲಾಂ ಹೇಮನಿರ್ಮಿತಾಮ್ ।
ಈಷತ್ಸ್ಮಿತಂ ಸುಬಿಂಬೋಷ್ಠಂ ನೂಪುರಾರಾವಸಂಯುತಮ್ ॥ ೨೦೫ ॥

ಪ್ರಸನ್ನವದನಂ ದಿವ್ಯಮನಂತಮಹಿಮಾಸ್ಪದಮ್ ।
ತದೀದೃಶಂ ಸಮಾಲೋಕ್ಯ ಸ್ವರೂಪಂ ಶೈಲಸತ್ತಮಃ ॥ ೨೦೬ ॥
ಭೀತಿಂ ಸಂತ್ಯಜ್ಯ ಹೃಷ್ಟಾತ್ಮಾ ಬಭಾಷೇ ಪರಮೇಶ್ವರೀಮ್ ।

ಹಿಮವಾನುವಾಚ :—

ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ಸಫಲಂ ತಪಃ ॥ ೨೦೭ ॥

ಯನ್ಮೇ ಸಾಕ್ಷಾತ್ತ್ವಮವ್ಯಕ್ತಾ ಪ್ರಪನ್ನಾ ದೃಷ್ಟಿಗೋಚರಮ್ ।
ತ್ವಯಾ ಸೃಷ್ಟಂ ಜಗತ್ಸರ್ವಂ ಪ್ರಧಾನಾದ್ಯಂ ತ್ವಯಿ ಸ್ಥಿತಿಮ್ ॥ ೨೦೮ ॥

---

೨೦೫. ಮತ್ತು ಸುವರ್ಣ ನಿರ್ಮಿತವಾದ ವಿಶಾಲ ಮಾಲೆಯನ್ನು ವಕ್ಷಸ್ಥಳದಲ್ಲಿ ಧರಿಸಿಕೊಂಡಿರುವುದೂ ಮಂದಹಾಸ ಅಲಂಕೃತವೂ ಬಿಂಬ ಫಲದಂತೆ ಸುಂದರವಾದ ತುಟಿಯುಳ್ಳದ್ದೂ ಮತ್ತು ಕಾಲು ಗೆಜ್ಜೆಗಳ ಧ್ವನಿಗಳಿಂದ ಕೂಡಿರುವುದೂ ಆಗಿತ್ತು.

೨೦೬. ಹಾಗೂ ಪ್ರಸನ್ನವಾದ ಮುಖವುಳ್ಳದ್ದೂ ದಿವ್ಯವೂ ಅನಂತವಾದ ಮಹಿಮೆಗಳಿಗೆ ಆಧಾರವೂ ಆಗಿದ್ದ ಆ ಸೌಮ್ಯಸ್ವರೂಪವನ್ನು ಗಿರಿರಾಜನಾದ ಹಿಮವಂತನು ಸಂದರ್ಶಿಸಿದನು.

೨೦೭. ಆಗ ಹಿಮವಂತನು ಭಯವನ್ನು ದೂರಮಾಡಿ ಸಂತುಷ್ಟವಾದ ಚಿತ್ತವುಳ್ಳವನಾಗಿ ಪರಮೇಶ್ವರಿಯನ್ನು ಕುರಿತು ಹೇಳಿದನು. ಹಿಮವಂತನು ಇಂತೆಂದನು– ದೇವಿಯೇ! ನನ್ನ ಜನ್ಮವು ಈದಿನ ಸಾರ್ಥಕವಾಯಿತು. ನನ್ನ ತಪಶ್ಚರ್ಯೆಯು ಇಂದು ಫಲಿಸಿತು.

೨೦೮. ಅತೀಂದ್ರಿಯಳಾದ ನೀನು ಕರುಣೆಯಿಂದ ಪ್ರತ್ಯಕ್ಷಳಾಗಿ ಬಂದು ನನ್ನ ದೃಷ್ಟಿ ಗೋಚರವನ್ನು ಹೊಂದಿದ್ದೀ. ಪ್ರಧಾನ ಮುಂತಾದ ಸಮಸ್ತ ಜಗತ್ತು ನಿನ್ನಿಂದ ಸೃಷ್ಟಿಸಲ್ಪಟ್ಟಿದೆ. ಮತ್ತು ನಿನ್ನಲ್ಲಿ ನಿಂತಿದೆ.

ತ್ವಯ್ಯೇವ ಲೀಯತೇ ದೇವಿ ತ್ವಮೇವ ಪರಮಾ ಗತಿಃ ।
ವದಂತಿ ಕೇಚಿತ್ತ್ವಾಮೇವ ಪ್ರಕೃತಿಂ ಪ್ರಕೃತೇಃ ಪರಾಮ್ ॥ ೨೦೯ ॥

ಅಪರೇ ಪರಮಾರ್ಥಜ್ಞಾಃ ಶಿವೇತಿ ಶಿವಸಂಶ್ರಯಾತ್ ।
ತ್ವಯಿ ಪ್ರಧಾನಂ ಪುರುಷೋ ಮಹಾನ್ ಬ್ರಹ್ಮಾ ತಥೇಶ್ವರಃ ॥ ೨೧೦ ॥

ಅವಿದ್ಯಾ ನಿಯತಿರ್ಮಾಯಾ ಕಲಾದ್ಯಾಃ ಶತಶೋಽಭವನ್ ।
ತ್ವಂ ಹಿ ಸಾ ಪರಮಾ ಶಕ್ತಿರನಂತಾ ಪರಮೇಷ್ಠಿನೀ ॥ ೨೧೧ ॥

ಸರ್ವಭೇದವಿನಿರ್ಮುಕ್ತಾ ಸರ್ವಭೇದಾಶ್ರಯಾಶ್ರಯಾ ।
ತ್ವಾಮಧಿಷ್ಠಾಯ ಯೋಗೇಶಿ ಮಹಾದೇವೋ ಮಹೇಶ್ವರಃ ॥ ೨೧೨ ॥

---

೨೦೯. ದೇವಿಯೇ, ಕಡೆಯಲ್ಲಿ ಸರ್ವಪ್ರಪಂಚವೂ ನಿನ್ನಲ್ಲಿ ಲಯಹೊಂದುತ್ತದೆ. ನೀನೇ ಉತ್ತಮಗತಿ ಸ್ವರೂಪಳು. ಜ್ಞಾನಿಗಳಲ್ಲಿ ಹಲವರು ನಿನ್ನನ್ನು ಪ್ರಕೃತಿಯೆಂದೂ ಪ್ರಕೃತಿ ಅತೀತಳೆಂದೂ ಹೇಳುತ್ತಾರೆ.

೨೧೦. ಮತ್ತೆ ಕೆಲವರು ಪರಮಾರ್ಥಜ್ಞಾನವುಳ್ಳವರಾಗಿ ಶಿವನನ್ನು ಆಶ್ರಯಿಸಿರುವುದರಿಂದ ನಿನ್ನನ್ನು ಶಿವಾ ಎಂದು ಕರೆಯುವರು. ಪ್ರಧಾನ ಪುರುಷ ಮಹತ್ತತ್ವ ಬ್ರಹ್ಮ ಈಶ್ವರ ಈ ತತ್ವಗಳು ನಿನ್ನಲ್ಲಿ ಅಡಗಿರುವುವು.

೨೧೧. ಮತ್ತು ಅವಿದ್ಯಾ ನಿಯತಿ ಮಾಯಾ ಕಲಾ ಮುಂತಾದ ನೂರಾರು ತತ್ವಗಳು ನಿನ್ನಲ್ಲಿ ಇರುವುವು. ನೀನೇ ಅಂತವಿಲ್ಲದ ಪರಮಸ್ಥಾನದಲ್ಲಿರುವ ಪರಮ ಶಕ್ತಿ ಸ್ವರೂಪಳು.

೨೧೨. ಸಮಸ್ತ ಭೇದಗಳಿಂದ ವರ್ಜಿತಳೂ ಭೇದಕ್ಕೆ ಆಶ್ರಯವೆನಿಸಿದ ಸರ್ವವಸ್ತುಗಳಿಗೆ ಆಶ್ರಯಳೂ ಆಗಿರುತ್ತೀ. ಯೋಗೇಶ್ವರಿಯೇ ! ಮಹಾದೇವನೆನಿಸಿದ ಈಶ್ವರನು ತನ್ನ ವ್ಯಾಪಾರದಲ್ಲಿ ನಿನ್ನನ್ನು ಅವಲಂಬಿಸಿರುವನು.

ಪ್ರಧಾನಾದ್ಯಂ ಜಗತ್ಸರ್ವಂ ಕರೋತಿ ವಿಕರೋತಿ ಚ ।
ತ್ವಯ್ಯೈವ ಸಂಗತೋ ದೇವಃ ಸ್ವಾತ್ಮಾನಂದಂ ಸಮಶ್ನುತೇ ॥ ೨೧೩ ॥

ತ್ವಮೇವ ಪರಮಾನಂದಸ್ತ್ವಮೇವಾನಂದದಾಯಿನೀ ।
ತ್ವಮಕ್ಷರಂ ಪರಂ ವ್ಯೋಮ ಮಹಜ್ಜ್ಯೋತಿರ್ನಿರಂತರಮ್ ॥ ೨೧೪ ॥

ಶಿವಂ ಸರ್ವಗತಂ ಸೂಕ್ಷ್ಮಂ ಪರಂ ಬ್ರಹ್ಮ ಸನಾತನಮ್ ।
ತ್ವಂ ಶಕ್ರಃ ಸರ್ವದೇವಾನಾಂ ಬ್ರಹ್ಮಾ ಬ್ರಹ್ಮವಿದಾಮಸಿ ॥ ೨೧೫ ॥

ವಾಯುರ್ಬಲವತಾಂ ದೇವಿ ಯೋಗಿನಾಂ ತ್ವಂ ಕುಮಾರಕಃ ।
ಋಷೀಣಾಂ ಚ ವಸಿಷ್ಠಸ್ತ್ವಂ ವ್ಯಾಸೋ ವೇದವಿದಾಮಸಿ ॥ ೨೧೬ ॥

---

೨೧೩. ಮಹೇಶ್ವರನು ನಿನ್ನ ಶಕ್ತಿಯಿಂದ ಸಮಸ್ತ ಜಗತ್ತನ್ನು ಸೃಜಿಸುತ್ತಾನೆ. ಮತ್ತು ಕಡೆಯಲ್ಲಿ ಸಂಹರಿಸುತ್ತಾನೆ. ಆ ಪರಶಿವನು ನಿನ್ನ ಸಂಪರ್ಕವನ್ನು ಹೊಂದಿ ಆತ್ಮಾನಂದವನ್ನು ಅನುಭವಿಸುತ್ತಾನೆ.

೨೧೪. ನೀನೇ ಪರಮಾನಂದಸ್ವರೂಪಳು. ನೀನೇ ಪರಮಾನಂದವನ್ನು ಕೊಡುವವಳು. ನೀನೇ ಪರಮಾಕಾಶ ಮಹಾಜ್ಯೋತಿ ನಿರ್ದುಷ್ಟ ರೂಪ ಮುಂತಾದ ವಿಶೇಷಣಗಳಿಂದ ಕೂಡಿದ ಅಕ್ಷರಸ್ವರೂಪಳು.

೨೧೫. ಕಲ್ಯಾಣಮಯವೂ ಸರ್ವ ವ್ಯಾಪಕವೂ ಸೂಕ್ಷ್ಮವೂ ಅನಾದಿಯೂ ಆದ ಪರಬ್ರಹ್ಮವು ನೀನಾಗಿದ್ದೀ, ನೀನು ಸರ್ವ ದೇವತೆಗಳಿಗೆ ಇಂದ್ರನೂ ಬ್ರಹ್ಮಜ್ಞಾನಿಗಳಲ್ಲಿ ಬ್ರಹ್ಮದೇವನೂ ಆಗಿದ್ದೀಯೆ.

೨೧೬. ದೇವಿಯೇ! ಬಲಿಷ್ಠರಲ್ಲಿ ವಾಯುದೇವನೂ ಯೋಗಿಗಳಲ್ಲಿ ಸನತ್ಕುಮಾರನೂ ಋಷಿಗಳಲ್ಲಿ ವಸಿಷ್ಠಮುನಿಯೂ ವೇದವೇತ್ತರಲ್ಲಿ ವ್ಯಾಸಮುನಿಯೂ ನೀನೇ ಆಗಿದ್ದೀ.

ಸಾಂಖ್ಯಾನಾಂ ಕಪಿಲೋ ದೇವೋ ರುದ್ರಾಣಾಂ ಚಾಪಿ ಶಂಕರಃ ।
ಆದಿತ್ಯಾನಾಮುಪೇಂದ್ರಸ್ತ್ವಂ ವಸೂನಾಂ ಚೈವ ಪಾವಕಃ ॥ ೨೧೭ ॥

ವೇದಾನಾಂ ಸಾಮವೇದಸ್ತ್ವಂ ಗಾಯತ್ರೀ ಛಂದಸಾಮಸಿ ।
ಅಧ್ಯಾತ್ಮವಿದ್ಯಾ ವಿದ್ಯಾನಾಂ ಗತೀನಾಂ ಪರಮಾ ಗತಿಃ ॥ ೨೧೮ ॥

ಮಾಯಾ ತ್ವಂ ಸರ್ವಶಕ್ತೀನಾಂ ಕಾಲಃ ಕಲಯತಾಮಸಿ ।
ಓಂಕಾರಃ ಸರ್ವಗುಹ್ಯಾನಾಂ ವರ್ಣಾನಾಂ ಚ ದ್ವಿಜೋತ್ತಮಃ॥ ೨೧೯ ॥

ಆಶ್ರಮಾಣಾಂ ಗೃಹಸ್ಥಸ್ತ್ವಮೀಶ್ವರಾಣಾಂ ಮಹೇಶ್ವರಃ ।
ಪುಂಸಾಂ ತ್ವಮೇಕಃ ಪುರುಷಃ ಸರ್ವಭೂತಹೃದಿ ಸ್ಥಿತಃ । ॥ ೨೨೦ ॥

---

೨೧೭. ಸಾಂಖ್ಯರಲ್ಲಿ ಕಪಿಲದೇವನೂ ರುದ್ರರಲ್ಲಿ ಶಂಕರಮೂರ್ತಿಯೂ ಆದಿತ್ಯರಲ್ಲಿ ಉಪೇಂದ್ರಸ್ವರೂಪನೂ ವಸ್ತುಗಳಲ್ಲಿ ಪಾವಕನೂ ನೀನೇ ಆಗಿದ್ದೀಯೆ.

೨೧೮. ಮತ್ತು ನೀನು ವೇದಗಳಲ್ಲಿ ಸಾಮವೇದರೂಪಳಾದ್ದೀಯೆ. ಛಂದಸ್ಸುಗಳಲ್ಲಿ ಗಾಯತ್ರೀರೂಪಳಾಗಿದ್ದೀಯೆ. ವಿದ್ಯೆಗಳಲ್ಲಿ ಅಧ್ಯಾತ್ಮವಿದ್ಯೆಯಾಗಿದ್ದೀಯೆ. ಗಮ್ಯಸ್ಥಾನಗಳಲ್ಲಿ ಉತ್ತಮ ಸದ್ಗತಿರೂಪಳಾಗಿದ್ದೀಯೆ.

೨೧೯. ಮತ್ತು ಸರ್ವಶಕ್ತಿಗಳಲ್ಲಿ ಮಾಯಾಶಕ್ತಿಯು ನೀನೇ, ಕಾಲಪ್ರೇರಕರಲ್ಲಿ. ಕಾಲಸ್ವರೂಪಳು ನೀನೇ, ಸರ್ವ ರಹಸ್ಯ ವಿದ್ಯೆಗಳಲ್ಲಿ ಓಂಕಾರವು ನೀನೇ, ಚಾತುರ್ವರ್ಣ್ಯದಲ್ಲಿ ಬ್ರಾಹ್ಮಣೋತ್ತಮನು ನೀನೇ.

೨೨೦. ನಾಲ್ಕು ಆಶ್ರಮಗಳಲ್ಲಿ ಗೃಹಸ್ಥಾಶ್ರಮಿಯು ನೀನೇ, ಈಶ್ವರರಲ್ಲಿ ಮಹೇಶ್ವರನು ನೀನೇ, ಪುರುಷರ ಸರ್ವಭೂತಗಳ ಹೃದಯದಲ್ಲಿ ವಾಸಮಾಡುವ ಅದ್ವಿತೀಯ ಪೂರ್ಣ ಪುರುಷನು ನೀನೆ.

ಸರ್ವೋಪನಿಷದಾಂ ದೇವಿ ಗುಹ್ಯೋಪನಿಷದುಚ್ಯಸೇ ।
ಈಶಾನಶ್ಚಾಪಿ ಕಲ್ಪಾನಾಂ ಯುಗಾನಾಂ ಕೃತಮೇವ ಚ ॥ ೨೨೧ ॥

ಆದಿತ್ಯಃ ಸರ್ವಮಾರ್ಗಾಣಾಂ ವಾಚಾಂ ದೇವೀ ಸರಸ್ವತೀ ।
ತ್ವಂ ಲಕ್ಷ್ಮೀಶ್ಚಾರುರೂಪಾಣಾಂ ವಿಷ್ಣುರ್ಮಾಯಾವಿನಾಮಸಿ ॥ ೨೨೨ ॥

ಅರುಂಧತೀ ಸತೀನಾಂ ತ್ವಂ ಸುಪರ್ಣಃ ಪತತಾಮಸಿ ।
ಸೂಕ್ತಾನಾಂ ಪೌರುಷಂ ಸೂಕ್ತಂ ಸಾಮ ಜ್ಯೇಷ್ಠಂ ಚ ಸಾಮಸು ॥೨೨೩॥

ಸಾವಿತ್ರೀ ಚಾಪಿ ಜಾಪ್ಯಾನಾಂ ಯಜುಷಾಂ ಶತರುದ್ರಿಯಮ್ ।
ಪರ್ವತಾನಾಂ ಮಹಾಮೇರುರನಂತೋ ಭೋಗಿನಾಮಪಿ ॥ ೨೨೪ ॥

ಸರ್ವೇಷಾಂ ತ್ವಂ ಪರಬ್ರಹ್ಮ ತ್ವನ್ಮಯಂ ಸರ್ವಮೇವ ಹಿ ॥ ೨೨೫ ॥

---

೨೨೧. ದೇವಿಯೇ! ಸರ್ವ ಉಪನಿಷತ್ತುಗಳಲ್ಲಿ ರಹಸ್ಯೋಪನಿಷದ್ರೂಪಳೆಂದು ನೀನು ಹೇಳಲ್ಪಡುತ್ತೀ, ಮತ್ತು ಕಲ್ಪಗಳಲ್ಲಿ ಪ್ರಭುವೂ ಚತುರ್ಯುಗಗಳಲ್ಲಿ ಕೃತ ಯುಗರೂಪಳೂ ನೀನೇ ಆಗಿದ್ದೀ.

೨೨೨. ಸರ್ವಮಾರ್ಗಗಳಿಗೆ ಪ್ರಕಾಶಕಳೂ ಸರ್ವವಾಙ್ಮಯಗಳಿಗೆ ಪ್ರಕಾಶಕಳಾದ ಸರಸ್ವತಿಯೂ ಸುಂದರರೂಪಗಳಿಗೆ ಶೋಭಾರೂಪಳೂ ಮಾಯಾವಿಗಳಿಗೆ ಅತಿ ಮಾಯಾವಿ ಎನಿಸಿದ ವಿಷ್ಣುರೂಪಳೂ ನೀನೇ ಆಗಿದ್ದೀ.

೨೨೩. ಮತ್ತು ಸಾಧ್ವಿಯರಲ್ಲಿ ಅರುಂಧತಿಯು ನೀನು, ಪಕ್ಷಿಗಳಲ್ಲಿ ಗರುಡ ಪಕ್ಷಿಯು ನೀನು, ಸೂಕ್ತಗಳಲ್ಲಿ ಪುರುಷಸೂಕ್ತವು ನೀನು, ಮತ್ತು ಸಾಮಗಾನಗಳಲ್ಲಿ ಜೇಷ್ಠಸಾಮವು ನೀನು.

೨೨೪. ಜಪಿಸುವ ಮಂತ್ರಗಳಲ್ಲಿ ಸಾವಿತ್ರೀಮಂತ್ರವು ನೀನು. ಯಜುರ್ವೇದಗಳಲ್ಲಿ ಶತರುದ್ರಿಯವು ನೀನು, ಪರ್ವತಗಳಲ್ಲಿ ಮಹಾಮೇರುಗಿರಿಯು ನೀನು, ಮತ್ತು ಸರ್ಪಗಳಲ್ಲಿ ಆದಿಶೇಷನು ನೀನು ಆಗಿದ್ದೀಯೆ.

೨೨೫. ಮತ್ತು ಸಮಸ್ತ ವಸ್ತುಗಳಲ್ಲಿಯೂ ವ್ಯಾಪಿಸಿರುವ ಪರಬ್ರಹ್ಮವು ನೀನು, ಸಮಸ್ತ ಚರಾಚರ ಪ್ರಪಂಚವು ನಿನ್ನಿಂದ ಪರಿಪೂರ್ಣವಾಗಿರುವುದು.

ರೂಪಂ ತವಾಶೇಷವಿಕಾರಹೀನ-
ಮಗೋಚರಂ ನಿರ್ಮಲಮೇಕರೂಪಮ್ ।
ಅನಾದಿಮಧ್ಯಾಂತಮನಂತಮಾದ್ಯಂ
ನಮಾಮಿ ಸತ್ಯಂ ತಮಸಃ ಪರಸ್ತಾತ್ ॥ ೨೨೬ ॥

ಯದೇವ ಪಶ್ಯಂತಿ ಜಗತ್ಪ್ರಸೂತಿಂ
ವೇದಾಂತವಿಜ್ಞಾನವಿನಿಶ್ಚಿತಾರ್ಥಾಃ ।
ಆನಂದಮಾತ್ರಂ ಪ್ರಣವಾಭಿಧಾನಂ
ತದೇವ ರೂಪಂ ಶರಣಂ ಪ್ರಪದ್ಯೇ ॥ ೨೨೭ ॥

ಅಶೇಷಭೂತಾಂತರಸನ್ನಿವಿಷ್ಟಂ
ಪ್ರಧಾನಪುಂಯೋಗವಿಯೋಗಹೇತುಮ್ ।
ತೇಜೋಮಯಂ ಜನ್ಮವಿನಾಶಹೀನಂ
ಪ್ರಾಣಾಭಿಧಾನಂ ಪ್ರಣತೋಽಸ್ಮಿ ರೂಪಮ್ ॥ ೨೨೮ ॥

---

೨೨೬. ದೇವಿಯೇ! ಸಮಸ್ತ ವಿಕಾರಗಳಿಂದ ಶೂನ್ಯವೂ, ಇಂದ್ರಿಯಾಗೋಚರವೂ, ನಿರ್ಮಲವೂ, ಏಕರೂಪವೂ, ಆದಿ-ಮಧ್ಯ-ಅಂತರಹಿತವೂ, ನಿತ್ಯವೂ, ಸರ್ವವಸ್ತುಗಳಿಗೆ ಆದಿಭೂತವೂ, ಶಾಶ್ವತವೂ ಮತ್ತು ತಮೋಗುಣಾತೀತವೂ ಆದ ನಿನ್ನ ರೂಪವನ್ನು ವಂದಿಸುವೆನು.

೨೨೭. ವೇದಾಂತಾರ್ಥ ಅನುಭವದಿಂದ ತತ್ತ್ವ ನಿಶ್ಚಯವುಳ್ಳ ಯೋಗಿಗಳು ಸಾಕ್ಷಾತ್ಕರಿಸುವ, ಜಗತ್ಕಾರಣವಾದ, ಆನಂದ ಘನವಾದ ಮತ್ತು ಓಂಕಾರವೆಂಬ ನಾಮಾಂಕಿತವಾದ ಆ ನಿನ್ನ ರೂಪವನ್ನು ಶರಣುಹೊಂದುವೆನು.

೨೨೮. ಮತ್ತು ಸಮಸ್ತ ಭೂತಗಳ ಅಂತರಾಳದಲ್ಲಿ ಇರುವ, ಪ್ರಧಾನ ಪುರುಷರ ಸಂಯೋಗ ವಿಯೋಗಗಳಿಗೆ ಕಾರಣವಾದ, ತೇಜೋಮಯವಾದ, ಜನ್ಮ ವಿನಾಶಗಳಿಗೆ ಕಾರಣವಾದ ಮತ್ತು ಪ್ರಾಣ ಎಂಬ ಸಂಜ್ಞಾಂಕಿತವಾದ ನಿನ್ನ ರೂಪ ವನ್ನು ವಂದಿಸುವೆನು.

ಆದ್ಯಂತಹೀನಂ ಜಗದಾತ್ಮರೂಪಂ
ವಿಭಿನ್ನಸಂಸ್ಥಂ ಪ್ರಕೃತೇಃ ಪರಸ್ತಾತ್ ।
ಕೂಟಸ್ಥಮವ್ಯಕ್ತವಪುಸ್ತಥೈವ
ನಮಾಮಿ ರೂಪಂ ಪುರುಷಾಭಿಧಾನಮ್ ॥ ೨೨೯ ॥

ಸರ್ವಾಶ್ರಯಂ ಸರ್ವಜಗದ್ವಿಧಾನಂ
ಸರ್ವತ್ರಗಂ ಜನ್ಮವಿನಾಶಹೀನಮ್ ।
ಸೂಕ್ಷ್ಮಂ ವಿಚಿತ್ರಂ ತ್ರಿಗುಣಂ ಪ್ರಧಾನಂ
ನತೋಽಸ್ಮಿ ತೇ ರೂಪಮರೂಪಭೇದಮ್ ॥ ೨೩೦ ॥

ಆದ್ಯಂ ಮಹಾಂತಂ ಪುರುಷಾಭಿಧಾನಂ
ಪ್ರಕೃತ್ಯವಸ್ಥಂ ತ್ರಿಗುಣಾತ್ಮಬೀಜಮ್ ।
ಐಶ್ವರ್ಯವಿಜ್ಞಾನವಿರೋಧಧರ್ಮೈಃ
ಸಮನ್ವಿತಂ ದೇವಿ ನತೋಽಸ್ಮಿ ರೂಪಮ್ ॥ ೨೩೧ ॥

---

೨೨೯. ಆದಿ-ಅಂತ ವರ್ಜಿತವೂ, ವಿಶ್ವಾತ್ಮ ಸ್ವರೂಪವೂ, ಬೇರೆಬೇರೆಯಾಗಿ ಇರುವುದೂ, ಪ್ರಕೃತಿ ತತ್ವಕ್ಕೆ ದೂರವೂ, ನಿರ್ವಿಕಾರವೂ, ಅವ್ಯಕ್ತವಾದ ಶರೀರ ವುಳ್ಳದ್ದೂ ಮತ್ತು ಪುರುಷ ಎಂಬ ನಾಮಾಂಕಿತವೂ ಆದ ನಿನ್ನ ರೂಪವನ್ನು ಮತ್ತೆ ನಮಸ್ಕರಿಸುವೆನು.

೧೩೦. ಸಮಸ್ತ ವಸ್ತುಗಳಿಗೆ ಆಶ್ರಯವೂ, ಸರ್ವಜಗನ್ನಿರ್ಮಾತೃವೂ, ಸರ್ವ ವ್ಯಾಪಕವೂ, ಜನ್ಮ-ನಾಶ ವರ್ಜಿತವೂ, ಸೂಕ್ಷ್ಮವೂ, ವಿಚಿತ್ರವೂ, ಗುಣಸಮಷ್ಟಿ ರೂಪವೂ, ಪ್ರಧಾನ ಸ್ವರೂಪವೂ ಮತ್ತು ರೂಪಭೇದ ವರ್ಜಿತವೂ ಆದ ನಿನ್ನ ರೂಪಕ್ಕೆ ನಮಸ್ಕಾರವು.

೨೩೧. ದೇವಿಯೇ ! ಸರ್ವ ಜಗತ್ತಿಗೆ ಆದಿ ಭೂತವೂ, ಮಹಾ ರೂಪವೂ, ಪುರುಷಸಂಜ್ಞಾಂಕಿತವೂ, ಪ್ರಕೃತಿಯ ಅವಸ್ಥೆಯುಳ್ಳದ್ದೂ, ಸತ್ವ-ರಜ-ತಮೋ ಗುಣಗಳ ಬೀಜರೂಪವೂ, ಐಶ್ವರ್ಯ-ಜ್ಞಾನ-ವೈರಾಗ್ಯ-ಧರ್ಮಗಳಿಂದ ಕೂಡಿರು ವುದೂ ಆದ ನಿನ್ನ ರೂಪವನ್ನು ವಂದಿಸುವೆನು.

ದ್ವಿಸಪ್ತಲೋಕಾತ್ಮಕಮಂಬುಸಂಸ್ಥಂ
ವಿಚಿತ್ರಭೇದಂ। ಪುರುಷೈಕನಾಥಮ್ ।
ಅನೇಕಭೇದೈರಧಿವಾಸಿತಂ ತೇ
ನತೋಽಸ್ಮಿ ರೂಪಂ ಜಗದಂಡಸಂಜ್ಞಮ್ ॥ ೨೩೨ ॥

ಅಶೇಷವೇದಾತ್ಮಕಮೇಕಮಾದ್ಯಂ
ತ್ವತ್ತೇಜಸಾ ಪೂರಿತಲೋಕಭೇದಮ್ ।
ತ್ರಿಕಾಲಹೇತುಂ ಪರಮೇಷ್ಠಿಸಂಜ್ಞಂ
ನಮಾಮಿ ರೂಪಂ ರವಿಮಂಡಲಸ್ಥಮ್ ॥ ೨೩೩ ॥

ಸಹಸ್ರಮೂರ್ಧಾನಮನಂತಶಕ್ತಿಂ
ಸಹಸ್ರಬಾಹುಂ ಪುರುಷಂ ಪುರಾಣಮ್ ।
ಶಯಾನಮಂತಃ ಸಲಿಲೇ ತವೈವ
ನಾರಾಯಣಾಖ್ಯಂ ಪ್ರಣತೋಽಸ್ಮಿ ರೂಪಮ್ ॥ ೨೩೪ ॥

---

೨೩೨. ಚತುರ್ದಶ ಭುವನ ರೂಪವೂ, ಜಲಗರ್ಭದಲ್ಲಿರುವುದೂ, ವಿಚಿತ್ರವಾದ ಭೇದವುಳ್ಳದ್ದೂ, ಪೂರ್ಣರೂಪದಿಂದ ಏಕಪ್ರಭು ರೂಪವೂ, ಅನೇಕ ಪ್ರಭೇದಗಳಿಂದ ಸಂಸ್ಕೃತವೂ ಮತ್ತು ಬ್ರಹ್ಮಾಂಡವೆಂಬ ನಾಮಾಂಕಿತವೂ ಆದ ನಿನ್ನ ರೂಪವನ್ನು ನಮಸ್ಕರಿಸುವೆನು.

೨೩೩. ಸಮಸ್ತ ವೇದ ಸ್ವರೂಪವೂ, ಅದ್ವಿತೀಯವೂ, ಆದಿ ಭೂತವೂ, ನಿನ್ನ ತೇಜಸ್ಸಿನಿಂದ ಸರ್ವಲೋಕಗಳನ್ನು ಪೂರ್ಣಗೊಳಿಸಿರುವುದೂ, ಕಾಲತ್ರಯಕ್ಕೆ ಕಾರಣವೂ, ಪರಮೇಷ್ಠಿಯೆಂಬ ನಾಮಾಂಕಿತವೂ ಮತ್ತು ಸೂರ್ಯಮಂಡಲವರ್ತಿಯೂ ಆದ ನಿನ್ನ ರೂಪವನ್ನು ನಮಸ್ಕರಿಸುವೆನು.

೨೩೪. ಸಹಸ್ರ ಶಿರಸ್ಸುಗಳುಳ್ಳ, ಅನಂತವಾದ ಶಕ್ತಿಯುಳ್ಳ, ಸಹಸ್ರ ಬಾಹುಗಳುಳ್ಳ, ಪುರಾಣ ಪುರುಷರೂಪವಾದ, ಜಲಗರ್ಭದಲ್ಲಿ ಶಯನ ಮಾಡುವ ಮತ್ತು ನಾರಾಯಣ ಎಂಬ ಹೆಸರುಳ್ಳ ನಿನ್ನ ರೂಪವನ್ನು ನಮಸ್ಕರಿಸುವೆನು.

ದಂಷ್ಟ್ರಾಕರಾಲಂ ತ್ರಿದಶಾಭಿವಂದ್ಯಂ
ಯುಗಾಂತಕಾಲಾನಲಕಲ್ಪರೂಪಮ್ ।
ಅಶೇಷಭೂತಾಂಡವಿನಾಶಹೇತುಮ್
ನಮಾಮಿ ರೂಪಂ ತವ ಕಾಲಸಂಜ್ಞಮ್ ॥ ೨೩೫ ॥

ಫಣಾಸಹಸ್ರೇಣ ವಿರಾಜಮಾನಂ
ಭೋಗೀಂದ್ರಮುಖ್ಯೈರಪಿ ಪೂಜ್ಯಮಾನಮ್ ।
ಜನಾರ್ಧನಾರೂಢತನುಂ ಪ್ರಸುಪ್ತಂ
ನತೋಽಸ್ಮಿ ರೂಪಂ ತವ ಶೇಷಸಂಜ್ಞಮ್ ॥ ೨೩೬ ॥

ಅವ್ಯಾಹತೈಶ್ವರ್ಯಮಯುಗ್ಮನೇತ್ರಂ
ಬ್ರಹ್ಮಾಮೃತಾನಂದರಸಜ್ಞಮೇಕಮ್ ।
ಯುಗಾಂತಶೇಷಂ ದಿವಿ ನೃತ್ಯಮಾನಂ
ನತೋಽಸ್ಮಿ ರೂಪಂ ತವ ರುದ್ರಸಂಜ್ಞಮ್ ॥ ೨೩೭ ॥

---

೨೩೫. ಕೋರೆ ಹಲ್ಲುಗಳಿಂದ ಕರಾಳವೂ, ದೇವತೆಗಳಿಂದ ವಂದನೀಯವೂ, ಕಲ್ಪಾಂತಕಾಲದ ಅಗ್ನಿ ಉತ್ಪತ್ತಿಗೆ ಕಾರಣವೂ, ಸಮಸ್ತ ಭೂತಗಳಿಂದ ಕೂಡಿದ ಬ್ರಹ್ಮಾಂಡ ನಾಶಕ್ಕೆ ಕಾರಣವೂ ಮತ್ತು ಕಾಲಸಂಜ್ಞಾಂಕಿತವೂ ಆದ ನಿನ್ನ ರೂಪಕ್ಕೆ ನಮಸ್ಕಾರವು.

೨೩೬. ಸಹಸ್ರ ಹೆಡೆಗಳಿಂದ ಪ್ರಕಾಶಿಸುತ್ತಿರುವ, ಮುಖ್ಯರಾದ ನಾಗೇಂದ್ರರಿಂದ ಪೂಜಿಸಲ್ಪಡುವ, ಮಹಾವಿಷ್ಣುವಿನಿಂದ ಸೇವಿಸಲ್ಪಟ್ಟ ದೇಹವುಳ್ಳ ಮತ್ತು ಮಲಗಿರುವ ಆದಿಶೇಷ ಸಂಜ್ಞೆಯುಳ್ಳ ನಿನ್ನ ರೂಪವನ್ನು ನಮಸ್ಕರಿಸುವೆನು.

೨೩೭. ಅಕುಂಠಿತವಾದ ಐಶ್ವರ್ಯದಿಂದಲೂ, ವಿಷಮಸಂಖ್ಯೆಯ ನೇತ್ರಗಳಿಂದಲೂ, ಅಮೃತ ರೂಪವಾದ ಬ್ರಹ್ಮಾನಂದ ರಸಾನುಭವದಿಂದಲೂ, ಕೂಡಿರುವ ಅದ್ವಿತೀಯವಾದ ಕಲ್ಪಾಂತದಲ್ಲಿ ಪ್ರಕಾಶಿಸುವ, ಸ್ವರ್ಗದಲ್ಲಿ ನಾಟ್ಯವಾಡುವ ರುದ್ರ ಸಂಜ್ಞಾಂಕಿತವಾದ ನಿನ್ನ ಮೂರ್ತಿಯನ್ನು ನಮಸ್ಕರಿಸುವೆನು.

ಪ್ರಹೀಣಶೋಕಂ ಪ್ರವಿಹೀನರೂಪಂ
ಸುರಾಸುರೈರರ್ಚಿತಪಾದಪದ್ಮಮ್ ।
ಸುಕೋಮಲಂ ದೇವಿ ವಿಭಾಸಿ ಶುಭ್ರಂ
ನಮಾಮಿ ತೇ ರೂಪಮಿದಂ ಭವಾನಿ ॥ ೨೩೮ ॥

ನಮಸ್ತೇಽಸ್ತು ಮಹಾದೇವಿ ನಮಸ್ತೇ ಪರಮೇಶ್ವರಿ ।
ನಮೋ ಭಗವತೀಶಾನಿ ಶಿವಾಯೈ ತೇ ನಮೋ ನಮಃ ॥ ೨೩೯ ॥

ತ್ವನ್ಮಯೋಽಹಂ ತ್ವದಾಧಾರಸ್ತ್ವಮೇವ ಚ ಗತಿರ್ಮಮ ।
ತ್ವಾಮೇವ ಶರಣಂ ಯಾಸ್ಯೇ ಪ್ರಸೀದ ಪರಮೇಶ್ವರಿ ॥ ೨೪೦ ॥

ಮಯಾ ನಾಸ್ತಿ ಸಮೋ ಲೋಕೇ ದೇವೋ ವಾ ದಾನವೋಽಪಿ ವಾ ।
ಜಗನ್ಮಾತ್ರೈವ ಮತ್ಪುತ್ರೀ ಸಂಭೂತಾ ತಪಸಾ ಯತಃ ॥ ೨೪೧ ॥

---

೨೩೮. ಶಿವನ ಸತಿಯಾದ ದೇವಿಯೇ ! ಶೋಕವರ್ಜಿತವೂ, ರೂಪ ಶೂನ್ಯವೂ, ದೇವಾಸುರರಿಂದ ಪೂಜಿಸಲ್ಪಟ್ಟ ಪಾದಕಮಲವುಳ್ಳದ್ದೂ, ಅತಿಮೃದುವೂ, ಪ್ರಕಾಶಮಾನವೂ, ಮತ್ತು ಸ್ವಚ್ಛವೂ ಆದ ನಿನ್ನ ರೂಪವನ್ನು ವಂದಿಸುವೆನು.

೨೩೯. ಓಂಕಾರ ರೂಪಿಣಿಯಾದ ಮಹಾದೇವಿಯೇ ! ನಿನಗೆ ನಮಸ್ಕಾರವು. ಪರಮೇಶ್ವರಿಯೇ ! ನಿನಗೆ ನಮಸ್ಕಾರವು. ಪೂಜ್ಯಳಾದ ಈಶ್ವರ ಪತ್ನಿಯೇ ! ನಿನಗೆ ನಮಸ್ಕಾರವು. ಶಿವರೂಪಿಣಿಯಾದ ನಿನಗೆ ನಮಸ್ಕಾರವು.

೨೪೦. ಪರಮೇಶ್ವರಿಯೇ ! ನಾನು ನಿನ್ನಿಂದ ಪೂರ್ಣನಾಗಿ ನಿನ್ನನ್ನು ಆಧಾರವನ್ನಾಗಿ ಹೊಂದಿರುವೆನು. ನೀನೇ ನನಗೆ ಪರಮಗತಿಯು. ನಾನು ನಿನ್ನನ್ನೇ ಶರಣುಹೊಂದಿದ್ದೇನೆ. ನನ್ನಲ್ಲಿ ಅನುಗ್ರಹ ತೋರು.

೨೪೧. ಜಗದಂಬೆಯಾದ ನೀನು ನನ್ನ ತಪೋ ಬಲದಿಂದ ನನಗೆ ಪುತ್ರಿ ಯಾಗಿ ಜನಿಸಿದ್ದೀಯೆ. ಆದುದರಿಂದ ಲೋಕದಲ್ಲಿ ನನಗೆ ಸಮನಾದ ದೇವತೆ ಯಾಗಲಿ ದಾನವನಾಗಲಿ ಮತ್ತಾರೂ ಇಲ್ಲ.

ಏಷಾ ತವಾಂಬಿಕೇ ದೇವಿ ಕಿಲಾಭೂತ್ ಪಿತೃಕನ್ಯಕಾ ।
ಮೇನಾಶೇಷಜಗನ್ಮಾತುರಹೋ ಮೇ ಪುಣ್ಯಗೌರವಮ್ ॥ ೨೪೨ ॥

ಪಾಹಿ ಮಾಮಮರೇಶಾನಿ ಮೇನಯಾ ಸಹ ಸರ್ವದಾ ।
ನಮಾಮಿ ತವ ಪಾದಾಬ್ಜಂ ವ್ರಜಾಮಿ ಶರಣಂ ಶಿವಮ್ ॥ ೨೪೩ ॥

ಅಹೋ ಮೇ ಸುಮಹದ್ಭಾಗ್ಯಂ ಮಹಾದೇವೀಸಮಾಗಮಾತ್ ।
ಆಜ್ಞಾಪಯ ಮಹಾದೇವಿ ಕಿಂ ಕರಿಷ್ಯಾಮಿ ಶಂಕರಿ ॥ ೨೪೪ ॥

ಏತಾವದುಕ್ತ್ವಾ ವಚನಂ ತದಾ ಹಿಮಗಿರೀಶ್ವರಃ ।
ಸಂಪ್ರೇಕ್ಷಮಾಣೋ ಗಿರಿಜಾಂ ಪ್ರಾಂಜಲಿಃ ಪಾರ್ಶ್ವಗೋಽಭವತ್ ॥೨೪೫॥

---

೨೪೨. ಜಗನ್ಮಾತೆಯಾದ ದೇವತೆಯೇ! ಈ ನಿನ್ನ ಪಿತೃಕನ್ಯೆಯಾದ ಮೇನಾದೇವಿಯು ಜಗನ್ಮಾತೆಯಾದ ನಿನಗೆ ತಾಯಿಯಾಗಿರುವಳು. ನನ್ನ ಗುರುತರವಾದ ಪುಣ್ಯವು ಆಶ್ಚರ್ಯವಾದುದು.

೨೪೩. ದೇವದೇವಿಯೇ! ಈ ಮೇನಾದೇವಿಯೊಡನೆ ನನ್ನನ್ನು ನೀನು ಸರ್ವಕಾಲದಲ್ಲಿಯೂ ರಕ್ಷಿಸು. ನಿನ್ನ ಪಾದ ಕಮಲವನ್ನು ವಂದಿಸುವೆನು. ಶಿವರೂಪಿಣಿಯಾದ ನಿನ್ನನ್ನು ಶರಣು ಹೊಂದುವೆನು.

೨೪೪. ಶಂಕರನ ಸತಿಯಾದ ಮಹಾದೇವಿಯೇ! ಮಹಾದೇವಿಯಾದ ನಿನ್ನ ಸಮಾಗಮದಿಂದ ನನಗೆ ಅತಿ ಮಹತ್ತಾದ ಭಾಗ್ಯೋದಯವಾಯಿತು. ಪರಮಾಶ್ಚರ್ಯವು. ಈಗ ನಾನೇನು ಮಾಡಲಿ ? ಆಜ್ಞಾಪಿಸು.

೨೪೫. ಆಗ ಪರ್ವತ ರಾಜನಾದ ಹಿಮವಂತನು ಇಷ್ಟು ವಚನವನ್ನು ಹೇಳಿ ಅಂಜಲಿಬದ್ಧನಾಗಿ ಪಾರ್ವತೀ ದೇವಿಯನ್ನು ನೋಡುತ್ತಾ ಪಾರ್ಶ್ವಕ್ಕೆ ಸರಿದವನಾದನು.

ಅಥ ಸಾ ತಸ್ಯ ವಚನಂ ನಿಶಮ್ಯ ಜಗತೋಽರಣಿಃ ।
ಸಸ್ಮಿತಂ ಪ್ರಾಹ ಪಿತರಂ ಸ್ಮೃತ್ವಾ ಪಶುಪತಿಂ ಪತಿಮ್ ॥ ೨೪೬ ॥

ಶ್ರೀ ದೇವ್ಯುವಾಚ :—

ಶೃಣುಷ್ವ ಚೈತತ್ಪ್ರಥಮಂ ಗುಹ್ಯಮೀಶ್ವರಗೋಚರಮ್ ।
ಉಪದೇಶಂ ಗಿರಿಶ್ರೇಷ್ಠ ಸೇವಿತಂ ಬ್ರಹ್ಮವಾದಿಭಿಃ ॥ ೨೪೭ ॥

ಯನ್ಮೇ ಸಾಕ್ಷಾತ್ಪರಂ ರೂಪಮೈಶ್ವರಂ ದೃಷ್ಟಮದ್ಭುತಮ್ ।
ಸರ್ವಶಕ್ತಿಸಮಾಯುಕ್ತಮನಂತಂ ಪ್ರೇರಕಂ ಪರಮ್ ॥ ೨೪೮ ॥

ಶಾಂತಃ ಸಮಾಹಿತಮನಾ ಮಾನಾಹಂಕಾರವರ್ಜಿತಃ ।
ತನ್ನಿಷ್ಠಸ್ತತ್ಪರೋ ಭೂತ್ವಾ ತದೇವ ಶರಣಂ ವ್ರಜ ॥ ೨೪೯ ॥

---

೨೪೬. ತರುವಾಯ ಸರ್ವ ಜಗತ್ಕಾರಣಳಾದ ಆ ಪಾರ್ವತೀ ದೇವಿಯು ಹಿಮವಂತನ ವಚನವನ್ನು ಕೇಳಿ ಬ್ರಹ್ಮಾದಿ ಪಶುಗಳಿಗೆ ಪಾಲಕನಾದ ತನ್ನ ಪತಿಯಾದ ಶಿವನನ್ನು ಸ್ಮರಿಸಿ ತಂದೆಯನ್ನು ಕುರಿತು ನಗುತ್ತಾ ಮಾತನಾಡಿದಳು.

೨೪೭. ಪಾರ್ವತೀ ದೇವಿಯು ಹೀಗೆಂದಳು :—ಪರ್ವತ ರಾಜನೇ ! ಬ್ರಹ್ಮ ಜ್ಞಾನಿಗಳಿಂದ ಸೇವಿಸಲ್ಪಟ್ಟಿರುವ, ಈಶ್ವರನಿಗೆ ಮಾತ್ರ ವೇದ್ಯವಾದ, ರಹಸ್ಯೋಪ ದೇಶವನ್ನು ಮೊದಲು ನೀನು ಕೇಳುವವನಾಗು.

೨೪೮. ಸಮಸ್ತ ಶಕ್ತಿಗಳಿಂದ ಕೂಡಿರುವುದೂ, ಅಂತ ಶೂನ್ಯವೂ, ಸರ್ವ ಪ್ರೇರಕವೂ, ಸರ್ವೋತ್ತಮವೂ, ಅತ್ಯಾಶ್ಚರ್ಯ ಜನಕವೂ ಮತ್ತು ಈಶ್ವರ ಭಾವದಿಂದ ಕೂಡಿರುವುದೂ ಆದ ನನ್ನ ಪರರೂಪವನ್ನು ನೀನು ಸಾಕ್ಷಾತ್ಕರಿಸಿದ್ದೀಯೆ.

೨೪೯. ಇನ್ನು ಮುಂದೆ ಶಾಂತ ಶೀಲನೂ, ಏಕಾಗ್ರತೆಯುಳ್ಳ ಚಿತ್ತವುಳ್ಳವನೂ, ಪೂಜ್ಯತೆಯ ಅಹಂಕಾರದಿಂದ ವರ್ಜಿತನೂ ಆಗಿ ಬ್ರಹ್ಮನಿಷ್ಠೆ ಮತ್ತು ತತ್ಪರತೆಗಳಿಂದ ಕೂಡಿ ಆ ಐಶ್ವರ ರೂಪವನ್ನು ಶರಣು ಹೊಂದು.

ಭಕ್ತ್ಯಾ ತ್ವನನ್ಯಯಾ ತಾತ ಮದ್ಭಾವಂ ಪರಮಾಶ್ರಿತಃ ।
ಸರ್ವಯಜ್ಞತಪೋದಾನೈಸ್ತದೇವಾರ್ಚಯ ಸರ್ವದಾ ॥ ೨೫೦ ॥

ತದೇವ ಮನಸಾ ಪಶ್ಯ ತದ್ಧ್ಯಾಯಸ್ವ ಯಜಸ್ವ ತತ್ ।
ಮಮೋಪದೇಶಾತ್ಸಂಸಾರಂ ನಾಶಯಾಮಿ ತವಾನಘ ॥ ೨೫೧ ॥

ಅಹಂ ತ್ವಾಂ ಪರಯಾ ಭಕ್ತ್ಯಾ ಐಶ್ವರಂ ಯೋಗಮಾಸ್ಥಿತಮ್ ।
ಸಂಸಾರಸಾಗರಾದಸ್ಮಾದುದ್ಧರಾಮ್ಯಚಿರೇಣ ತು ॥ ೨೫೨ ॥

ಧ್ಯಾನೇನ ಕರ್ಮಯೋಗೇನ ಭಕ್ತ್ಯಾ ಜ್ಞಾನೇನ ಚೈವ ಹಿ ।
ಪ್ರಾಪ್ಯಾಹಂ ತೇ ಗಿರಿಶ್ರೇಷ್ಠ ನಾನ್ಯಥಾ ಕರ್ಮಕೋಟಿಭಿಃ ॥ ೨೫೩ ॥

---

೨೫೦. ತಂದೆಯೇ ! ಅನನ್ಯ ಭಕ್ತಿಯಿಂದ ನನ್ನ ಐಕ್ಯ ಭಾವನೆಯನ್ನು ಸಂತತವಾಗಿ ಆಶ್ರಯಿಸಿದವನಾಗಿ ಸಮಸ್ತ ಯಜ್ಞ-ತಪಸ್ಸು-ದಾನ ಮುಂತಾದ ಸತ್ಕರ್ಮಗಳಿಂದ ಸರ್ವ ಕಾಲದಲ್ಲಿಯೂ ಆ ರೂಪವನ್ನು ಅರ್ಚಿಸು.

೨೫೧. ನಿಷ್ಕಳಂಕನೇ ! ಆ ರೂಪವನ್ನು ಮನಸ್ಸಿನಲ್ಲಿ ಸಾಕ್ಷಾತ್ಕರಿಸು. ಆ ರೂಪವನ್ನು ಮನದಲ್ಲಿ ಧ್ಯಾನಿಸು. ಆ ರೂಪವನ್ನು ಪೂಜಿಸು. ಈ ನನ್ನ ಉಪದೇಶ ದಿಂದ ನಿನ್ನ ಸಂಸಾರದುಃಖವನ್ನು ಕಳೆಯುವೆನು.

೨೫೨. ನಾನು ಪರಮ ಭಕ್ತಿಯಿಂದ ಈಶ್ವರ ಯೋಗವನ್ನು ಅವಲಂಬಿಸಿದ ನಿನ್ನನ್ನು ಈ ಸಂಸಾರ ಸಾಗರದಿಂದ ಶೀಘ್ರವಾಗಿ ಉದ್ಧರಿಸುವೆನು.

೨೫೩. ಸರ್ವೋತ್ತಮನೇ ! ಧ್ಯಾನ-ಕರ್ಮಯೋಗ- ಭಕ್ತಿ ಮತ್ತು ಜ್ಞಾನ ಪಂಥಗಳಿಂದ ನಾನು ಲಭಿಸುವೆನು. ಬೇರೆಯ ಕೋಟಿ ಸಂಖ್ಯೆಯ ಸತ್ಕರ್ಮಗಳಿಂದಲೂ ನಾನು ಲಭ್ಯಳಾಗುವುದಿಲ್ಲ.

ಶ್ರುತಿಸ್ಮೃತ್ಯುದಿತಂ ಸಮ್ಯಕ್ಕರ್ಮ ವರ್ಣಾಶ್ರಮಾತ್ಮಕಮ್ ।
ಅಧ್ಯಾತ್ಮಜ್ಞಾನಸಹಿತಂ ಮುಕ್ತಯೇ ಸತತಂ ಕುರು ॥ ೨೫೪ ॥

ಧರ್ಮಾತ್ ಸಂಜಾಯತೇ ಭಕ್ತಿರ್ಭಕ್ತ್ಯಾ ಸಂಪ್ರಾಪ್ಯತೇ ಪರಮ್ ।
ಶ್ರುತಿಸ್ಮೃತಿಭ್ಯಾಮುದಿತೋ ಧರ್ಮೋ ಯಜ್ಞಾದಿಕೋ ಮತಃ ॥ ೨೫೫ ॥

ನಾನ್ಯತೋ ಜಾಯತೇ ಧರ್ಮೋ ವೇದಾದ್ಧರ್ಮೋ ಹಿ ನಿರ್ಬಭೌ ।
ತಸ್ಮಾನ್ಮುಮುಕ್ಷುರ್ಧರ್ಮಾರ್ಥೀ ಮದ್ರೂಪಂ ವೇದಮಾಶ್ರಯೇತ್ ॥

ಮಮೈವೈಷಾ ಪರಾ ಶಕ್ತಿರ್ವೇದಸಂಜ್ಞಾ ಪುರಾತನೀ ।
ಋಗ್ಯಜುಃಸಾಮರೂಪೇಣ ಸರ್ಗಾದೌ ಸಂಪ್ರವರ್ತತೇ ॥ ೨೫೭ ॥

ತೇಷಾಮೇವ ಚ ಗುಪ್ತ್ಯರ್ಥಂ ವೇದಾನಾಂ ಭಗವಾನಜಃ ।
ಬ್ರಾಹ್ಮಣಾದೀನ್ ಸಸರ್ಜಾಥ ಸ್ವೇ ಸ್ವೇ ಕರ್ಮಣ್ಯಯೋಜಯತ್ ॥

---

೨೫೪. ವೇದ-ಸ್ಮೃತಿಗಳಲ್ಲಿ ಪ್ರತಿಪಾದಿಸಿರುವ ವರ್ಣಾಶ್ರಮ ಧರ್ಮರೂಪವಾದ ಸತ್ಕರ್ಮವನ್ನು ಅಧ್ಯಾತ್ಮಜ್ಞಾನದಿಂದ ಕೂಡಿ ಮುಕ್ತಿಸಿದ್ಧಿಗೋಸ್ಕರ ಸಂತತವಾಗಿ ಆಶ್ರಯಿಸು.

೨೫೫. ಧರ್ಮಾನುಷ್ಠಾನದಿಂದ ಭಕ್ತಿಯು ಉಂಟಾಗುವುದು. ಭಕ್ತಿಯಿಂದ ಪರಮಪದವು ಲಭಿಸುವುದು. ಯಜ್ಞ ಮುಂತಾದ ಧರ್ಮವು ಶ್ರುತಿ ಸ್ಮೃತಿ ಪ್ರಮಾಣಗಳಲ್ಲಿ ಪ್ರತಿಪಾದಿಸಲ್ಪಟ್ಟಿದೆ.

೨೫೬. ಧರ್ಮವು ಮತ್ತೊಂದು ಪ್ರಮಾಣದಿಂದ ಹುಟ್ಟುವುದಿಲ್ಲ. ವೇದದಿಂದ ಧರ್ಮವು ಆವಿರ್ಭವಿಸಿದೆ. ಅದರಿಂದ ಮುಮುಕ್ಷುವು ಧರ್ಮವನ್ನು ಅರ್ಥಿಸುವವನಾಗಿ ನನ್ನ ರೂಪವಾದ ವೇದವನ್ನು ಸೇವಿಸಬೇಕು.

೨೫೭. ನನ್ನ ಈ ಉತ್ತಮಶಕ್ತಿಯು ಪುರಾತನವಾದ ವೇದ ಎಂಬ ಸಂಜ್ಞೆಯನ್ನು ಹೊಂದಿ ಋಗ್ವೇದ, ಯಜುರ್ವೇದ ಮತ್ತು ಸಾಮವೇದ ರೂಪದಿಂದ ಸೃಷ್ಟಿಯ ಆದಿಯಲ್ಲಿ ಪ್ರವರ್ತಿಸುತ್ತದೆ.

೨೫೮. ಆ ವೇದವಾಙ್ಮಯವನ್ನು ರಕ್ಷಿಸಲೋಸ್ಕರ ಷಡ್ಗುಣೈಶ್ವರ್ಯ ಪೂರ್ಣನಾದ ಬ್ರಹ್ಮದೇವನು ಬ್ರಾಹ್ಮಣಾದಿ ವರ್ಣಗಳನ್ನು ಸೃಜಿಸಿ ಅವರನ್ನು ಆಯಾಯ ವರ್ಣಧರ್ಮಗಳಲ್ಲಿ ನಿಯಮಿಸಿದನು.

ಯೇ ನ ಕುರ್ವಂತಿ ಮದ್ಧರ್ಮಂ ತದರ್ಥಂ ಬ್ರಹ್ಮನಿರ್ಮಿತಾಃ ।
ತೇಷಾಮಧಸ್ತಾನ್ನರಕಾಂಸ್ತಾಮಿಸ್ರಾದೀನಕಲ್ಪಯತ್ ॥ ೨೫೯ ॥

ನ ಚ ವೇದಾದೃತೇ ಕಿಂಚಿಚ್ಛಾಸ್ತ್ರಂ ಧರ್ಮಾಭಿಧಾಯಕಮ್ ।
ಯೋಽನ್ಯತ್ರ ರಮತೇ ಸೋಽಸೌ ನ ಸಂಭಾಷ್ಯೋ ದ್ವಿಜಾತಿಭಿಃ ॥೨೬೦॥

ಯಾನಿ ಶಾಸ್ತ್ರಾಣಿ ದೃಶ್ಯಂತೇ ಲೋಕೇಽಸ್ಮಿನ್ ವಿವಿಧಾನಿ ತು ।
ಶ್ರುತಿಸ್ಮೃತಿವಿರುದ್ಧಾನಿ ನಿಷ್ಠಾ ತೇಷಾಂ ಹಿ ತಾಮಸೀ ॥ ೨೬೧ ॥

ಕಾಪಾಲಂ ಭೈರವಂ ಚೈವ ಯಾಮಲಂ ವಾಮಮಾರ್ಹತಮ್ ।
ಏವಂವಿಧಾನಿ ಚಾನ್ಯಾನಿ ಮೋಹನಾರ್ಥಾನಿ ತಾನಿ ತು ॥ ೨೬೨ ॥

---

೨೫೯. ಬ್ರಹ್ಮನಿಂದ ನಿರ್ಮಿಸಲ್ಪಟ್ಟ ಪ್ರಜೆಗಳು ವೇದರಕ್ಷಣೆಗೋಸ್ಕರ ವೇದೋಕ್ತ ಧರ್ಮವನ್ನು ಮಾಡದಿದ್ದರೆ ಅವರಿಗೋಸ್ಕರ ತಾಮಿಸ್ರ ಮುಂತಾದ ಯಾತನಾಸ್ಥಾನಗಳನ್ನು ಕೆಳಭಾಗದಲ್ಲಿ ಕಲ್ಪಿಸಿರುವನು.

೨೬೦. ಧರ್ಮವನ್ನು ಉಪದೇಶಿಸುವ ಶಾಸ್ತ್ರವು ವೇದದ ಹೊರತು ಮತ್ತೊಂದು ಇಲ್ಲ. ವೇದದ ಹೊರತು ಮತ್ತೊಂದು ಶಾಸ್ತ್ರದಲ್ಲಿ ರಮಿಸುವ ಮಾನವನು ದ್ವಿಜರೊಡನೆ ವ್ಯವಹಾರಕ್ಕೆ ಯೋಗ್ಯನಲ್ಲ.

೨೬೧. ಈ ಲೋಕದಲ್ಲಿ ಶ್ರುತಿ ಸ್ಮೃತಿಗಳಿಗೆ ವಿರುದ್ಧಾರ್ಥವನ್ನು ಬೋಧಿಸುವ ಯಾವ ವಿವಿಧಶಾಸ್ತ್ರಗಳು ಪ್ರಸಿದ್ಧವಾಗಿವೆಯೋ ಆ ಶಾಸ್ತ್ರಗಳ ನಿಷ್ಠೆಯು ತಮೋಗುಣವನ್ನು ಅವಲಂಬಿಸಿರುವುದು.

೨೬೨. ಕಾಪಾಲ-ಭೈರವ-ಯಾಮಲ-ವಾಮ ಮತ್ತು ಆರ್ಹತ ಎಂಬ ಈ ಬಗೆಯ ವೇದವಿರುದ್ಧವಾದ ಅನೇಕ ದರ್ಶನಗಳು ಮೋಹವನ್ನುಂಟುಮಾಡುವ ಅರ್ಥವನ್ನು ಪ್ರತಿಪಾದಿಸುತ್ತಿವೆ.

ಯೇ ಕುಶಾಸ್ತ್ರಾಭಿಯೋಗೇನ ಮೋಹಯಂತೀಹ ಮಾನವಾನ್ ।
ಮಯಾ ಸೃಷ್ಟಾನಿ ಶಾಸ್ತ್ರಾಣಿ ಮೋಹಾಯೈಷಾಂ ಭವಾಂತರೇ ॥ ೨೬೩ ॥

ವೇದಾರ್ಥವಿತ್ತಮೈಃ ಕಾರ್ಯಂ ಯತ್ಸ್ಮೃತಂ ಕರ್ಮ ವೈದಿಕಮ್ ।
ತತ್ಪ್ರಯತ್ನೇನ ಕುರ್ವಂತಿ ಮತ್ಪ್ರಿಯಾಸ್ತೇ ಹಿ ಯೇ ನರಾಃ ॥ ೨೬೪ ॥

ವರ್ಣಾನಾಮನುಕಂಪಾರ್ಥಂ ಮನ್ನಿಯೋಗಾದ್ವಿರಾಟ್ ಸ್ವಯಮ್ ।
ಸ್ವಾಯಂಭುವೋ ಮನುರ್ಧರ್ಮಾನ್ ಮುನೀನಾಂ ಪೂರ್ವಮುಕ್ತ-
[ ವಾನ್ ॥ ೨೬೫ ॥

ಶ್ರುತ್ವಾ ಚಾನ್ಯೇಽಪಿ ಮುನಯಸ್ತನ್ಮುಖಾದ್ಧರ್ಮಮುತ್ತಮಮ್ ।
ಚಕ್ರುರ್ಧರ್ಮಪ್ರತಿಷ್ಠಾರ್ಥಂ ಧರ್ಮಶಾಸ್ತ್ರಾಣಿ ಚೈವ ಹಿ ॥ ೨೬೬ ॥

---

೨೬೩. ಯಾರು ಆ ದುಷ್ಟಶಾಸ್ತ್ರಗಳಲ್ಲಿರುವ ಆಗ್ರಹದಿಂದ ಮಾನವರನ್ನು ಮೋಹಗೊಳಿಸುವರೋ ಅವರಿಗೆ ಮುಂದಿನ ಜನ್ಮಗಳಲ್ಲಿಯೂ ಮೋಹವನ್ನುಂಟು ಮಾಡಲು ಆ ಶಾಸ್ತ್ರಗಳು ನನ್ನಿಂದ ರಚಿಸಲ್ಪಟ್ಟಿವೆ.

೨೬೪. ಅತಿಶಯವಾದ ವೇದಾರ್ಥಜ್ಞಾನವುಳ್ಳವರಿಂದ ಯಾವ ವೈದಿಕ ಕರ್ಮವು ಕರ್ತವ್ಯವೆಂದು ಸ್ಮರಿಸಲ್ಪಟ್ಟಿರುವುದೋ ಆ ಕರ್ಮವನ್ನು ಪ್ರಯತ್ನದಿಂದ ಆಚರಿಸುವ ಮಾನವರು ನನಗೆ ಪ್ರಿಯರಾಗಿರುವರು.

೨೬೫. ಆದಿಯಲ್ಲಿ ಸ್ವಯಂಭು ಪುತ್ರನೂ, ವಿರಾಟ್‌ಪುರುಷರೂಪನೂ ಆದ ಮನುರಾಜನು ನನ್ನ ನಿಯೋಗದಂತೆ ಚಾತುರ್ವರ್ಣ್ಯದಲ್ಲಿ ಅನುಗ್ರಹ ತೋರಿಸಲು ಮುನಿಗಳಿಗೆ ಧರ್ಮಮಾರ್ಗವನ್ನು ಉಪದೇಶಿಸಿದನು.

೨೬೬. ಇತರ ಮುನಿಗಳು ಆ ಮನುರಾಜನ ಮುಖದಿಂದ ಉತ್ತಮವಾದ ಧಾರ್ಮಿಕಪದ್ಧತಿಯನ್ನು ಶ್ರವಣಮಾಡಿ ಆ ಧರ್ಮಪ್ರತಿಷ್ಠೆಗೋಸ್ಕರ ಅನೇಕ ಧರ್ಮ ಶಾಸ್ತ್ರಗಳನ್ನು ರಚಿಸಿದರು.

ತೇಷು ಚಾಂತರ್ಹಿತೇಷ್ವೇವಂ ಯುಗಾಂತೇಷು ಮಹರ್ಷಯಃ ।
ಬ್ರಹ್ಮಣೋ ವಚನಾತ್ತಾನಿ ಕರಿಷ್ಯಂತಿ ಯುಗೇ ಯುಗೇ ॥ ೨೬೭ ॥

ಅಷ್ಟಾದಶ ಪುರಾಣಾನಿ ವ್ಯಾಸಾದ್ಯೈಃ ಕಥಿತಾನಿ ತು ।
ನಿಯೋಗಾದ್ಬ್ರಹ್ಮಣೋ ರಾಜಂಸ್ತೇಷು ಧರ್ಮಃ ಪ್ರತಿಷ್ಠಿತಃ ॥೨೬೮॥

ಅನ್ಯಾನ್ಯುಪಪುರಾಣಾನಿ ತಚ್ಛಿಷ್ಯೈಃ ಕಥಿತಾನಿ ತು ।
ಯುಗೇ ಯುಗೇಽತ್ರ ಸರ್ವೇಷಾಂ ಕರ್ತಾ ವೈ ಧರ್ಮಶಾಸ್ತ್ರವಿತ್ ॥

ಶಿಕ್ಷಾ ಕಲ್ಪೋ ವ್ಯಾಕರಣಂ ನಿರುಕ್ತಂ ಛಂದ ಏವ ಚ ।
ಜ್ಯೋತಿಃ ಶಾಸ್ತ್ರಂ ನ್ಯಾಯವಿದ್ಯಾ ಸರ್ವೇಷಾಮುಪಬೃಂಹಣಮ್ ॥

---

೨೬೭. ಕಲ್ಪಾಂತಕಾಲದಲ್ಲಿ ಆ ಧರ್ಮಶಾಸ್ತ್ರಗಳು ಅಡಗಿಹೋಗಲು ಮಹರ್ಷಿಗಳು ಬ್ರಹ್ಮನ ಆಜ್ಞಾವಚನದಂತೆ ಪ್ರತಿಯೊಂದು ಯುಗದಲ್ಲಿಯೂ ಆ ಧರ್ಮಶಾಸ್ತ್ರಗಳನ್ನು ನಿರ್ಮಿಸುತ್ತಾರೆ.

೨೬೮. ರಾಜನೇ! ಬ್ರಹ್ಮದೇವನ ಆಜ್ಞಾವಶದಿಂದ ವ್ಯಾಸ ಮುಂತಾದ ಮಹರ್ಷಿಗಳಿಂದ ಹದಿನೆಂಟು ಪುರಾಣಗಳು ಉಪದೇಶಿಸಲ್ಪಟ್ಟಿವೆ. ಅವುಗಳಲ್ಲಿ ಧರ್ಮವು ನೆಲೆಸಿರುವುದು.

೨೬೯. ಆ ವ್ಯಾಸಶಿಷ್ಯರಿಂದ ಇತರ ಉಪಪುರಾಣಗಳು ರಚಿಸಲ್ಪಟ್ಟಿವೆ. ಹೀಗೆ ನಡೆಯುತ್ತಿರುವ ಪ್ರತಿಯೊಂದು ಯುಗದಲ್ಲಿಯೂ ಧರ್ಮಶಾಸ್ತ್ರಜ್ಞನು ಧರ್ಮಶಾಸ್ತ್ರಗಳನ್ನು ಮಾಡಿಡುವನು.

೨೭೦. ಶಿಕ್ಷಾ-ವ್ಯಾಕರಣ-ನಿರುಕ್ತ-ಛಂದಸ್ಸು ಮತ್ತು ಜ್ಯೋತಿಶ್ಶಾಸ್ತ್ರವೆಂಬ ಆರು ವೇದಾಂಗಗಳೂ ನ್ಯಾಯಶಾಸ್ತ್ರವೂ ಸಮಸ್ತ ಧರ್ಮ ಶಾಸ್ತ್ರಾರ್ಥಗಳನ್ನು ವಿವರಿಸುವ ಸಾಧನಗಳು.

ಏವಂ ಚತುರ್ದಶೈತಾನಿ ತಥಾ ಹಿ ದ್ವಿಜಸತ್ತಮಾಃ ।
ಚತುರ್ವೇದೈಃ ಸಹೋಕ್ತಾನಿ ಧರ್ಮೋ ನಾನ್ಯತ್ರ ವಿದ್ಯತೇ ॥ ೨೭೧ ॥

ಏವಂ ಪೈತಾಮಹಂ ಧರ್ಮಂ ಮನುವ್ಯಾಸಾದಯಃ ಪರಮ್ ।
ಸ್ಥಾಪಯಂತಿ ಮಮಾದೇಶಾದ್ಯಾವದಾಭೂತಸಂಪ್ಲವಮ್ ॥ ೨೭೨ ॥

ಬ್ರಹ್ಮಣಾ ಸಹ ತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ ।
ಪರಸ್ಯಾಂತೇ ಕೃತಾತ್ಮಾನಃ ಪ್ರವಿಶಂತಿ ಪರಂ ಪದಮ್ ॥ ೨೭೩ ॥

ತಸ್ಮಾತ್ಸರ್ವಪ್ರಯತ್ನೇನ ಧರ್ಮಾರ್ಥಂ ವೇದಮಾಶ್ರಯೇತ್ ।
ಧರ್ಮೇಣ ಸಹಿತಂ ಜ್ಞಾನಂ ಪರಂ ಬ್ರಹ್ಮ ಪ್ರಕಾಶಯೇತ್ ॥ ೨೭೪ ॥

---

೨೭೧. ದ್ವಿಜಶ್ರೇಷ್ಠರೇ ! ನಾಲ್ಕು ವೇದಗಳೊಡನೆ ಹಿಂದೆ ಹೇಳಿದ ವೇದಾಂಗ ಮುಂತಾದ ಹದಿನಾಲ್ಕು ವಿದ್ಯಾಸ್ಥಾನಗಳು ಪ್ರತಿಪಾದಿಸಲ್ಪಟ್ಟಿರುವುವು. ಇವುಗಳನ್ನು ಬಿಟ್ಟು ಬೇರೊಂದು ಕಡೆ ಧರ್ಮವು ಇರುವುದಿಲ್ಲ.

೨೭೨. ಹೀಗೆ ಮನು-ವ್ಯಾಸ ಮುಂತಾದ ಮಹನೀಯರು ಬ್ರಹ್ಮದೇವನಿಂದ ನಿರ್ಮಿಸಲ್ಪಟ್ಟ ಈ ದೇಹವನ್ನು ನನ್ನ ಆದೇಶದಂತೆ ಕಲ್ಪಾಂತಕಾಲದವರೆಗೂ ಸ್ಥಾಪಿಸುವರು.

೨೭೩. ಹೀಗೆ ಕಲ್ಪಾಂತಕಾಲವು ಸಂಭವಿಸಲು ಆ ಮಹನೀಯರೆಲ್ಲರೂ ಆ ಬ್ರಹ್ಮದೇವನ ಅವಸಾನಕಾಲದಲ್ಲಿ ಚಿತ್ತಶುದ್ಧಿಯುಳ್ಳವರಾಗಿ ಬ್ರಹ್ಮದೇವನೊಡನೆ ಪರಮಪದವನ್ನು ಪ್ರವೇಶಿಸುತ್ತಾರೆ.

೨೭೪. ಆದ್ದರಿಂದ ಸರ್ವಪ್ರಯತ್ನಗಳಿಂದಲೂ ಧರ್ಮಾರ್ಜನೆಗೋಸ್ಕರ ವೇದಾಭ್ಯಾಸವನ್ನು ಮಾಡಬೇಕು. ಧರ್ಮದಿಂದ ಕೂಡಿರುವ ತತ್ತ್ವಜ್ಞಾನಿಯು ಪರಬ್ರಹ್ಮವಸ್ತುವನ್ನು ಪ್ರಕಾಶಪಡಿಸುವನು.

ಯೇ ತು ಸಂಗಾನ್ ಪರಿತ್ಯಜ್ಯ ಮಾಮೇವ ಶರಣಂ ಗತಾಃ ।
ಉಪಾಸತೇ ಸದಾ ಭಕ್ತ್ಯಾ ಯೋಗಮೈಶ್ವರಮಾಸ್ಥಿತಾಃ ॥ ೨೭೫ ॥

ಸರ್ವಭೂತದಯಾವಂತಃ ಶಾಂತಾ ದಾಂತಾ ವಿಮತ್ಸರಾಃ ।
ಅಮಾನಿನೋ ಬುದ್ಧಿಮಂತಸ್ತಾಪಸಾಃ ಸಂಶಿತವ್ರತಾಃ ॥ ೨೭೬ ॥

ಮಚ್ಚಿತ್ತಾ ಮದ್ಗತಪ್ರಾಣಾ ಮಜ್ಜ್ಞಾನಕಥನೇ ರತಾಃ ।
ಸನ್ನ್ಯಾಸಿನೋ ಗೃಹಸ್ಥಾಶ್ಚ ವನಸ್ಥಾ ಬ್ರಹ್ಮಚಾರಿಣಃ ॥ ೨೭೭ ॥

ತೇಷಾಂ ನಿತ್ಯಾಭಿಯುಕ್ತಾನಾಂ ಮಾಯಾತತ್ತ್ವಂ ಸಮುತ್ಥಿತಮ್ ।
ನಾಶಯಾಮಿ ಜಗತ್ ಕೃತ್ಸ್ನಂ ಜ್ಞಾನದೀಪೇನ ನೋ ಚಿರಾತ್ ॥೨೭೮॥

---

೨೭೫. ಕೆಲವರು ಸರ್ವಸಂಗಗಳನ್ನು ಪರಿತ್ಯಜಿಸಿ ಈಶ್ವರಪ್ರಾಪ್ತಿಗೆ ಯೋಗಾಭ್ಯಾಸ ತತ್ಪರರಾಗಿ ನನ್ನನ್ನು ಶರಣಹೊಂದಿ ಭಕ್ತಿಪಂಥದಿಂದ ನನ್ನನ್ನು ಸರ್ವಕಾಲದಲ್ಲಿಯೂ ಸೇವಿಸುತ್ತಾರೆ.

೨೭೬. ಆ ತಪಸ್ವಿಗಳು ಸಮಸ್ತ ಪ್ರಾಣಿಗಳಲ್ಲಿ ದಯಾವಂತರೂ, ಶಾಂತರೂ, ಜಿತೇಂದ್ರಿಯರೂ, ಮಾತ್ಸರ್ಯಶೂನ್ಯರೂ, ಅಹಂಕಾರವರ್ಜಿತರೂ, ವಿವೇಕವಂತರೂ ಮತ್ತು ಪಶಸ್ತವ್ರತಾವಲಂಬಿಗಳೂ ಆಗಿರುವರು.

೨೭೭. ಸನ್ಯಾಸಿ, ಗೃಹಸ್ಥ, ವಾನಪ್ರಸ್ಥ, ಅಥವಾ ಬ್ರಹ್ಮಚಾರಿಗಳಾಗಿರುವ ಆ ತಪಸ್ವಿಗಳು ನನ್ನಲ್ಲಿ ಇಟ್ಟ ಮಾನಸವುಳ್ಳವರೂ, ನನ್ನನ್ನು ಅವಲಂಬಿಸಿದ ಪ್ರಾಣಧಾರಣವುಳ್ಳವರೂ ಮತ್ತು ನನ್ನ ತತ್ತ್ವಜ್ಞಾನೋಪದೇಶದಲ್ಲಿ ನಿರತರೂ ಆಗಿರುವರು.

೨೭೮. ಸಂತತವಾದ ಉಪಾಸನಾಗ್ರಹವುಳ್ಳ ಆ ತಪಸ್ವಿಗಳಿಗೆ ಪ್ರಾಪ್ತವಾದ ಪೂರ್ಣಾಂಧಕಾರರೂಪವಾದ ಮಾಯಾತತ್ತ್ವವನ್ನು ಅತಿ ಶೀಘ್ರವಾಗಿ ತತ್ತ್ವಜ್ಞಾನದಿಂದ ಹೋಗಲಾಡಿಸುವೆನು.

ತೇ ಸುನಿರ್ಧೂತತಮಸೋ ಜ್ಞಾನೇನೈಕೇನ ಮಮ್ಮಯಾಃ ।
ಸದಾನಂದಾಸ್ತು ಸಂಸಾರೇ ನ ಜಾಯಂತೇ ಪುನಃ ಪುನಃ ॥ ೨೭೯ ॥

ತಸ್ಮಾತ್ ಸರ್ವಪ್ರಕಾರೇಣ ಮದ್ಭಕ್ತೋ ಮತ್ಪರಾಯಣಃ ।
ಮಾಮೇವಾರ್ಚಯ ಸರ್ವತ್ರ ಮನಸಾ ಶರಣಂ ಗತಃ ॥ ೨೮೦ ॥

ಅಶಕ್ತೋ ಯದಿ ಮೇ ಧ್ಯಾತುಮೈಶ್ವರಂ ರೂಪಮವ್ಯಯಮ್ ।
ತತೋ ಮೇ ಪರಮಂ ರೂಪಂ ಕಾಲಾದ್ಯಂ ಶರಣಂ ವ್ರಜ ॥ ೨೮೧ ॥

ತದ್ಯತ್ಸ್ವರೂಪಂ ಮೇ ತಾತ ಮನಸೋ ಗೋಚರಂ ತವ ।
ತನ್ನಿಷ್ಠಸ್ತತ್ಪರೋ ಭೂತ್ವಾ ತದರ್ಚನಪರೋ ಭವ ॥ ೨೮೨ ॥

---

೨೭೯. ಅವರು ಒಂದೇ ಆದ ಜ್ಞಾನಮಾರ್ಗದಿಂದ ದೂರ ಓಡಿಸಿದ ತಮಸ್ಸು ಉಳ್ಳವರೂ, ನನ್ನ ಭಾವನೆಯಿಂದ ಪೂರ್ಣರೂ, ಆಗಿ ನಿತ್ಯಾನಂದಾನುಭವಿಗಳಾಗಿ ಮತ್ತೆ ಮತ್ತೆ ಸಂಸಾರದಲ್ಲಿ ಜನ್ಮವನ್ನು ಹೊಂದುವುದಿಲ್ಲ.

೨೮೦. ಆದ್ದರಿಂದ ನೀನು ನನ್ನಲ್ಲಿ ಭಕ್ತನೂ, ನನ್ನಲ್ಲಿ ಆಸಕ್ತನೂ ಆಗಿ ಸರ್ವದೇಶ- ಕಾಲಗಳಲ್ಲಿಯೂ ಮನಸ್ಸಿನಲ್ಲಿ ನನ್ನನ್ನು ಶರಣಹೊಂದಿ ಸರ್ವ ಪ್ರಕಾರ ಗಳಿಂದಲೂ ನನ್ನನ್ನು ಅರ್ಚಿಸು.

೨೮೧. ನೀನು ಈಶ್ವರಾತ್ಮಕವಾದ ನನ್ನ ಪರಮಾರ್ಥರೂಪವನ್ನು ಧ್ಯಾನ ಮಾಡಲು ಅಶಕ್ತನಾಗಿದ್ದರೆ ಆಗ ನನ್ನ ಕಾಲ ಮುಂತಾದ ಉತ್ತಮವಾದ ಸಗುಣ ರೂಪವನ್ನು ಶರಣುಹೊಂದು.

೨೮೨. ಜನಕನೇ! ನನ್ನ ಯಾವ ಯಾವ ರೂಪವು ನಿನ್ನ ಮಾನಸಕ್ಕೆ ಗೋಚರವಾಗುವುದೋ, ಆ ರೂಪದಲ್ಲಿ ನಿಷ್ಠಾವಂತನೂ, ತತ್ಪರನೂ ಆಗಿ ಅದನ್ನು ಪೂಜಿಸುವುದರಲ್ಲಿ ಆಸಕ್ತಿಯನ್ನು ಹೊಂದು.

ಯತ್ತು ಮೇ ನಿಷ್ಕಲಂ ರೂಪಂ ಚಿನ್ಮಾತ್ರಂ ಕೇವಲಂ ಶಿವಮ್ ।
ಸರ್ವೋಪಾಧಿವಿನಿರ್ಮುಕ್ತಮನಂತಮಮೃತಂ ಪರಮ್ ॥ ೨೮೩ ॥

ಜ್ಞಾನೇನೈಕೇನ ತಲ್ಲಭ್ಯಂ ಕ್ಲೇಶೇನ ಪರಮಂ ಪದಮ್ ।
ಜ್ಞಾನಮೇವ ಪ್ರಪಶ್ಯಂತೋ ಮಾಮೇವ ಪ್ರವಿಶಂತಿ ತೇ ॥ ೨೮೪ ॥

ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।
ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥ ೨೮೫ ॥

ಮಾಮನಾಶ್ರಿತ್ಯ ಪರಮಂ ನಿರ್ವಾಣಮಮಲಂ ಪದಮ್ ।
ಪ್ರಾಪ್ಯತೇ ನ ಹಿ ರಾಜೇಂದ್ರ ತತೋ ಮಾಂ ಶರಣಂ ವ್ರಜ ॥ ೨೮೬ ॥

---

೨೮೩. ಚೈತನ್ಯಮಾತ್ರವೂ, ಅದ್ವಿತೀಯವೂ, ಮಂಗಳಕರವೂ, ಸಮಸ್ತ ಅವಯವಗಳಿಂದ ವರ್ಜಿತವೂ, ಮಂಗಳಕರವೂ, ಸಮಸ್ತ ಉಪಾಧಿಗಳಿಂದ ವರ್ಜಿತವೂ, ಅಂತಶೂನ್ಯವೂ, ಅಮೃತವೂ ಮತ್ತು ಸರ್ವೋತ್ತಮವೂ ಆದ ನನ್ನ ನಿಷ್ಕಳ ರೂಪವು ಪಾರಮಾರ್ಥಿಕವಾದುದು.

೨೮೪. ಪರಮಪದರೂಪವಾದ ಆ ನಿಷ್ಕಳರೂಪವು ಕ್ಲೇಶಸಾಧ್ಯವಾದ ಜ್ಞಾನ ಮಾರ್ಗದಿಂದ ಮಾತ್ರ ಲಭ್ಯವಾಗಿರುವುದು. ಜ್ಞಾನವನ್ನೇ ಉತ್ತಮಸೋಪಾನ ವನ್ನಾಗಿ ಅರಿತಿರುವವರು ನನ್ನಲ್ಲಿ ಐಕ್ಯಹೊಂದುವರು.

೨೮೫. ಆ ಪರವಸ್ತುವಿನಲ್ಲಿ ಬುದ್ಧಿವೃತ್ತಿಯುಳ್ಳವರೂ ತದೈಕ್ಯಾಭಿಮಾನಿ ಗಳೂ ತನ್ನಿಷ್ಠರೂ, ತದಾಸಕ್ತರೂ ಆದ ಯೋಗಿಗಳು ಜ್ಞಾನದಿಂದ ಕಳೆದುಕೊಂಡ ಪಾಪಸಂಗವುಳ್ಳವರಾಗಿ ಪುನರಾವೃತ್ತಿಯಿಲ್ಲದ ಮುಕ್ತಿಯನ್ನು ಹೊಂದುತ್ತಾರೆ.

೨೮೬. ರಾಜೋತ್ತಮನೇ ! ನನ್ನನ್ನು ಆಶ್ರಯಿಸದೇ ಸರ್ವೋತ್ತಮವಾದ ಮೋಕ್ಷವೆಂಬ ಆ ಪರಮ ಪದವಿಯು ಲಭಿಸಲಾರದು. ಆದುದರಿಂದ ನೀನು ನನ್ನನ್ನು ಶರಣುಹೊಂದು.

ಏಕತ್ವೇನ ಪೃಥಕ್ತ್ವೇನ ತಥಾ ಚೋಭಯಥಾಪಿ ವಾ ।
ಮಾಮುಪಾಸ್ಯ ಮಹೀಪಾಲ ತತೋ ಯಾಸ್ಯಸಿ ತತ್ಪದಮ್ ॥ ೨೮೭ ॥

ಮಾಮನಾಶ್ರಿತ್ಯ ತತ್ತತ್ತ್ವಂ ಸ್ವಭಾವವಿಮಲಂ ಶಿವಮ್ ।
ಜ್ಞಾಯತೇ ನ ಹಿ ರಾಜೇಂದ್ರ ತತೋ ಮಾಂ ಶರಣಂ ವ್ರಜ ॥ ೨೮೮ ॥

ತಸ್ಮಾತ್ತ್ವಮಕ್ಷರಂ ರೂಪಂ ನಿತ್ಯಂ ವಾ ರೂಪಮೈಶ್ವರಮ್ ।
ಆರಾಧಯ ಪ್ರಯತ್ನೇನ ತತೋಽಂಧತ್ವಂ ಪ್ರಹಾಸ್ಯಸಿ ॥ ೨೮೯ ॥

ಕರ್ಮಣಾ ಮನಸಾ ವಾಚಾ ಶಿವಂ ಸರ್ವತ್ರ ಸರ್ವದಾ ।
ಸಮಾರಾಧಯ ಭಾವೇನ ತತೋ ಯಾಸ್ಯಸಿ ತತ್ಪದಮ್ ॥ ೨೯೦ ॥

---

೨೮೭. ರಾಜಾಧಿರಾಜನೇ ! ಐಕ್ಯರೂಪದಿಂದ ಅಥವಾ ಭಿನ್ನರೂಪಗಳಿಂದ ಅಥವಾ ಉಭಯರೂಪಗಳಿಂದ ನನ್ನನ್ನು ಸೇವಿಸಿ ತನ್ಮೂಲಕವಾಗಿ ಆ ಪರಮ ಪದವನ್ನು ಹೊಂದುತ್ತೀ.

೨೮೮. ರಾಜೇಂದ್ರನೇ ! ಸ್ವಾಭಾವಿಕವಾಗಿ ನಿರ್ಮಲವೂ, ಮಂಗಳಕರವೂ ಆದ ಆ ಪರಮಾರ್ಥ ತತ್ತ್ವವು ನನ್ನನ್ನು ಆಶ್ರಯಿಸದೆ ತಿಳಿಯುವುದಿಲ್ಲ. ಆದುದರಿಂದ ನನ್ನನ್ನು ಶರಣನನ್ನಾಗಿ ಭಜಿಸು.

೨೮೯. ಆದ್ದರಿಂದ ನೀನು ಶಾಶ್ವತವಾದ ಅಕ್ಷರ ರೂಪವನ್ನಾಗಲೀ, ನಿತ್ಯವಾದ ಈಶ್ವರರೂಪವನ್ನಾಗಲೀ, ಪ್ರಯತ್ನದಿಂದ ಆರಾಧಿಸು. ಅದರಿಂದ ನಿನ್ನ ಅಂಧತ್ವವನ್ನು ಕಳೆದುಕೊಳ್ಳುತ್ತೀ.

೨೯೦. ಕ್ರಿಯೆಯಿಂದಲೂ, ಮಾನದಿಂದಲೂ, ವಾಗಿಂದ್ರಿಯದಿಂದಲೂ, ಸರ್ವದೇಶ ಸರ್ವಕಾಲಗಳಲ್ಲಿ ಪರಮ ಶಿವನನ್ನು ಭಾವನಾ ಪೂರ್ವಕವಾಗಿ ಆರಾಧಿಸು. ಅದರಿಂದ ಶಾಶ್ವತ ಪದವನ್ನು ಹೊಂದುತ್ತೀ.

ನ ವೈ ಯಾಸ್ಯಂತಿ ತಂ ದೇವಂ ಮೋಹಿತಾ ಮಮ ಮಾಯಯಾ ।
ಅನಾದ್ಯನಂತಂ ಪರಮಂ ಮಹೇಶ್ವರಮಜಂ ಶಿವಮ್ ॥ ೨೯೧ ॥

ಸರ್ವಭೂತಾತ್ಮಭೂತಸ್ಥಂ ಸರ್ವಾಧಾರಂ ನಿರಂಜನಮ್ ।
ನಿತ್ಯಾನಂದಂ ನಿರಾಭಾಸಂ ನಿರ್ಗುಣಂ ತಮಸಃ ಪರಮ್ ॥ ೨೯೨ ॥

ಅದ್ವೈತಮಚಲಂ ಬ್ರಹ್ಮ ನಿಷ್ಕಲಂ ನಿಷ್ಪ್ರಪಂಚಕಮ್ ।
ಸ್ವಸಂವೇದ್ಯ ಮವೇದ್ಯಂ ತತ್ಪರೇ ವ್ಯೋಮ್ನಿ ವ್ಯವಸ್ಥಿತಮ್ ॥ ೨೯೩ ॥

ಸೂಕ್ಷ್ಮೇಣ ತಮಸಾ ನಿತ್ಯಂ ವೇಷ್ಟಿತಾ ಮಮ ಮಾಯಯಾ ।
ಸಂಸಾರಸಾಗರೇ ಘೋರೇ ಜಾಯಂತೇ ಚ ಪುನಃ ಪುನಃ ॥ ೨೯೪ ॥

---

೨೯೧. ಅನಾದಿಯೂ, ಅನಂತವೂ, ಸರ್ವೋತ್ತಮವೂ, ಸರ್ವನಿಯಾಮಕವೂ, ಜನ್ಮರಹಿತವೂ, ಮಂಗಳಕರವೂ, ಆದ ಸ್ವರೂಪದಿಂದ ಕೂಡಿದ ಆ ಪರಮಾತ್ಮನನ್ನು ನನ್ನ ಮಾಯೆಯಿಂದ ಮೋಹಿತರಾದ ಮಾನವರು ತಿಳಿಯುವುದಿಲ್ಲ.

೨೯೨. ಸರ್ವಪ್ರಾಣಿಗಳಿಗೆ ಆತ್ಮಸ್ವರೂಪವಾಗಿರುವ, ಸರ್ವವಸ್ತುಗಳಿಗೆ ಆಧಾರವಾದ, ನಿರ್ದೋಷವಾದ, ನಿತ್ಯಾನಂದಮಯವಾದ, ಆಭಾಸಶೂನ್ಯವಾದ, ಗುಣಾತೀತವಾದ ಮತ್ತು ತಮಸ್ಸನ್ನು ಮೀರಿಸಿದ ಆ ರೂಪವು ಮಾಯೆಯಿಂದ ಅದೃಶ್ಯವಾಗಿರುವುದು.

೨೯೩. ಅದ್ವಿತೀಯವೂ, ಚಲನಶೂನ್ಯವೂ, ಪರಿಪೂರ್ಣವೂ, ನಿರವಯವವೂ ಪ್ರಪಂಚಶೂನ್ಯವೂ, ಸ್ವಾನುಭವ ವೇದ್ಯವೂ ಜ್ಞಾನ ಅಗೋಚರವೂ, ಆದ ಆ ಪರರೂಪವು ಪರಮಾಕಾಶದಲ್ಲಿ ಪ್ರತಿಷ್ಠಿತವಾಗಿರುವುದು.

೨೯೪. ಅತಿ ಸೂಕ್ಷ್ಮವಾದ ತಮಸ್ಸಿನ ರೂಪವಾದ ನನ್ನ ಮಾಯೆಯಿಂದ ಆವರಿಸಲ್ಪಟ್ಟ ಮಾನವರು ಘೋರವಾದ ಸಂಸಾರ ಸಮುದ್ರದಲ್ಲಿ ಮತ್ತೆ ಮತ್ತೆ ಜನ್ಮವೆತ್ತುವರು.

ಭಕ್ತ್ಯಾ ತ್ವನನ್ಯಯಾ ರಾಜನ್ ಸಮ್ಯಙ್ಜ್ಞಾನೇನ ಚೈವ ಹಿ ।
ಅನ್ವೇಷ್ಟವ್ಯಂ ಹಿ ತದ್ಬ್ರಹ್ಮ ಜನ್ಮಬಂಧನಿವೃತ್ತಯೇ ॥ ೨೯೫ ॥

ಅಹಂಕಾರಂ ಚ ಮಾತ್ಸರ್ಯಂ ಕಾಮಂ ಕ್ರೋಧಪರಿಗ್ರಹಮ್ ।
ಅಧರ್ಮಾಭಿನಿವೇಶಂ ಚ ತ್ಯಕ್ತ್ವಾ ವೈರಾಗ್ಯಮಾಸ್ಥಿತಮ್ ॥ ೨೯೬ ॥

ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಅವೇಕ್ಷ್ಯ ಚಾತ್ಮನಾತ್ಮಾನಂ ಬ್ರಹ್ಮಭೂಯಾಯ ಕಲ್ಪತೇ ॥ ೨೯೭ ॥

ಬ್ರಹ್ಮಭೂತಃ ಪ್ರಸನ್ನಾತ್ಮಾ ಸರ್ವಭೂತಾಭಯಪ್ರದಃ ।
ಐಶ್ವರ್ಯಂ ಪರಮಾಂ ಭಕ್ತಿಂ ವಿಂದೇತಾನನ್ಯಭಾವಿನೀಮ್ ॥ ೨೯೮ ॥

---

೨೯೫. ಭೂಪತಿಯೇ ! ಅನನ್ಯಭಕ್ತಿಮಾರ್ಗದಿಂದಲೂ, ಪರಮಾತ್ಮ ತತ್ತ್ವ ಜ್ಞಾನದಿಂದಲೂ, ಜನ್ಮ-ಮರಣಗಳೆಂಬ ಬಂಧವನ್ನು ಕಳೆದುಕೊಳ್ಳಲು ಆ ಬ್ರಹ್ಮ ವಸ್ತುವು ಹುಡುಕಲ್ಪಡಬೇಕು.

೨೯೬. ಅಹಂಕಾರವನ್ನೂ, ಅಸೂಯೆಯನ್ನೂ, ಕಾಮಾವೇಶವನ್ನೂ ಕ್ರೋಧಸಂಗವನ್ನೂ ಮತ್ತು ಪಾಪ ಕರ್ಮದಲ್ಲಿ ಆಗ್ರಹವನ್ನೂ ಬಿಟ್ಟು ವೈರಾಗ್ಯ ವನ್ನು ಆಶ್ರಯಿಸಬೇಕು.

೨೯೭. ಮತ್ತು ಸರ್ವಪ್ರಾಣಿಗಳಲ್ಲಿ ತನ್ನ ಆತ್ಮರೂಪವನ್ನೂ ತನ್ನ ಆತ್ಮರೂಪದಲ್ಲಿ ಸರ್ವಪ್ರಾಣಿಗಳನ್ನೂ ಸಾಕ್ಷಾತ್ಕರಿಸಿ ತನ್ನ ಮನಸ್ಸಿನಿಂದಲೇ ಆತ್ಮವನ್ನು ಸಂದರ್ಶಿಸಿದ ಮಾನವನು ಬ್ರಹ್ಮಭಾವವೆಂಬ ಮೋಕ್ಷಕ್ಕೆ ಅರ್ಹನಾಗುವನು.

೨೯೮. ಬ್ರಹ್ಮಾತ್ಮ ಐಕ್ಯವನ್ನು ಹೊಂದಿದವನೂ, ಶಾಂತವಾದ ಚಿತ್ತವುಳ್ಳ ವನೂ, ಸರ್ವಪ್ರಾಣಿಗಳಿಗೆ ಅಭಯದಾನ ಮಾಡಿದವನೂ, ಆದ ಜ್ಞಾನಿಯು ಇತರರಿಗೆ ಸಾಮಾನ್ಯವಲ್ಲದ ಐಶ್ವರ್ಯ ಮತ್ತು ಪರಮಭಕ್ತಿಗಳನ್ನು ಹೊಂದುತ್ತಾನೆ.

ವೀಕ್ಷ್ಯತೇ ತತ್ಪರಂ ತತ್ತ್ವಮೈಶ್ವರಂ ಬ್ರಹ್ಮ ನಿಷ್ಕಲಮ್ ।
ಸರ್ವಸಂಸಾರನಿರ್ಮುಕ್ತೋ ಬ್ರಹ್ಮಣ್ಯೇವಾವತಿಷ್ಠತೇ ॥ ೨೯೯ ॥

ಬ್ರಹ್ಮಣೋಽಯಂ ಪ್ರತಿಷ್ಠಾನಂ ಪರಸ್ಯ ಪರಮಃ ಶಿವಃ ।
ಅನನ್ಯಶ್ಚಾವ್ಯಯಶ್ಚೈಕಶ್ಚಾತ್ಮಾಧಾರೋ ಮಹೇಶ್ವರಃ ॥ ೩೦೦ ॥

ಜ್ಞಾನೇನ ಕರ್ಮಯೋಗೇನ ಭಕ್ತ್ಯಾ ಯೋಗೇನ ವಾ ನೃಪ ।
ಸರ್ವಂ ಸಂಸಾರಮುಕ್ತ್ಯರ್ಥಮೀಶ್ವರಂ ಶರಣಂ ವ್ರಜ ॥ ೩೦೧ ॥

ಏಷ ಗುಹ್ಯೋಪದೇಶಸ್ತೇ ಮಯಾ ದತ್ತೋ ಗಿರೀಶ್ವರ ।
ಅನ್ವೀಕ್ಷ್ಯ ಚೈತದಖಿಲಂ ಯಥೇಷ್ಟಂ ಕರ್ತುಮರ್ಹಸಿ ॥ ೩೦೨ ॥

---

೨೯೯. ಮತ್ತು ನಿರವಯವವೂ, ಪರಿಪೂರ್ಣವೂ, ಸರ್ವನಿಯಾಮಕವೂ, ಆದ ಆ ಪರತತ್ವವು ನಿವೃತ್ತಿಮಾರ್ಗದಿಂದ ನೋಡಲ್ಪಡುತ್ತದೆ. ಆ ಬ್ರಹ್ಮಜ್ಞಾನಿಯು ಸರ್ವಸಂಸಾರದುಃಖದಿಂದ ನಿರ್ಮುಕ್ತನಾಗಿ ಬ್ರಹ್ಮನಲ್ಲಿಯೇ ಸ್ಥಿತಿಯನ್ನು ಹೊಂದುತ್ತಾನೆ.

೩೦೦. ಆ ಉತ್ತಮವಾದ ಬ್ರಹ್ಮಪ್ರಾಪ್ತಿಗೆ ಈ ಪರಮಶಿವನು ಆಧಾರಭೂತನಾಗಿರುವನು. ಅಂತಹಮಹೇಶ್ವರನು; ಅನ್ಯವಸ್ತುಶೂನ್ಯನೂ, ನಾಶವರ್ಜಿತನೂ, ಏಕರೂಪನೂ ಮತ್ತು ಆತ್ಮಾಧಾರದಲ್ಲಿರುವವನೂ ಆಗಿದ್ದಾನೆ.

೩೦೧. ರಾಜನೇ ! ಜ್ಞಾನಯೋಗದಿಂದಲೂ, ಕರ್ಮಯೋಗದಿಂದಲೂ, ಅಥವಾ ಭಕ್ತಿಯೋಗದಿಂದಲೂ, ಸರ್ವವ್ಯಾಪಿಯಾದ ಈಶ್ವರನನ್ನು ಸಂಸಾರತಾಪದಿಂದ ಬಿಡುಗಡೆಹೊಂದಲು ಶರಣುಹೊಂದು.

೩೦೨. ಪರ್ವತರಾಜನೇ ! ನನ್ನಿಂದ ನಿನಗೆ ಈ ವಿಧವಾದ ಒಂದು ರಹಸ್ಯೋಪದೇಶವು ಕೊಡಲ್ಪಟ್ಟಿದೆ. ನೀನು ಇದೆಲ್ಲವನ್ನೂ ವಿಮರ್ಶಿಸಿ ನಿನ್ನ ಇಷ್ಟಾನುಸಾರ ನಡೆಯಲು ಅರ್ಹನಾಗಿದ್ದೀ.

ಅಹಂ ವೈ ಯಾಚಿತಾ ದೇವೈಃ ಸಂಜಾತಾ ಪರಮೇಶ್ವರಾತ್ ।
ವಿನಿಂದ್ಯ ದಕ್ಷಂ ಪಿತರಂ ಮಹೇಶ್ವರವಿನಿಂದಕಮ್ ॥ ೩೦೩ ॥

ಧರ್ಮಸಂಸ್ಥಾಪನಾರ್ಥಾಯ ತವಾರಾಧನಕಾರಣಾತ್ ।
ಮೇನಾದೇಹಸಮುತ್ಪನ್ನಾ ತ್ವಾಮೇವ ಪಿತರಂ ಶ್ರಿತಾ ॥ ೩೦೪ ॥

ಸ ತ್ವಂ ನಿಯೋಗಾದ್ದೇವಸ್ಯ ಬ್ರಹ್ಮಣಃ ಪರಮಾತ್ಮನಃ ।
ಪ್ರದಾಸ್ಯಸೇ ಮಾಂ ರುದ್ರಾಯ ಸ್ವಯಂವರಸಮಾಗಮೇ ॥ ೩೦೫ ॥

ತತ್ಸಂಬಂಧಾಂತರೇ ರಾಜನ್ ಸರ್ವೇ ದೇವಾಃ ಸವಾಸವಾಃ ।
ತ್ವಾಂ ನಮಸ್ಯಂತಿ ವೈ ತಾತ ಪ್ರಸೀದತಿ ಚ ಶಂಕರಃ ॥ ೩೦೬ ॥

ತಸ್ಮಾತ್ ಸರ್ವಪ್ರಯತ್ನೇನ ಮಾಂ ವಿದ್ಧೀಶ್ವರಗೋಚರಾಮ್ ।
ಸಂಪೂಜ್ಯ ದೇವಮೀಶಾನಾಂ ಶರಣ್ಯಂ ಶರಣಂ ವ್ರಜ ॥ ೩೦೭ ॥

---

೩೦೩. ನಾನು ದೇವತೆಗಳಿಂದ ಪ್ರಾರ್ಥಿಸಲ್ಪಟ್ಟವಳಾಗಿ ಮಹೇಶ್ವರನನ್ನು ನಿಂದಿಸಿದ ಜನಕನಾದ ದಕ್ಷಬ್ರಹ್ಮನನ್ನು ತಿರಸ್ಕರಿಸಿ ಮಹೇಶ್ವರನಿಂದ ಹುಟ್ಟಿರುವೆನು

೩೦೪. ನಾನು ಮೇನಕಾದೇವಿಯ ದೇಹದಿಂದ ಹುಟ್ಟಿದವಳೂ, ನಿನ್ನನ್ನೇ ಜನಕನನ್ನಾಗಿ ಆಶ್ರಯಿಸಿದವಳೂ ಆಗಿ ನಿನ್ನನ್ನು ಆರಾಧಿಸಲು ಮತ್ತು ಧರ್ಮಮಾರ್ಗವನ್ನು ಸ್ಥಾಪಿಸಲು ಹುಟ್ಟಿರುವೆನು.

೩೦೫. ಆ ನೀನು ಪರಮಾತ್ಮರೂಪಿಯಾದ ಬ್ರಹ್ಮದೇವನ ನಿಯೋಗದಂತೆ ಸ್ವಯಂವರಾರ್ಥವಾದ ಸಮಾಗಮದಲ್ಲಿ ನನ್ನನ್ನು ರುದ್ರದೇವನಿಗೆ ಪ್ರದಾನಮಾಡು.

೩೦೬. ರಾಜನಾದ ಜನಕನೇ! ಆ ಈಶ್ವರನ ಸಂಬಂಧ ಪ್ರಸಂಗದಲ್ಲಿ ಇಂದ್ರನೇ ಮುಂತಾದ ಸಮಸ್ತ ದೇವತೆಗಳು ಪೂಜ್ಯನಾದ ನಿನ್ನನ್ನು ನಮಸ್ಕರಿಸುತ್ತಾರೆ. ಮತ್ತು ಶಂಕರನು ಪ್ರಸನ್ನನಾಗುತ್ತಾನೆ.

೩೦೭. ಆದ್ದರಿಂದ ಸಮಸ್ತ ಪ್ರಯತ್ನಪೂರ್ವಕವಾಗಿ ನನ್ನನ್ನು ಈಶ್ವರಾತ್ಮಕಳನ್ನಾಗಿ ತಿಳಿ. ನೀನು ಸರ್ವರಕ್ಷಕನೂ, ಸರ್ವೇಶ್ವರನೂ ಆದ ಶಿವನನ್ನು ಆರಾಧಿಸಿ ಅವನನ್ನು ಶರಣುಹೊಂದು.

ಸ ಏವಮುಕ್ತೋ ಹಿಮವಾನ್ ದೇವದೇವ್ಯಾ ಗಿರೀಶ್ವರಃ ।
ಪ್ರಣಮ್ಯ ಶಿರಸಾ ದೇವೀಂ ಪ್ರಾಂಜಲಿಃ ಪುನರಬ್ರವೀತ್ ॥ ೩೦೮ ॥

ವಿಸ್ತರೇಣ ಮಹೇಶಾನಿ ಯೋಗಂ ಮಾಹೇಶ್ವರಂ ಪರಮ್ ।
ಜ್ಞಾನಂ ವೈ ಚಾತ್ಮನೋ ಯೋಗಂ ಸಾಧನಾನಿ ಪ್ರಚಕ್ಷ್ವ ಮೇ ॥೩೦೯॥

ತಸ್ಮೈ ತತ್ಪರಮಂ ಜ್ಞಾನಮಾತ್ಮನೋ ಯೋಗಮುತ್ತಮಮ್ ।
ಯಥಾವದ್ವ್ಯಾಜಹಾರೇಶಾ ಸಾಧನಾನಿ ಚ ವಿಸ್ತರಾತ್ ॥ ೩೧೦ ॥

ನಿಶಮ್ಯ ವದನಾಂಭೋಜಾದ್ಗಿರೀಂದ್ರೋ ಲೋಕಪೂಜಿತಃ ।
ಲೋಕಮಾತುಃ ಪರಂ ಜ್ಞಾನಂ ಯೋಗಾಸಕ್ತೋಽಭವತ್ಪುನಃ ॥೩೧೧॥

---

೩೦೮. ದೇವದೇವಿಯಾದ ಪಾರ್ವತಿಯಿಂದ ಹೀಗೆಂದು ಹೇಳಲ್ಪಟ್ಟ, ಪರ್ವತ ರಾಜನಾದ ಹಿಮವಂತನು ತಲೆಬಾಗಿಸಿ ಪಾರ್ವತಿಯನ್ನು ನಮಸ್ಕರಿಸಿ ಮತ್ತೆ ಅಂಜಲಿ ಬದ್ಧನಾಗಿ ಇಂತೆಂದನು.

೩೦೯. ಸರ್ವೇಶ್ವರಿಯೇ ! ಉತ್ತಮವಾದ, ಮಹೇಶ್ವರಪ್ರಾಪ್ತಿ ಸಾಧಕವಾದ, ಯೋಗವನ್ನೂ, ಆತ್ಮಜ್ಞಾನಯೋಗವನ್ನೂ ಮತ್ತು ಆ ಯೋಗಸಾಧನೆಗಳನ್ನೂ ವಿಸ್ತಾರವಾಗಿ ನನಗೆ ಉಪದೇಶಿಸು.

೩೧೦. ಆಗ ಸರ್ವೇಶ್ವರಿಯಾದ ದೇವಿಯು ಹಿಮವಂತನಿಗೆ ಉತ್ತಮವಾದ ಆತ್ಮಜ್ಞಾನವನ್ನೂ, ಶ್ರೇಷ್ಠವಾದ ಯೋಗಮಾರ್ಗವನ್ನೂ ಮತ್ತು ಸಾಧನಗಳನ್ನೂ ಯಥಾವತ್ತಾಗಿ ವಿಸ್ತಾರವಾಗಿ ಹೇಳಿದಳು.

೩೧೧. ಲೋಕವಂದ್ಯನಾದ ಪರ್ವತರಾಜನು ಜಗನ್ಮಾತೆಯಾದ ಪಾರ್ವತಿಯ ಮುಖಕಮಲದಿಂದ ಉತ್ತಮವಾದ ಜ್ಞಾನವನ್ನು ಶ್ರವಣಮಾಡಿ ಮತ್ತೆ ಯೋಗಾಭ್ಯಾಸದಲ್ಲಿ ನಿರತನಾದನು.

ಪ್ರದದೌ ಚ ಮಹೇಶಾಯ ಪಾರ್ವತೀಂ ಭಾಗ್ಯಗೌರವಾತ್ ।
ನಿಯೋಗಾದ್ಬ್ರಹ್ಮಣಃ ಸಾಧ್ವೀಂ ದೇವಾನಾಂ ಚೈವ ಸನ್ನಿಧೌ॥ ೩೧೨ ॥

ಯ ಇಮಂ ಪಠತೇಽಧ್ಯಾಯಂ ದೇವ್ಯಾ ಮಾಹಾತ್ಮ್ಯಕೀರ್ತನಮ್ ।
ಶಿವಸ್ಯ ಸನ್ನಿಧೌ ಭಕ್ತ್ಯಾ ಶುಚಿಸ್ತದ್ಭಾವಭಾವಿತಃ ॥ ೩೧೩ ॥

ಸರ್ವಪಾಪವಿನಿರ್ಮುಕ್ತೋ ದಿವ್ಯಯೋಗಸಮನ್ವಿತಃ ।
ಉಲ್ಲಂಘ್ಯ ಬ್ರಹ್ಮಣೋ ಲೋಕಂ ದೇವ್ಯಾಃ ಸ್ಥಾನಮವಾಪ್ನುಯಾತ್ ॥

ಯಶ್ಚೈತತ್ಪಠತಿ ಸ್ತೋತ್ರಂ ಬ್ರಾಹ್ಮಣಾನಾಂ ಸಮೀಪತಃ ।
ಸಮಾಹಿತಮನಾಃ ಸೋಽಪಿ ಸರ್ವಪಾಪೈಃ ಪ್ರಮುಚ್ಯತೇ ॥ ೩೧೫ ॥

---

೩೧೨. ಮತ್ತು ತನ್ನ ಅತಿಶಯವಾದ ಭಾಗ್ಯ ಪಂಕ್ತಿಯಿಂದ ಬ್ರಹ್ಮದೇವನ ಆಜ್ಞೆಯಂತೆ ಸಮಸ್ತದೇವತೆಗಳ ಸನ್ನಿಧಿಯಲ್ಲಿ ಪತಿವ್ರತಾಮಣಿಯಾದ ತನ್ನ ಪುತ್ರಿಯನ್ನು ಶಂಕರನಿಗೆ ಕೊಟ್ಟನು.

೩೧೩. ಶ್ರೇಯಸ್ಕಾಮನಾದ ಮಾನವನು ಶುಚಿಯಾಗಿ ದೇವತಾಭಾವನೆಯಿಂದ ಕೂಡಿದವನಾಗಿ ಶಿವನ ಸನ್ನಿಧಿಯಲ್ಲಿ ದೇವಿಯ ಮಾಹಾತ್ಮ್ಯವನ್ನು ಕೀರ್ತಿಸುವ ಈ ಅಧ್ಯಾಯವನ್ನು ಭಕ್ತಿಯಿಂದ ಪಠಿಸಬೇಕು.

೩೧೪. ಅಂತಹ ಮಾನವನು ಸಮಸ್ತ ಪಾಪಗಳಿಂದ ಬಿಡುಗಡೆಹೊಂದಿದವನೂ, ದಿವ್ಯವಾದ ಯೋಗಬಲದಿಂದ ಕೂಡಿದವನೂ ಆಗಿ ಬ್ರಹ್ಮ ಲೋಕವನ್ನು ಮೀರಿ ದೇವಿಯ ಸ್ಥಾನವನ್ನು ಹೊಂದುತ್ತಾನೆ.

೩೧೫. ಯಾವ ಮಾನವನು ಸಮಾಧಾನ ಚಿತ್ತವುಳ್ಳವನಾಗಿ ಬ್ರಾಹ್ಮಣರ ಸಮೀಪದಲ್ಲಿ ಈ ಪವಿತ್ರಸ್ತೋತ್ರವನ್ನು ಪಠಿಸುವನೋ, ಅವನು ಸರ್ವಪಾಪಗಳಿಂದ ಪರಿಶುದ್ಧನಾಗುವನು.

ನಾಮ್ನಾಮಷ್ಟಸಹಸ್ರಂ ತು ದೇವ್ಯಾ ಯತ್ಸಮುದೀರಿತಮ್ ।
ಜ್ಞಾತ್ವಾರ್ಕಮಂಡಲಗತಾಮಾವಾಹ್ಯ ಪರಮೇಶ್ವರೀಮ್ ॥ ೩೧೬ ॥

ಅಭ್ಯರ್ಚ್ಯ ಗಂಧಪುಷ್ಪಾದ್ಯೈರ್ಭಕ್ತಿಯೋಗಸಮನ್ವಿತಃ ।
ಸಂಸ್ಮರನ್ ಪರಮಂ ಭಾವಂ ದೇವ್ಯಾ ಮಾಹೇಶ್ವರಂ ಪರಮ್ ॥೩೧೭॥

ಅನನ್ಯಮಾನಸೋ ನಿತ್ಯಂ ಜಪೇದಾಮರಣಾದ್ದ್ವಿಜಃ ।
ಸೋಽಂತಕಾಲೇ ಸ್ಮೃತಿಂ ಲಬ್ಧ್ವಾ ಪರಂ ಬ್ರಹ್ಮಾಧಿಗಚ್ಛತಿ ॥ ೩೧೮ ॥

ಅಥವಾ ಜಾಯತೇ ವಿಪ್ರೋ ಬ್ರಾಹ್ಮಣಸ್ಯ ಶುಚೌ ಕುಲೇ ।
ಪೂರ್ವಸಂಸ್ಕಾರಮಾಹಾತ್ಮ್ಯಾದ್ಬ್ರಹ್ಮವಿದ್ಯಾಮವಾಪ್ನುಯಾತ್ ॥

---

೩೧೬. ದೇವೀಭಕ್ತನು ಪಾರ್ವತೀದೇವಿಯನ್ನು ಸೂರ್ಯಬಿಂಬದ ಮಧ್ಯದಲ್ಲಿರುವಂತೆ ಭಾವಿಸಿ ತನ್ನ ಸಮೀಪದಲ್ಲಿ ದೇವಿಯನ್ನು ಆವಾಹನಮಾಡಿ ಹಿಂದೆ ಹೇಳಿದ ದೇವಿಯ ಅಷ್ಟೋತ್ತರ ಸಹಸ್ರನಾಮಮಂತ್ರಗಳಿಂದ ಪೂಜಿಸಬೇಕು.

೩೧೭. ಮತ್ತು ಪರಮಯೋಗ-ಭಕ್ತಿಯಿಂದ ಕೂಡಿದವನಾಗಿ ದೇವಿಯ ಮಾಹೇಶ್ವರರೂಪವಾದ ಸರ್ವೋತ್ತಮ ತತ್ತ್ವವನ್ನು ಸ್ಮರಿಸುತ್ತಾ ಗಂಧಪುಷ್ಪ ಮುಂತಾದ ಉಪಕರಣಗಳಿಂದ ದೇವಿಯನ್ನು ಪೂಜಿಸಬೇಕು.

೩೧೮. ದ್ವಿಜನು ಅನ್ಯವಸ್ತುವಿನಲ್ಲಿ ಮನಸ್ಸಂಗವನ್ನು ಬಿಟ್ಟು ಮರಣವು ಸಂಭವಿಸುವವರೆಗೂ ನಿತ್ಯದಲ್ಲಿಯೂ ದೇವಿಯನ್ನು ಜಪಿಸುವುದರಿಂದ ಮರಣಕಾಲದಲ್ಲಿ ಆ ದೇವೀ ಸ್ಮೃತಿಯನ್ನು ಹೊಂದಿ ಪರಬ್ರಹ್ಮವನ್ನು ಹೊಂದುತ್ತಾನೆ.

೩೧೯. ಒಂದು ವೇಳೆ ಬ್ರಹ್ಮಭಾವವು ಲಭಿಸದಿದ್ದರೂ ವಿಪ್ರೋತ್ತಮನ ಪವಿತ್ರವಾದ ವಂಶದಲ್ಲಿ ಬ್ರಾಹ್ಮಣನಾಗಿ ಜನಿಸಿ ಪೂರ್ವ ಜನ್ಮದ ಸಂಸ್ಕಾರದ ಮಹತ್ತ್ವದಿಂದ ಬ್ರಹ್ಮವಿದ್ಯೆಯನ್ನು ಹೊಂದುತ್ತಾನೆ.

ಸಂಪ್ರಾಪ್ಯ ಯೋಗಂ ಪರಮಂ ದಿವ್ಯಂ ತತ್ಪಾರಮೇಶ್ವರಮ್ ।
ಶಾಂತಃ ಸುಸಂಯತೋ ಭೂತ್ವಾ ಶಿವಸಾಯುಜ್ಯಮಾಪ್ನುಯಾತ್ ॥

ಪ್ರತ್ಯೇಕಂ ಚಾಥ ನಾಮಾನಿ ಜುಹುಯಾತ್ ಸವನತ್ರಯಮ್ ।
ಮಹಾಮಾರಿಕೃತೈರ್ದೋಷೈರ್ಗ್ರಹದೋಷೈಶ್ಚ ಮುಚ್ಯತೇ ॥ ೩೨೧ ॥

ಜಪೇದ್ವಾಹರಹರ್ನಿತ್ಯಂ ಸಂವತ್ಸರಮತಂದ್ರಿತಃ ।
ಶ್ರೀಕಾಮಃ ಪಾರ್ವತೀಂ ದೇವೀಂ ಪೂಜಯಿತ್ವಾ ವಿಧಾನತಃ ॥ ೩೨೨ ॥

ಸಂಪೂಜ್ಯ ಪಾರ್ಶ್ವತಃ ಶಂಭುಂ ತ್ರಿನೇತ್ರಂ ಭಕ್ತಿಸಂಯುತಃ ।
ಲಭತೇ ಮಹತೀಂ ಲಕ್ಷ್ಮೀಂ ಮಹಾದೇವಪ್ರಸಾದತಃ ॥ ೩೨೩ ॥

---

೩೨೦. ಅನಂತರದಲ್ಲಿ ಪರಮೇಶ್ವರಪ್ರಾಪಕವಾದ ಮತ್ತು ಸರ್ವೋತ್ತಮವಾದ ದಿವ್ಯಯೋಗಾಭ್ಯಾಸವನ್ನು ಹೊಂದಿ ಶಾಂತನೂ, ಜಿತೇಂದ್ರಿಯನೂ ಆಗಿ ಶಿವನ ಸಾಯುಜ್ಯಮುಕ್ತಿಯನ್ನು ಹೊಂದುತ್ತಾನೆ.

೩೨೧. ಮತ್ತು ಸಂಧ್ಯಾತ್ರಯದಲ್ಲಿ ಪ್ರತ್ಯೇಕನಾಮಗಳನ್ನು ಉಚ್ಚರಿಸಿ ಆಹುತಿದ್ರವ್ಯವನ್ನು ಹೋಮಮಾಡುವುದರಿಂದ ಮಹಾಮಾರೀದೋಷಗಳಿಂದಲೂ ದುಷ್ಟಗ್ರಹದೋಷಗಳಿಂದಲೂ ಬಿಡಲ್ಪಡುವನು.

೩೨೨. ಅಥವಾ ಶ್ರೀಕಾಮನಾದ ಮಾನವನು ಪ್ರತಿ ನಿತ್ಯವೂ ಯಥಾ ವಿಧಿಯಾಗಿ ಪಾರ್ವತೀದೇವಿಯನ್ನು ಪೂಜಿಸಿ ಆಲಸ್ಯವಿಲ್ಲದೆ ಒಂದು ವರ್ಷ ಪೂರ್ಣ ಕಾಲದವರೆಗೆ ಜಪಿಸಬೇಕು.

೩೨೩. ದೇವಿಯ ಪಾರ್ಶ್ವದಲ್ಲಿ ಮೂರು ನೇತ್ರಗಳುಳ್ಳ ಶಂಕರನನ್ನು ಭಕ್ತಿಯಿಂದ ಕೂಡಿದವನಾಗಿ ಪೂಜಿಸಿ ಮಹಾದೇವನ ಅನುಗ್ರಹದಿಂದ ಅತಿಶಯವಾದ ಸಂಪತ್ತಿಯನ್ನು ಹೊಂದುತ್ತಾನೆ.

ತಸ್ಮಾತ್ ಸರ್ವಪ್ರಯತ್ನೇನ ಜಪ್ತವ್ಯಂ ಹಿ ದ್ವಿಜಾತಿಭಿಃ ।
ಸರ್ವಪಾಪಾಪನೋದಾರ್ಥಂ ದೇವ್ಯಾ ನಾಮಸಹಸ್ರಕಮ್ ॥ ೩೨೮ ॥

ಸೂತ ಉವಾಚ :—

ಪ್ರಸಂಗಾತ್ಕಥಿತಂ ವಿಪ್ರಾ ದೇವ್ಯಾ ಮಾಹಾತ್ಮ್ಯಮುತ್ತಮಮ್ ।
ಅತಃ ಪರಂ ಪ್ರಜಾಸರ್ಗಂ ಭೃಗ್ವಾದೀನಾಂ ನಿಬೋಧತ ॥ ೩೨೫ ॥

ಇತಿ ಶ್ರೀ ಕೂರ್ಮಪುರಾಣೇ ದ್ವಾದಶೋಽಧ್ಯಾಯಃ

---

೩೨೪. ಆದ್ದರಿಂದ ದ್ವಿಜರಿಂದ ದೇವಿಯ ಸಹಸ್ರನಾಮಸ್ತೋತ್ರವು ಸಮಸ್ತ ಪಾಪಗಳನ್ನು ಕಳೆದುಕೊಳ್ಳುವುದಕ್ಕೆ ಸರ್ವ ಪ್ರಯತ್ನಗಳಿಂದ ಭಕ್ತಿಯಿಂದ ಜಪಿಸಬೇಕಾದ್ದು.

೩೨೫. ಸೂತಮಹರ್ಷಿಯು ಇಂತೆಂದನು :—ವಿಪ್ರರೆ! ಪ್ರಸಂಗವಶದಿಂದ ಉತ್ತಮವಾದ ಈ ದೇವೀಮಾಹಾತ್ಮ್ಯವು ಉಪದೇಶಿಸಲ್ಪಟ್ಟಿತು ಇನ್ನು ಮುಂದೆ ಭೃಗುಮುನಿ ಮುಂತಾದವರಿಂದ ಆದ ಪ್ರಜಾಸೃಷ್ಟಿವಿಸ್ತಾರವನ್ನು ಶ್ರವಣಮಾಡಿರಿ.

ಕೂರ್ಮ ಪುರಾಣದಲ್ಲಿ ಹನ್ನೆರಡನೆಯ ಅಧ್ಯಾಯವು ಮುಗಿದುದು.



ಶ್ರೀಃ

# ಕೂರ್ಮಪುರಾಣಂ

## ತ್ರಯೋದಶೋಽಧ್ಯಾಯಃ

### (ದಕ್ಷಕನ್ಯಾಖ್ಯಾತಿವಂಶಃ)

**ಸೂತ ಉವಾಚ :—**

**ಭೃಗೋಃ ಖ್ಯಾತ್ಯಾಂ ಸಮುತ್ಪನ್ನಾ ಲಕ್ಷ್ಮೀರ್ನಾರಾಯಣಪ್ರಿಯಾ ।**
**ದೇವೌ ಧಾತಾವಿಧಾತಾರೌ ಮೇರೋರ್ಜಾಮಾತರೌ ಶುಭೌ ॥ ೧ ॥**

**ಆಯತಿರ್ನಿಯತಿಶ್ಚೈವ ಮೇರೋಃ ಕನ್ಯೇ ಮಹಾತ್ಮನಃ ।**
**ತಯೋರ್ಧಾತೃವಿಧಾತೃಭ್ಯಾಂ ಯೌ ಚ ಜಾತೌ ಸುತಾವುಭೌ ॥ ೨ ॥**

---

## ಹದಿಮೂರನೆಯ ಅಧ್ಯಾಯವು

೧. ಸೂತಮುನಿಯು ಇಂತೆಂದನು :— ಭೃಗುಮಹರ್ಷಿಯ ಸತಿಯಾದ ಖ್ಯಾತಿದೇವಿಯಲ್ಲಿ ಮಹಾವಿಷ್ಣುವಿನ ಪ್ರಿಯೆಯಾದ ಲಕ್ಷ್ಮಿಯು ಜನಿಸಿದಳು. ಮತ್ತು ಧಾತ, ವಿಧಾತ ಎಂಬ ಮಹಾಮೇರುಪರ್ವತಕ್ಕೆ ಮಂಗಳಕರರಾದ ಜಾಮಾತೃಗಳಾದ ದೇವತೆಗಳು ಜನಿಸಿದರು.

೨. ಮಹಾತ್ಮನಾದ ಮಹಾಮೇರುವಿಗೆ ಆಯತಿ-ನಿಯತಿ ಎಂಬ ಇಬ್ಬರು ಕನ್ಯೆಯರಿದ್ದರು. ಧಾತೃ-ವಿಧಾತೃ ಎಂಬುವರಿಂದ ಆ ಕನ್ಯೆಯರಲ್ಲಿ ಕ್ರಮವಾಗಿ ಇಬ್ಬರು ಪುತ್ರರು ಜನಿಸಿದರು.

**ಪ್ರಾಣಶ್ಚೈವ ಮೃಕಂಡುಶ್ಚ ಮಾರ್ಕಂಡೇಯೋ ಮೃಕಂಡುತಃ ।**
**ತಥಾ ವೇದಶಿರಾ ನಾಮ ಪ್ರಾಣಸ್ಯ ದ್ಯುತಿಮಾನ್ ಸುತಃ ॥ ೩ ॥**

**ಮರೀಚೇರಪಿ ಸಂಭೂತಿಃ ಪೂರ್ಣಮಾಸಮಸೂಯತ ।**
**ಕನ್ಯಾಚತುಷ್ಟಯಂ ಚೈವ ಸರ್ವಲಕ್ಷಣಸಂಯುತಮ್ ॥ ೪ ॥**

**ತುಷ್ಟಿರ್ಜ್ಯೇಷ್ಠಾ ತಥಾ ವೃಷ್ಟಿಃ ಕೃಷ್ಟಿಶ್ಚಾಪಚಿತಿಸ್ತಥಾ ।**
**ವಿರಜಾಃ ಪರ್ವತಶ್ಚೈವ ಪೂರ್ಣಮಾಸಸ್ಯ ತೌ ಸುತೌ ॥ ೫ ॥**

**ಕ್ಷಮಾ ತು ಸುಷುವೇ ಪುತ್ರಾನ್ ಪುಲಹಸ್ಯ ಪ್ರಜಾಪತೇಃ ।**
**ಕರ್ದಮಶ್ಚ ವರೀಯಾಂಸಂ ಸಹಿಷ್ಣುಂ ಮುನಿಸತ್ತಮಮ್ ॥ ೬ ॥**

**ತಥೈವ ಚ ಕನೀಯಾಂಸಂ ತಪೋನಿರ್ಧೂತಕಲ್ಮಷಮ್ ।**
**ಅನಸೂಯಾ ತಥೈವಾತ್ರೇರ್ಜಜ್ಞೇ ಪುತ್ರಾನಕಲ್ಮಷಾನ್ ॥ ೭ ॥**

---

೩. ಆ ಇಬ್ಬರು ಪುತ್ರರು ಪ್ರಾಣ-ಮೃಕಂಡು ಎಂದು ಪ್ರಸಿದ್ಧರಾಗಿದ್ದರು. ಅವರಲ್ಲಿ ಮೃಕಂಡುವಿಗೆ ಮಾರ್ಕಂಡೇಯನೂ ಪ್ರಾಣನಿಗೆ ಕಾಂತಿಯಿಂದ ಹೊಳೆಯುವ ವೇದಶಿರ ಎಂಬುವನೂ ಪುತ್ರರಾಗಿ ಹುಟ್ಟಿದರು.

೪. ಮರೀಚಿಮುನಿಯ ಭಾರ್ಯೆಯಾದ ಸಂಭೂತಿದೇವಿಯು ಪೂರ್ಣಮಾಸ ಎಂಬ ಪುತ್ರನನ್ನೂ, ಸಮಸ್ತ ಲಕ್ಷಣದಿಂದ ಕೂಡಿದ ನಾಲ್ಕು ಮಂದಿ ಕನ್ಯೆಯರನ್ನೂ ಪ್ರಸವಿಸಿದಳು.

೫. ಆ ನಾಲ್ಕು ಮಂದಿ ಕನ್ಯೆಯರಲ್ಲಿ ಹಿರಿಯವಳು ತುಷ್ಟಿ ಎಂಬುದಾಗಿಯೂ ಮಿಕ್ಕ ಮೂರು ಮಂದಿಯು ವೃಷ್ಟಿ, ಕೃಷ್ಟಿ, ಅಪಚಿತಿ ಎಂಬುದಾಗಿಯೂ ಪ್ರಸಿದ್ಧರಾಗಿದ್ದರು. ಪೂರ್ಣಮಾಸನಿಗೆ ವಿರಜಾ ಮತ್ತು ಪರ್ವತ ಎಂಬುವರು ಪುತ್ರರಾಗಿದ್ದರು.

೬. ಪುಲಹಪ್ರಜಾಪತಿಯ ಪತ್ನಿಯಾದ ಕ್ಷಮಾದೇವಿಯು ಮುನಿಶ್ರೇಷ್ಠನೂ, ಸಹನಶೀಲನೂ ಆದ ಕರ್ದಮ ಎಂಬ ಜೇಷ್ಠಪುತ್ರನನ್ನು ಹೊಂದಿದಳು.

೭. ಹಾಗೆಯೇ ತಪಶ್ಶಕ್ತಿಯಿಂದ ಪಾಪಪುಂಜವನ್ನು ದೂರಮಾಡುವ ಒಬ್ಬ ಕನಿಷ್ಠಪುತ್ರನನ್ನು ಪ್ರಸವಿಸಿದಳು. ಹಾಗೆ ಅತ್ರಿಮಹರ್ಷಿಯಿಂದ ಅನುಸೂಯಾದೇವಿಯು ನಿರ್ದೋಷರಾದ ಪುತ್ರರನ್ನು ಹೊಂದಿದಳು.

ಸೋಮಂ ದುರ್ವಾಸಸಂ ಚೈವ ದತ್ತಾತ್ರೇಯಂ ಚ ಯೋಗಿನಮ್ ।
ಸ್ಮೃತಿಶ್ಚಾಂಗಿರಸಃ ಪುತ್ರೀ ಜಜ್ಞೇ ಲಕ್ಷಣಸಂಯುತಾ ॥ ೮ ॥

ಸಿನೀವಾಲೀಂ ಕುಹೂಂ ಚೈವ ರಾಕಾಮನುಮತೀಮಪಿ ।
ಪ್ರೀತ್ಯಾಂ ಪುಲಸ್ತ್ಯೋ ಭಗವಾನ್ ದಂಭೋಜಿಮಸೃಜತ್ಪ್ರಭುಃ ॥

ಪೂರ್ವಜನ್ಮನಿ ಸೋಽಗಸ್ತ್ಯಃ ಸ್ಮೃತಃ ಸ್ವಾಯಂಭುವೇಽಂತರೇ ।
ದೇವಬಾಹುಸ್ತಥಾ ಕನ್ಯಾ ದ್ವಿತೀಯಾ ನಾಮ ನಾಮತಃ ॥ ೧೦ ॥

ಪುತ್ರಾಣಾಂ ಷಷ್ಟಿಸಾಹಸ್ರಂ ಸಂತತಿಃ ಸುಷುವೇ ಕ್ರತೋಃ ।
ತೇ ಚೋರ್ಧ್ವರೇತಸಃ ಸರ್ವೇ ವಾಲಖಿಲ್ಯಾ ಇತಿ ಸ್ಮೃತಾಃ ॥ ೧೧ ॥

---

೮. ಆ ಪುತ್ರರು ಚಂದ್ರ, ದೂರ್ವಾಸಮುನಿ ಮತ್ತು ದತ್ತಾತ್ರೇಯಯೋಗಿಯೆಂದು ಪ್ರಸಿದ್ಧರಾಗಿದ್ದರು. ಅಂಗಿರೋಮುನಿಯಿಂದ ಸರ್ವಲಕ್ಷಣಗಳಿಂದ ಕೂಡಿದ ಸ್ಮೃತಿ ಎಂಬ ಪುತ್ರಿಯು ಮುಂದೆ ವಿವರಿಸುವ ಸಂತತಿಯನ್ನು ಹೊಂದಿದಳು.

೯. ಆ ಸಂತತಿಯಲ್ಲಿ ಸಿನೀವಾಲೀ, ಕುಹೂ, ರಾಕಾ ಮತ್ತು ಅನುಮತಿ ಎಂಬುವರು ಸೇರಿರುವರು. ಪೂಜ್ಯನಾದ ಪುಲಸ್ತ್ಯಪ್ರಜಾಪತಿಯು ಪ್ರೀತಿದೇವಿಯಲ್ಲಿ ದಂಭೋಜಿ ಎಂಬ ಪುತ್ರನನ್ನು ಸೃಜಿಸಿದನು.

೧೦. ಆ ದಂಭೋಜಿಯು ಸ್ವಾಯಂಭುವಮನ್ವಂತರದಲ್ಲಿ ಪೂರ್ವಜನ್ಮದಲ್ಲಿ ಅಗಸ್ತ್ಯಮುನಿಯೆಂದು ಸ್ಮರಿಸಲ್ಪಟ್ಟಿದ್ದನು. ದೇವಬಾಹು ಅಥವಾ ದ್ವಿತೀಯಾ ಎಂಬ ನಾಮಾಂಕಿತಳಾದ ದಕ್ಷಕನ್ಯೆಯು ವಿಶಾಲ ಸಂತತಿಯನ್ನು ಹೊಂದಿದಳು.

೧೧. ಆ ಕನ್ಯೆಯು ಕ್ರತುಮುನಿಯಿಂದ ಹೊಂದಿರುವ ಸಂತತಿಯು ಅರವತ್ತು ಸಹಸ್ರ ಪುತ್ರರೂಪವಾಗಿ ಬೆಳೆಯಿತು. ಆ ಪುತ್ರರೆಲ್ಲರೂ ಊರ್ಧ್ವರೇತಸ್ಸುಗಳೆಂದೆನಿಸಿರುವ ವಾಲಖಿಲ್ಯಮಹರ್ಷಿಗಳೆಂದು ಸ್ಮರಿಸಲ್ಪಟ್ಟಿರುವರು.

ವಸಿಷ್ಠಶ್ಚ ತಥೋರ್ಜಾಯಾಂ ಸಪ್ತ ಪುತ್ರಾನಜೀಜನತ್ ।
ಕನ್ಯಾಂ ಚ ಪುಂಡರೀಕಾಕ್ಷಾಂ ಸರ್ವಶೋಭಾಸಮನ್ವಿತಾಮ್ ॥ ೧೨ ॥

ರಜೋಮಾತ್ರೋರ್ಧ್ವಬಾಹುಶ್ಚ ಸವನಶ್ಚಾನಘಸ್ತಥಾ ।
ಸುತಪಾಃ ಶುಕ್ರ ಇತ್ಯೇತೇ ಸಪ್ತ ಪುತ್ರಾ ಮಹೌಜಸಃ ॥ ೧೩ ॥

ಯೋಽಸೌ ರುದ್ರಾತ್ಮಕೋ ವಹ್ನಿರ್ಬ್ರಹ್ಮಣಸ್ತನಯೋ ದ್ವಿಜಾಃ ।
ಸ್ವಾಹಾ ತಸ್ಮಾತ್ ಸುತಾನ್ ಲೇಭೇ ತ್ರೀನುದಾರಾನ್ಮಹೌಜಸಃ ॥ ೧೪ ॥

ಪಾವಕಃ ಪವಮಾನಶ್ಚ ಶುಚಿರಗ್ನಿಶ್ಚ ರೂಪತಃ ।
ನಿರ್ಮಥ್ಯಃ ಪವಮಾನಃ ಸ್ಯಾದ್ವೈದ್ಯುತಃ ಪಾವಕಃ ಸ್ಮೃತಃ ॥ ೧೫ ॥

ಯಶ್ಚಾಸೌ ತಪತೇ ಸೂರ್ಯೇ ಶುಚಿರಗ್ನಿಸ್ತ್ವಸೌ ಸ್ಮೃತಃ ।
ತೇಷಾಂ ತು ಸಂತತಾವನ್ಯೇ ಚತ್ವಾರಿಂಶಚ್ಚ ಪಂಚ ಚ ॥ ೧೬ ॥

---

೧೨. ವಸಿಷ್ಠಮುನಿಯು ಊರ್ಜಾ ಎಂಬ ತಮ್ಮ ಭಾರ್ಯೆಯಲ್ಲಿ ಏಳು ಮಂದಿ ಪುತ್ರರನ್ನೂ ಹಾಗು ಕಮಲದಂತಿರುವ ನೇತ್ರಗಳಿಂದ ಶೊಭಿಸುವ ಸಮಸ್ತ ಶೋಭೆಗಳಿಂದ ಕೂಡಿರುವ ಒಬ್ಬಳು ಕನ್ಯೆಯನ್ನೂ ಹೊಂದಿದನು.

೧೩. ಆ ಪುತ್ರರು ರಜೋಮಾತ್ರ, ಊರ್ಧ್ವಬಾಹು, ಸವನ, ಅನಘ, ಸುತಪ ಮತ್ತು ಶುಕ್ರ ಎಂಬ ನಾಮಾಂಕಿತರಾಗಿಯೂ ಮಹಾ ತೇಜಸ್ವಿಗಳಾಗಿಯೂ ಇದ್ದರು.

೧೪. ದ್ವಿಜರೇ! ರುದ್ರರೂಪದಿಂದ ಬ್ರಹ್ಮನ ಪುತ್ರನಾಗಿ ಜನಿಸಿರುವ ಅಗ್ನಿ ದೇವನಿಂದ ಸ್ವಾಹಾದೇವಿಯು ಮಹಾತೇಜಸ್ವಿಗಳೂ ಉದಾರಿಗಳೂ ಆದ ಮೂರು ಮಂದಿ ಪುತ್ರರನ್ನು ಹೊಂದಿದಳು.

೧೫. ಆ ಮೂರು ಮಂದಿ ಪುತ್ರರು ಪಾವಕ, ಪವಮಾನ ಮತ್ತು ಶುಚಿಅಗ್ನಿ ಎಂಬ ರೂಪಗಳನ್ನು ಹೊಂದಿದ್ದರು. ಇವರಲ್ಲಿ ಅರಣಿಯಿಂದ ಮಥಿಸುವುದು ಪವಮಾನಾಗ್ನಿಯು, ಮಿಂಚಿನಲ್ಲಿ ಹೊಳೆಯುವುದು ಪಾವಕಾಗ್ನಿಯು ಎಂದು ಸ್ಮರಿಸಲ್ಪಟ್ಟಿದೆ.

೧೬. ಸೂರ್ಯಮಂಡಲದಲ್ಲಿ ತಪಿಸುತ್ತಿರುವ ಅಗ್ನಿಯು ಶುಚಿ ಅಗ್ನಿ ಎಂದು ಸ್ಮರಿಸಲ್ಪಟ್ಟಿದೆ. ಆ ಅಗ್ನಿಗಳ ಸಂತಾನದಲ್ಲಿ ಮತ್ತು ಇತರ ನಲವತ್ತೈದು ಅಗ್ನಿಗಳು ಜನಿಸಿರುತ್ತವೆ.

ಪವಮಾನಃ ಪಾವಕಶ್ಚ ಶುಚಿಸ್ತೇಷಾಂ ಪಿತಾ ಚ ಯಃ ।
ಏತೇ ಚೈಕೋನಪಂಚಾಶದ್ವಹ್ನಯಃ ಪರಿಕೀರ್ತಿತಾಃ　　॥ ೧೭ ॥

ಸರ್ವೇ ತಪಸ್ವಿನಃ ಪ್ರೋಕ್ತಾಃ ಸರ್ವೇ ಯಜ್ಞೇಷು ಭಾಗಿನಃ ।
ರುದ್ರಾತ್ಮಕಾಃ ಸ್ಮೃತಾಃ ಸರ್ವೇ ತ್ರಿಪುಂಡ್ರಾಂಕಿತಮಸ್ತಕಾಃ　　॥ ೧೮ ॥

ಅಯಜ್ವಾನಶ್ಚ ಯಜ್ವಾನಃ ಪಿತರೋ ಬ್ರಹ್ಮಣಃ ಸುತಾಃ ।
ಅಗ್ನಿಷ್ವಾತ್ತಾ ಬರ್ಹಿಷದೋ ದ್ವಿಧಾ ತೇಷಾಂ ವ್ಯವಸ್ಥಿತಾಃ　　॥ ೧೯ ॥

ತೇಭ್ಯಃ ಸ್ವಧಾ ಸುತಾಂ ಜಜ್ಞೇ ಮೇನಾಂ ವೈ ಧಾರಿಣೀಂ ತಥಾ ।
ತೇ ಉಭೇ ಬ್ರಹ್ಮವಾದಿನ್ಯೌ ಯೋಗಿನ್ಯೌ ಮುನಿಸತ್ತಮಾಃ　　॥ ೨೦ ॥

---

೧೭. ಪವಮಾನ, ಪಾವಕ, ಶುಚಿ ಮತ್ತು ಇವುಗಳಿಗೆ ಕಾರಣವಾದ ಅಗ್ನಿ ಇವುಗಳು ಸೇರಿ ನಲವತ್ತೊಂಭತ್ತು ವಿಧದ ಅಗ್ನಿಗಳು ಕೀರ್ತಿಸಲ್ಪಟ್ಟಿವೆ.

೧೮. ಈ ಎಲ್ಲಾ ಅಗ್ನಿಗಳೂ ಮಹಾತಪಸ್ವಿಗಳೆಂದೂ ಯಜ್ಞದಲ್ಲಿ ಹವಿರ್ಭಾಗವುಳ್ಳವುಗಳೆಂದೂ ಹೇಳಲ್ಪಟ್ಟಿವೆ. ಮತ್ತು ಈ ಅಗ್ನಿಗಳು ರುದ್ರಸ್ವರೂಪವಾಗಿ ಸ್ಮರಿಸಲ್ಪಟ್ಟಿರುವುದರಿಂದ ಭಸ್ಮತ್ರಿಪುಂಡ್ರದಿಂದ ಶೋಭಿಸಲ್ಪಟ್ಟ ಲಲಾಟವುಳ್ಳವುಗಳಾಗಿವೆ.

೧೯. ಹೀಗೆ ಸೋಮಯಾಜಿ ಮತ್ತು ಅಸೋಮಯಾಜಿ ಎಂದು ಎರಡು ಬಗೆಯ ಪಿತೃದೇವತೆಗಳು ಬ್ರಹ್ಮನ ಮಾನಸಪುತ್ರರಾಗಿರುವರು. ಆ ಪಿತೃಗಳಿಗೆ ಅಗ್ನಿಷ್ವಾತ್ತ ಮತ್ತು ಬರ್ಹಿಷದ ಎಂದು ಎರಡು ಬಗೆಯಾದ ವ್ಯವಸ್ಥೆಯು ರಚಿತವಾಗಿರುವುದು.

೨೦. ಆ ಪಿತೃದೇವತೆಗಳಿಂದ ಸ್ವಧಾದೇವಿಯು ಮೇನಾ, ಧಾರಿಣೀ ಎಂಬ ಇಬ್ಬರು ಕನ್ಯೆಯರನ್ನು ಪ್ರಸವಿಸಿದಳು. ಮುನಿಶ್ರೇಷ್ಠರೇ ! ಆ ಇಬ್ಬರು ಪುತ್ರಿಯರು ಮಹಾಯೋಗಿನಿಯರೂ ಮತ್ತು ಬ್ರಹ್ಮವಾದಿನಿಗಳೂ ಆಗಿದ್ದರು.

ಅಸೂತ ಮೇನಾ ಮೈನಾಕಂ ಕ್ರೌಂಚಂ ತಸ್ಯಾನುಜಂ ತಥಾ ।
ಗಂಗಾ ಹಿಮವತೋ ಜಜ್ಞೇ ಸರ್ವಲೋಕೈಕಪಾವನೀ ॥ ೨೧ ॥

ಸ್ವಯೋಗಾಗ್ನಿಬಲಾದ್ದೇವೀಂ ಪುತ್ರೀಂ ಲೇಭೇ ಮಹೇಶ್ವರೀಮ್ ।
ಯಥಾವತ್ಕಥಿತಂ ಪೂರ್ವಂ ದೇವ್ಯಾ ಮಾಹಾತ್ಮ್ಯಮುತ್ತಮಮ್ ॥೨೨॥

ಧಾರಿಣೀ ಮೇರುರಾಜಸ್ಯ ಪತ್ನೀ ಪದ್ಮಸಮಾನನಾ ।
ದೇವೌ ಧಾತಾವಿಧಾತಾರೌ ಮೇರೋರ್ಜಾಮಾತರಾವುಭೌ ॥ ೨೩ ॥

ಏಷಾ ದಕ್ಷಸ್ಯ ಕನ್ಯಾನಾಂ ಮಯಾಪತ್ಯಾನುಸಂತತಿಃ ।
ವ್ಯಾಖ್ಯಾತಾ ಭವತಾಂ ಸದ್ಯೋ ಮನೋಃ ಸೃಷ್ಟಿಂ ನಿಬೋಧತ ॥ ೨೪ ॥

ಇತಿ ಶ್ರೀ ಕೂರ್ಮಪುರಾಣೇ ತ್ರಯೋದಶೋಽಧ್ಯಾಯಃ

---

೨೧. ಅವರಲ್ಲಿ ಮೇನಾದೇವಿಯು ಮೈನಾಕಗಿರಿಯನ್ನೂ, ಅದಕ್ಕೆ ಸಹೋದರನಾದ ಕ್ರೌಂಚಗಿರಿಯನ್ನೂ ಪುತ್ರರನ್ನಾಗಿ ಹೊಂದಿದಳು. ಹಿಮವಂತನಿಂದ ಸರ್ವಲೋಕಗಳನ್ನು ಪಾವನಮಾಡುವ ಗಂಗಾನದಿಯು ಉದ್ಭವಿಸಿತು.

೨೨. ಮತ್ತು ಹಿಮವಂತನು ತನ್ನ ಯೋಗವೆಂಬ ಅಗ್ನಿ ಮಹಿಮೆಯಿಂದ ಈಶ್ವರನ ಪತ್ನಿಯಾದ ಸತೀದೇವಿಯನ್ನು ಪುತ್ರಿಯನ್ನಾಗಿ ಹೊಂದಿದನು. ಉತ್ತಮವಾದ ದೇವಿಯ ಮಾಹಾತ್ಮ್ಯವು ಯಥಾಸ್ಥಿತಿಯಾಗಿ ಹಿಂದೆ ವಿವರಿಸಲ್ಪಟ್ಟಿದೆ.

೨೩. ಪದ್ಮದಂತೆ ಸುಂದರವಾದ ಮುಖವುಳ್ಳ ಧಾರಿಣೀದೇವಿಯು ಮೇರುಗಿರಿರಾಜನ ಪತ್ನಿಯು. ಮತ್ತು ಧಾತ, ವಿಧಾತ ಎಂಬ ಇಬ್ಬರು ದೇವತೆಗಳು ಮೇರುವಿನ ಅಳಿಯಂದಿರು.

೨೪. ಮುನಿಗಳೇ! ಈ ರೀತಿಯಾಗಿ ದಕ್ಷಬ್ರಹ್ಮನ ಕನ್ಯೆಯರಲ್ಲಿ ಜನಿಸಿದ ಪ್ರಜಾಸಂತತಿಯು ನಿಮಗೆ ವಿವರಿಸಲ್ಪಟ್ಟಿದೆ. ಇನ್ನು ಮುಂದೆ ಮನುರಾಜನ ಸೃಷ್ಟಿಕ್ರಮವನ್ನು ತಿಳಿಯಿರಿ.

ಕೂರ್ಮ ಪುರಾಣದಲ್ಲಿ ಹದಿಮೂರನೆಯ ಅಧ್ಯಾಯವು ಮುಗಿದುದು.

---

ಶ್ರೀಃ

# ಕೂರ್ಮಪುರಾಣಂ



## ಚತುರ್ದಶೋಽಧ್ಯಾಯಃ

### (ಸ್ವಾಯಂಭುವ ಮನುವಂಶಃ)

**ಸೂತ ಉವಾಚ :—**

**ಪ್ರಿಯವ್ರತೋತ್ತಾನಪಾದೌ ಮನೋಃ ಸ್ವಾಯಂಭುವಸ್ಯ ತು ।**
**ಧರ್ಮಜ್ಞೌ ತೌ ಮಹಾವೀರ್ಯೌ ಶತರೂಪಾ ವ್ಯಜೀಜನತ್ ॥ ೧ ॥**

**ತತಸ್ತೂತ್ತಾನಪಾದಸ್ಯ ಧ್ರುವೋ ನಾಮ ಸುತೋಽಭವತ್ ।**
**ಭಕ್ತ್ಯಾ ನಾರಾಯಣೇ ದೇವೇ ಪ್ರಾಪ್ತವಾನ್ ಸ್ಥಾನಮುತ್ತಮಮ್ ॥೨॥**

---

## ಹದಿನಾಲ್ಕನೆಯ ಅಧ್ಯಾಯವು

೧. ಸೂತಮುನಿಯು ಇಂತೆಂದನು :—ಸ್ವಾಯಂಭುವ ಮನುವಿನ ಪತ್ನಿಯಾದ ಶತರೂಪಾ ಎಂಬುವಳು ಧರ್ಮವನ್ನರಿತವರೂ ಮಹಾವೀರ್ಯಸಂಪನ್ನರೂ ಆದ ಪ್ರಿಯವ್ರತ, ಉತ್ತಾನಪಾದ ಎಂಬ ಇಬ್ಬರು ಪುತ್ರರನ್ನು ಹೊಂದಿದಳು.

೨. ತರುವಾಯ ಉತ್ತಾನಪಾದರಾಯನ ಪುತ್ರನಾದ ಧ್ರುವನು ಮಹಾವಿಷ್ಣುವಿನಲ್ಲಿ ಅನನ್ಯ ಭಕ್ತಿಯನ್ನು ತೋರಿಸಿ ಶಾಶ್ವತವಾದ ಸ್ಥಾನವನ್ನು ಹೊಂದಿದನು.

ಧ್ರುವಾಚ್ಛಿಷ್ಟಿಶ್ಚ ಭಾವ್ಯಶ್ಚ ಭಾವ್ಯಾಚ್ಛಂಭುರ್ವ್ಯಜಾಯತ ।
ಶಿಷ್ಟೇರಾಧತ್ತ ಸುಚ್ಛಾಯಾ ಪಂಚ ಪುತ್ರಾನಕಲ್ಮಷಾನ್ ॥ ೩ ॥

ವಸಿಷ್ಠವಚನಾದ್ದೇವೀ ತಪಸ್ತಪ್ತ್ವಾ ಸುದುಶ್ಚರಮ್ ।
ಆರಾಧ್ಯ ಪುರುಷಂ ವಿಷ್ಣುಂ ಶಾಲಗ್ರಾಮೇ ಜನಾರ್ದನಮ್ ॥ ೪ ॥

ರಿಪುಂ ರಿಪುಂಜಯಂ ವಿಪ್ರಂ ಕಪಿಲಂ ವೃಷತೇಜಸಮ್ ।
ನಾರಾಯಣಪರಾನ್ ಶುದ್ಧಾನ್ ಸ್ವಧರ್ಮಪರಿಪಾಲಕಾನ್ ॥ ೫ ॥

ರಿಪೋರಾಧತ್ತ ಮಹಿಷೀ ಚಾಕ್ಷುಷಂ ಸರ್ವತೇಜಸಮ್ ।
ಸೋಽಜೀಜನತ್ ಪುಷ್ಕರಿಣ್ಯಾಂ ಸುರೂಪಂ ಚಾಕ್ಷುಷಂ ಮನುಮ್ ॥

---

೩. ಧ್ರುವನಿಂದ ಶಿಷ್ಟಿ ಮತ್ತು ಭಾವ್ಯ ಎಂಬ ಪುತ್ರರು ಜನಿಸಿದರು. ಭಾವ್ಯನಿಗೆ ಶಂಭು ಎಂಬ ಪುತ್ರನು ಹುಟ್ಟಿದನು. ಸುಚ್ಛಾಯಾ ಎಂಬ ಸತಿಯು ತನ್ನ ಶಿಷ್ಟಿ ಎಂಬ ಪತಿಯಿಂದ ನಿರ್ದುಷ್ಟರಾದ ಐದು ಮಂದಿ ಪುತ್ರರನ್ನು ಹೊಂದಿದಳು.

೪. ಸುಚ್ಛಾಯಾದೇವಿಯು ವಸಿಷ್ಠಮಹರ್ಷಿಯ ಆಜ್ಞೆಯಂತೆ ಅತ್ಯುಗ್ರವಾದ ತಪಸ್ಸನ್ನಾಚರಿಸಿ ಸಾಲಿಗ್ರಾಮಶಿಲೆಯಲ್ಲಿ ಪುರಾಣಪುರುಷನೂ, ವ್ಯಾಪಕನೂ ಆದ ಜನಾರ್ದನಸ್ವಾಮಿಯನ್ನು ಆರಾಧಿಸಿದಳು.

೫. ಆ ಪೂಜಾಮಹಿಮೆಯಿಂದ ಸ್ವಧರ್ಮವನ್ನು ಪಾಲಿಸುವವರೂ, ನಾರಾಯಣ ಭಕ್ತರೂ ಮತ್ತು ಪವಿತ್ರರೂ ಆದ ರಿಪು, ರಿಪುಂಜಯ ವಿಪ್ರ, ಕಪಿಲ ಮತ್ತು ವೃಷತೇಜ ಎಂಬ ಪುತ್ರರನ್ನು ಹೊಂದಿದಳು.

೬. ರಿಪು ಎಂಬುವನ ರಾಣಿಯು ಸರ್ವತೇಜ ಪೂರ್ಣನಾದ ಚಾಕ್ಷು ಎಂಬ ಪುತ್ರ ಗರ್ಭವನ್ನು ಧರಿಸಿದಳು. ಅವಳು ಪುಷ್ಕರಿಣೀ ತೀರದಲ್ಲಿ ಸುರೂಪನಾದ ಚಾಕ್ಷುಷ ಮನುವನ್ನು ಪ್ರಸವಿದಳು.

ಪ್ರಜಾಪತೇರಾತ್ಮಜಾಯಾಂ ವೀರಣಸ್ಯ ಮಹಾತ್ಮನಃ ।
ಮನೋರಜಾಯಂತ ದಶ ಸುತಾಸ್ತೇ ಸುಮಹೌಜಸಃ ॥ ೭ ॥

ಕನ್ಯಾಯಾಂ ಸುಮಹಾವೀರ್ಯಾ ವೈರಾಜಸ್ಯ ಪ್ರಜಾಪತೇಃ ।
ಊರುಃ ಪೂರುಃ ಶತದ್ಯುಮ್ನಸ್ತಪಸ್ವೀ ಸತ್ಯವಾಕ್ ಶುಚಿಃ ॥ ೮ ॥

ಅಗ್ನಿಷ್ಟುದತಿರಾತ್ರಶ್ಚ ಸುದ್ಯುಮ್ನಶ್ಚಾಭಿಮನ್ಯುಕಃ ।
ಊರೋರಜನಯತ್ಪುತ್ರಾನ್ ಷಡಾಗ್ನೇಯೀ ಮಹಾಬಲಾನ್ ॥ ೯ ॥

ಅಂಗಂ ಸುಮನಸಂ ಖ್ಯಾತಿಂ ಕ್ರತುಮಾಂಗಿರಸಂ ಶಿವಮ್ ।
ಅಂಗಾದ್ವೇನೋಽಭವತ್ಪಶ್ಚಾದ್ವೈನ್ಯೋ ವೇನಾದಜಾಯತ ॥ ೧೦ ॥

ಯೋಽಸೌ ಪೃಥುರಿತಿ ಖ್ಯಾತಃ ಪ್ರಜಾಪಾಲೋ ಮಹಾಬಲಃ ।
ಯೇನ ದುಗ್ಧಾ ಮಹೀ ಪೂರ್ವಂ ಪ್ರಜಾನಾಂ ಹಿತಕಾಮ್ಯಯಾ ॥ ೧೧ ॥

---

೭-೮. ಮಹಾತ್ಮನಾದ ವೀರಣ ಎಂಬ ಮನುವಿಗೆ ಬ್ರಹ್ಮ ಪುತ್ರಿಯಲ್ಲಿ ಮಹಾತೇಜಸ್ವಿಗಳಾದ ಹತ್ತು ಮಂದಿ ಪುತ್ರರು ಜನಿಸಿದರು. ವೈರಾಜನೆಂಬ ಪ್ರಜಾಪತಿಯ ಕನ್ಯೆಯಲ್ಲಿ ಹುಟ್ಟಿದ ಮಹಾವೀರಸಂಪನ್ನರಾದ ಪುತ್ರರಲ್ಲಿ ಊರು, ಪೂರು, ಶತದ್ಯುಮ್ನ ತಪಸ್ವಿ, ಸತ್ಯವಾಕ್ ಮತ್ತು ಶುಚಿ ಎಂಬುವರು ಸೇರಿರುವರು.

೯. ಮತ್ತು ಅಗ್ನಿಷ್ಟುತ-ಅತಿರಾತ್ರ-ಸುದ್ಯುಮ್ನ ಮತ್ತು ಅಭಿಮನ್ಯು ಎಂಬುವರು ಸೇರಿ ಹತ್ತು ಮಂದಿ ಪ್ರಸಿದ್ಧರಾಗಿರುವರು. ಆಗ್ನೇಯಿ ಎಂಬುವಳು ಊರು ಎಂಬುವನಿಂದ ಮಹಾಬಲಿಷ್ಠರಾದ ಆರು ಮಂದಿ ಪುತ್ರರನ್ನು ಹೊಂದಿದಳು.

೧೦. ಆ ಆರು ಮಂದಿಯು ಅಂಗ-ಸುಮನ-ಖ್ಯಾತಿ-ಕ್ರತು-ಅಂಗಿರಸ ಮತ್ತು ಶಿವ ಎಂಬ ನಾಮಾಂಕಿತರಾಗಿದ್ದರು. ಇವರಲ್ಲಿ ಅಂಗ ಎಂಬುವನಿಂದ ವೇನರಾಜನು ಜನಿಸಿದನು. ತರುವಾಯ ಆ ವೇನರಾಜನಿಂದ ವೈನ್ಯರಾಜನು ಜನಿಸಿದನು.

೧೧. ಆ ವೈನ್ಯರಾಜನು ಮಹಾಬಲಿಷ್ಠನೂ, ಪ್ರಜಾಪಾಲಕನೂ ಆದ ಪೃಥುರಾಜನೆಂದು ಪ್ರಸಿದ್ಧನಾಗಿದ್ದನು. ಅವನಿಂದ ಸಮಸ್ತ ಪ್ರಜೆಗಳ ಹಿತಾಕಾಂಕ್ಷೆಯಿಂದ ಗೋರೂಪವಾದ ಭೂಮಿಯು ಕರೆಯಲ್ಪಟ್ಟಿತು.

ನಿಯೋಗಾದ್ಬ್ರಹ್ಮಣಃ ಸಾರ್ಧಂ ದೇವೇಂದ್ರೇಣ ಮಹೌಜಸಾ ।
ವೇನಪುತ್ರಸ್ಯ ವಿತತೇ ಪುರಾ ಪೈತಾಮಹೇ ಮಖೇ । ॥ ೧೨ ॥

ಸೂತಃ ಪೌರಾಣಿಕೋ ಜಜ್ಞೇ ಮಾಯಾರೂಪಃ ಸ್ವಯಂ ಹರಿಃ ।
ಪ್ರವಕ್ತಾ ಸರ್ವಶಾಸ್ತ್ರಾಣಾಂ ಧರ್ಮಜ್ಞೋ ಗುರುವತ್ಸಲಃ ॥ ೧೩ ॥

ತಂ ಮಾಂ ವಿತ್ತ ಮುನಿಶ್ರೇಷ್ಠಾಃ ಪೂರ್ವೋದ್ಭೂತಂ ಸನಾತನಮ್ ।
ಅಸ್ಮಿನ್ ಮನ್ವಂತರೇ ವ್ಯಾಸಃ ಕೃಷ್ಣದ್ವೈಪಾಯನಃ ಸ್ವಯಮ್ ॥ ೧೪ ॥

ಶ್ರಾವಯಾಮಾಸ ಮಾಂ ಪ್ರೀತ್ಯಾ ಪುರಾಣಃ ಪುರುಷೋ ಹರಿಃ
ಮದನ್ವಯೇ ತು ಯೇ ಸೂತಾಃ ಸಂಭೂತಾ ವೇದವರ್ಜಿತಾಃ ॥ ೧೫ ॥

---

೧೨. ಪೂರ್ವದಲ್ಲಿ ಬ್ರಹ್ಮದೇವನ ಆಜ್ಞೆಯಂತೆ ಮಹಾವಿಕ್ರಮಶಾಲಿಯಾದ ದೇವೇಂದ್ರನೊಡನೆ ವೇನಪುತ್ರನಾದ ಪೃಥುರಾಜನಿಂದ ಮಹಾ ಬ್ರಹ್ಮಯಜ್ಞವು ಆಚರಿಸಲ್ಪಟ್ಟಿತು.

೧೩. ಆಗ ಮಾಯಾರೂಪದಿಂದ ಮಹಾವಿಷ್ಣುವು ಸರ್ವ ಶಾಸ್ತ್ರಾರ್ಥಗಳನ್ನು ಸಾಕ್ಷಾತ್ಕರಿಸಿ ಉಪದೇಶಿಸುವ ಧರ್ಮಜ್ಞನಾದ ಮತ್ತು ಗುರುವಿನಲ್ಲಿ ಪ್ರೇಮಿಯಾದ ಸೂತಮುನಿಯೆಂಬ ಪೌರಾಣಿಕನಾಗಿ ಆವಿರ್ಭವಿಸಿದನು.

೧೪. ಮುನಿಶ್ರೇಷ್ಠರೇ ! ಪೂರ್ವದಲ್ಲಿ ಹುಟ್ಟಿದ ಪುರಾಣಪುರುಷರೂಪಿಯಾದ ಆ ಸೂತಮುನಿಯು ನಾನೆಂದು ತಿಳಿಯಿರಿ. ಕೃಷ್ಣದ್ವೈಪಾಯನನಾಮಾಂಕಿತನಾದ ವ್ಯಾಸಮುನಿಯು ಈ ಮನ್ವಂತರದಲ್ಲಿ ನನಗೆ ಗುರುವಾಗಿರುವನು.

೧೫. ಪುರಾಣಪುರುಷನಾದ ಮಹಾವಿಷ್ಣುವಿನ ರೂಪಾಂತರವಾದ ಆ ವ್ಯಾಸ ಮುನಿಯು ಪ್ರೀತಿಯಿಂದ ನನಗೆ ಪುರಾಣಗಳನ್ನು ಶ್ರವಣಮಾಡಿಸಿದನು. ನನ್ನ ವಂಶದಲ್ಲಿ ಅನೇಕ ಮಂದಿ ಸೂತಾತ್ಮಜರು ವೇದಬಾಹ್ಯರಾಗಿ ಜನಿಸಿರುವರು.

ತೇಷಾಂ ಪುರಾಣವಕ್ತೃತ್ವಂ ವೃತ್ತಿರಾಸೀದಜಾಜ್ಞಯಾ ।
ಸ ಚ ವೈನ್ಯಃ ಪೃಥುರ್ಧೀಮಾನ್ ಸತ್ಯಸಂಧೋ ಜಿತೇಂದ್ರಿಯಃ ॥ ೧೬ ॥

ಸಾರ್ವಭೌಮೋ ಮಹಾತೇಜಾಃ ಸ್ವಧರ್ಮಪರಿಪಾಲಕಃ ।
ತಸ್ಯ ಬಾಲ್ಯಾತ್ಪ್ರಭೃತ್ಯೇವ ಭಕ್ತಿರ್ನಾರಾಯಣೇಽಭವತ್ ॥ ೧೭ ॥

ಗೋವರ್ಧನಗಿರಿಂ ಪ್ರಾಪ್ತಸ್ತಪಸ್ತೇಪೇ ಜಿತೇಂದ್ರಿಯಃ ।
ತಪಸಾ ಭಗವಾನ್ ಪ್ರೀತಃ ಶಂಖಚಕ್ರಗದಾಧರಃ ॥ ೧೮ ॥

ಆಗತ್ಯ ದೇವೋ ರಾಜಾನಂ ಪ್ರಾಹ ದಾಮೋದರಃ ಸ್ವಯಮ್ ।
ಧಾರ್ಮಿಕೌ ರೂಪಸಂಪನ್ನೌ ಸರ್ವಶಸ್ತ್ರಭೃತಾಂ ವರೌ ॥ ೧೯ ॥

---

೧೬. ಬ್ರಹ್ಮದೇವನ ಆಜ್ಞಾನುಸಾರವಾಗಿ ಅವರಿಗೆ ಪುರಾಣಪ್ರವಚನವು ಪ್ರವೃತ್ತಿಯಾಗಿರುವುದು. ಆ ವೇನಪುತ್ರನಾದ ಪೃಥುರಾಜನು ಜ್ಞಾನಿಯೂ, ಸತ್ಯ ಮತ್ತು ಜಿತೇಂದ್ರಿಯನೂ ಆಗಿದ್ದನು.

೧೭. ಮತ್ತು ಸಮಸ್ತ ಭೂಮಂಡಲಾಧಿಪತಿಯೂ ಮಹಾವಿಕ್ರಮಸಂಪನ್ನನೂ ಸ್ವಧರ್ಮಪಾಲಕನೂ ಆದ ಸಾರ್ವಭೌಮನಾಗಿದ್ದನು. ಅವನಿಗೆ ಬಾಲ್ಯ ಮೊದಲುಗೊಂಡು ನಾರಾಯಣನಲ್ಲಿ ಅತಿಶಯವಾದ ಭಕ್ತಿ ಇತ್ತು.

೧೮. ಆ ರಾಜನು ಗೋವರ್ಧನಗಿರಿಯನ್ನು ಹೊಂದಿ ಇಂದ್ರಿಯ ವ್ಯಾಪಾರಗಳನ್ನು ನಿಗ್ರಹಿಸಿ ತಪಸ್ಸನ್ನು ಆಚರಿಸಿದನು. ಆಗ ಶಂಖ-ಚಕ್ರ-ಗದೆಗಳನ್ನು ಧರಿಸಿದವನೂ, ಪೂಜ್ಯನೂ ಆದ ಮಹಾವಿಷ್ಣುವು ಅವನ ತಪಸ್ಸಿಗೆ ಮೆಚ್ಚಿದನು.

೧೯. ಮತ್ತು ದೀಪ್ಯಮಾನನಾದ ಮಹಾವಿಷ್ಣುವು ರಾಜನ ಸಮೀಪಕ್ಕೆ ಪ್ರತ್ಯಕ್ಷವಾಗಿ ಬಂದು ಧಾರ್ಮಿಕರೂ, ರೂಪವಂತರೂ, ಸಮಸ್ತ ಶಸ್ತ್ರ ವಿದ್ಯೆಯಲ್ಲಿ ನಿಪುಣರೂ ಆದ ಪುತ್ರರನ್ನು ಹೊಂದುವಂತೆ ವರವನ್ನು ಕೊಟ್ಟನು.

ಮತ್ಪ್ರಸಾದಾದಸಂದಿಗ್ಧೌ ಪುತ್ರೌ ತವ ಭವಿಷ್ಯತಃ ।
ಏವಮುಕ್ತ್ವಾ ಹೃಷೀಕೇಶಃ ಸ್ವಕೀಯಾಂ ಪ್ರಕೃತಿಂ ಗತಃ ॥ ೨೦ ॥

ವೈನ್ಯೋಽಪಿ ವೇದವಿಧಿನಾ ನಿಶ್ಚಲಾಂ ಭಕ್ತಿಮುದ್ವಹನ್ ।
ಸೋಽಪಾಲಯತ್ ಸ್ವಕಂ ರಾಜ್ಯಂ ಚಿಂತಯನ್ ಮಧುಸೂದನಮ್ ॥

ಅಚಿರಾದೇವ ತನ್ವಂಗೀ ಭಾರ್ಯಾ ತಸ್ಯ ಶುಚಿಸ್ಮಿತಾ ।
ಶಿಖಂಡಿನಂ ಹವಿರ್ಧಾನಮಂತರ್ಧಾನಾದ್ವ್ಯಜಾಯತ ॥ ೨೨ ॥

ಶಿಖಂಡಿನೋಽಭವತ್ಪುತ್ರಃ ಸುಶೀಲ ಇತಿ ವಿಶ್ರುತಃ ।
ಧಾರ್ಮಿಕೋ ರೂಪಸಂಪನ್ನೋ ವೇದವೇದಾಂಗಪಾರಗಃ ॥ ೨೩ ॥

---

೨೦. ರಾಜನೇ! ನನ್ನ ಅನುಗ್ರಹದಿಂದ ನಿಸ್ಸಂದೇಹವಾಗಿ ಹಿಂದೆ ಹೇಳಿದ ಗುಣಗಳಿಂದ ಕೂಡಿದ ಇಬ್ಬರು ಪುತ್ರರು ಜನಿಸುವರು. ಹೀಗೆಂದು ಹೇಳಿ ಮಹಾ ವಿಷ್ಣುವು ಅದೃಶ್ಯಾವಸ್ಥೆಯನ್ನು ಹೊಂದಿದನು.

೨೧. ವೈನ್ಯರಾಜನು ವೇದೋಕ್ತವಾದ ವಿಧಾನದಿಂದ ಅಚಂಚಲವಾದ ಭಕ್ತಿಯನ್ನಿಟ್ಟು ಮಧುದಾನವನನ್ನು ಸಂಹರಿಸಿದ ಮಹಾವಿಷ್ಣುವನ್ನು ಸ್ಮರಿಸುತ್ತಾ ತನ್ನ ರಾಜ್ಯವನ್ನು ಪಾಲಿಸಿದನು.

೨೨. ಪರಿಶುದ್ಧವಾದ ಮಂದಹಾಸವುಳ್ಳ ಮತ್ತು ಕೃಶಾಂಗಿಯಾದ ಆವನ ಭಾರ್ಯೆಯು ಶಿಖಂಡಿ ಮತ್ತು ಹವಿರ್ಧಾನ ಎಂಬ ಪುತ್ರರನ್ನು ಅಂತರ್ಧಾನಾವಸ್ಥೆಯಲ್ಲಿ ಹೊಂದಿದಳು.

೨೩. ಆ ಶಿಖಂಡಿಗೆ ಧಾರ್ಮಿಕನೂ, ರೂಪವಂತನೂ, ವೇದ ಮತ್ತು ವೇದಾಂಗದಲ್ಲಿ ನಿಷ್ಣಾತನೂ ಮತ್ತು ಸುಶೀಲ ಎಂಬ ಹೆಸರಿನಿಂದ ಪ್ರಸಿದ್ಧನೂ ಆದ ಪುತ್ರನಿದ್ದನು.

ಸೋಽಧೀತ್ಯ ವಿಧಿವದ್ವೇದಾನ್ ಧರ್ಮೇಣ ತಪಸಿ ಸ್ಥಿತಃ ।
ಮತಿಂ ಚಕ್ರೇ ಭಾಗ್ಯಯೋಗಾತ್ ಸನ್ನ್ಯಾಸಂ ಪ್ರತಿ ಧರ್ಮವಿತ್ ॥ ೨೪ ॥

ಸ ಕೃತ್ವಾ ತೀರ್ಥಸಂಸೇವಾಂ ಸ್ವಾಧ್ಯಾಯೇ ತಪಸಿ ಸ್ಥಿತಃ ।
ಜಗಾಮ ಹಿಮವತ್ಪೃಷ್ಠಂ ಕದಾಚಿತ್ಸಿದ್ಧಸೇವಿತಮ್ ॥ ೨೫ ॥

ತತ್ರ ಧರ್ಮವನಂ ನಾಮ ಧರ್ಮಸಿದ್ಧಿಪ್ರದಂ ವನಮ್ ।
ಅಪಶ್ಯದ್ಯೋಗಿನಾಂ ಗಮ್ಯಮಗಮ್ಯಂ ಬ್ರಹ್ಮವಿದ್ವಿಷಾಮ್ ॥ ೨೬ ॥

ತತ್ರ ಮಂದಾಕಿನೀ ನಾಮ ಸುಪುಣ್ಯಾ ವಿಮಲಾ ನದೀ ।
ಪದ್ಮೋತ್ಪಲವನೋಪೇತಾ ಸಿದ್ಧಾಶ್ರಮವಿಭೂಷಿತಾ ॥ ೨೭ ॥

---

೨೪. ಧರ್ಮಜ್ಞನಾದ ಆ ಸುಶೀಲನು ಯಥಾವಿಧಿಯಾಗಿ ವೇದಗಳನ್ನು ಅಭ್ಯಾಸಮಾಡಿ ಧರ್ಮಮಾರ್ಗದಿಂದ ತಪಶ್ಚರ್ಯೆಯಲ್ಲಿ ನಿರತನಾಗಿದ್ದು ಉತ್ತಮ ಭಾಗ್ಯಯೋಗದಿಂದ ಸನ್ಯಾಸಾಶ್ರಮದಲ್ಲಿ ಸಂಕಲ್ಪವನ್ನಿಟ್ಟನು.

೨೫. ಅವನು ಅನೇಕ ತೀರ್ಥಯಾತ್ರೆಯನ್ನು ಮಾಡಿ ವೇದಾಧ್ಯಯನದಲ್ಲಿಯೂ ತಪಶ್ಚರ್ಯೆಯಲ್ಲಿಯೂ ನಿರತನಾಗಿ ಒಂದು ವೇಳೆ ಸಿದ್ಧಜನರಿಂದ ಸೇವಿಸಲ್ಪಟ್ಟಿರುವ ಹಿಮವತ್ಪರ್ವತದ ಶಿಖರಕ್ಕೆ ತೆರಳಿದನು.

೨೬. ಅಲ್ಲಿ ಧರ್ಮಾಚರಣೆಯ ಸಿದ್ಧಿಯನ್ನುಂಟುಮಾಡುವುದು ಯೋಗಿಜನರಿಗೆ ಮಾತ್ರ ಪ್ರಾಪ್ಯವೂ ಮತ್ತು ಬ್ರಹ್ಮದ್ವೇಷಿಗಳಿಗೆ ಅದೃಶ್ಯವೂ ಆದ ಧರ್ಮವನ ಎಂಬ ಹೆಸರಿನ ಪುಣ್ಯಾರಣ್ಯವನ್ನು ಕಂಡನು.

೨೭. ಆ ಧರ್ಮವನದಲ್ಲಿ ತಾವರೆ ಕನ್ನೈದಲೆಗಳ ಗುಂಪಿನಿಂದ ಕೂಡಿ ಅನೇಕ ಸಿದ್ಧಾಶ್ರಮಗಳಿಂದ ಶೃಂಗರಿಸಲ್ಪಟ್ಟ ಅತಿ ಪವಿತ್ರವಾದ ಮತ್ತು ನಿರ್ಮಲವಾದ ಮಂದಾಕಿನೀ ನದಿಯು ಹರಿಯುತ್ತಿತ್ತು.

ಸ ತಸ್ಯಾ ದಕ್ಷಿಣೇ ತೀರೇ ಮುನೀಂದ್ರೈರ್ಯೋಗಿಭಿರ್ಯುತಮ್ ।
ಸುಪುಣ್ಯಮಾಶ್ರಮಂ ರಮ್ಯಮಪಶ್ಯತ್ಪ್ರೀತಿಸಂಯುತಃ ॥ ೨೮ ॥

ಮಂದಾಕಿನೀಜಲೇ ಸ್ನಾತ್ವಾ ಸಂತರ್ಪ್ಯ ಪಿತೃದೇವತಾಃ ।
ಅರ್ಚಯಿತ್ವಾ ಮಹಾದೇವಂ ಪುಷ್ಪೈಃ ಪದ್ಮೋತ್ಪಲಾದಿಭಿಃ ॥ ೨೯ ॥

ಧ್ಯಾತ್ವಾರ್ಕಸಂಸ್ಥಮೀಶಾನಂ ಶಿರಸ್ಯಾಧಾಯ ಚಾಂಜಲಿಮ್ ।
ಸಂಪ್ರೇಕ್ಷಮಾಣೋ ಭಾಸ್ವಂತಂ ತುಷ್ಟಾವ ಪರಮೇಶ್ವರಮ್ ॥ ೩೦ ॥

ರುದ್ರಾಧ್ಯಾಯೇನ ಗಿರಿಶಂ ರುದ್ರಸ್ಯ ಚರಿತೇನ ಚ ।
ಅನ್ಯೈಶ್ಚ ವಿವಿಧೈಃ ಸ್ತೋತ್ರೈಃ ಶಾಂಭವೈರ್ವೇದಸಂಭವೈಃ ॥ ೩೧ ॥

---

೨೮ ಆ ಸುಶೀಲನು ಅಲ್ಲಿ ಬಹಳ ಆನಂದಪಟ್ಟವನಾಗಿ ಆ ಮಂದಾಕಿನೀ ನದಿಯ ದಕ್ಷಿಣಭಾಗದ ತೀರದಲ್ಲಿ ಮುನೀಂದ್ರರಿಂದಲೂ, ಯೋಗಿಗಳಿಂದಲೂ ಕೂಡಿದ ರಮಣೀಯವಾದ ಒಂದು ಪುಣ್ಯಾಶ್ರಮವನ್ನು ಕಂಡನು.

೨೯. ಅಲ್ಲಿ ತಾನು ಗಂಗಾನದಿಯ ತೀರ್ಥದಲ್ಲಿ ಸ್ನಾನಮಾಡಿ ಪಿತೃದೇವತೆಗಳಿಗೆ ತರ್ಪಣಾಂಜಲಿಯನ್ನು ಕೊಟ್ಟು ತಾವರೆ-ನೈದಿಲೆ ಮುಂತಾದ ಪುಷ್ಪಗಳಿಂದ ಪರಮಶಿವನನ್ನು ಅರ್ಚಿಸಿದನು.

೩೦. ಆಗ ಈಶ್ವರನನ್ನು ಸೂರ್ಯಮಂಡಲದಲ್ಲಿದ್ದಂತೆ ಧ್ಯಾನಿಸಿ ಶಿರಸ್ಸಿನಲ್ಲಿ ಪ್ರಣಾಮಾಂಜಲಿಯನ್ನು ಇಟ್ಟುಕೊಂಡು ಸೂರ್ಯಬಿಂಬವನ್ನು ದೃಷ್ಟಿಸಿ ನೋಡುತಾ ಪರಮೇಶ್ವರನನ್ನು ಸ್ತುತಿಸಿದನು.

೩೧. ರುದ್ರಾಧ್ಯಾಯದಿಂದಲೂ ರುದ್ರನ ಚರಿತ್ರಪ್ರಶಂಸೆಗಳಿಂದಲೂ ಮತ್ತು ವೇದಗಳಲ್ಲಿ ದೊರಕುವ ರುದ್ರನ ಸಂಬಂಧವಾದ ವಿವಿಧವಾದ ಇತರ ಸ್ತೋತ್ರಗಳಿಂದಲೂ ರುದ್ರಮೂರ್ತಿಯನ್ನು ಸ್ತುತಿಸಿದನು.

ಅಥಾಸ್ಮಿನ್ನಂತರೇಽಪಶ್ಯತ್ ಸಮಾಯಾಂತಂ ಮಹಾಮುನಿಮ್ ।
ಶ್ವೇತಾಶ್ವತರನಾಮಾನಂ ಮಹಾಪಾಶುಪತೋತ್ತಮಮ್ ॥ ೩೨ ॥

ಭಸ್ಮಸಂದಿಗ್ಧಸರ್ವಾಂಗಂ ಕೌಪೀನಾಚ್ಛಾದನಾನ್ವಿತಮ್ ।
ತಪಸಾ ಕರ್ಶಿತಾತ್ಮಾನಂ ಶುಕ್ಲಯಜ್ಞೋಪವೀತಿನಮ್ ॥ ೩೩ ॥

ಸಮಾಪ್ಯ ಸಂಸ್ತವಂ ಶಂಭೋರಾನಂದಾಸ್ರಾವಿತೇಕ್ಷಣಃ ।
ವವಂದೇ ಶಿರಸಾ ಪಾದೌ ಪ್ರಾಂಜಲಿರ್ವಾಕ್ಯಮಬ್ರವೀತ್ ॥ ೩೪ ॥

ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯನ್ಮೇ- ಸಾಕ್ಷಾನ್ಮುನೀಶ್ವರ ।
ಯೋಗೀಶ್ವರೋಽದ್ಯ ಭಗವಾನ್ ದೃಷ್ಟೋ ಯೋಗವಿದಾಂ ವರಃ ॥

---

೩೨. ಹೀಗೆ ಸ್ತೋತ್ರಮಾಡುತ್ತಿದ್ದ ಸಮಯದಲ್ಲಿ ಅಲ್ಲಿಗೆ ಬರುತ್ತಿದ್ದ ಮಹಾ ಪಾಶುಪತವ್ರತಧಾರಿಗಳಲ್ಲಿ ಉತ್ತಮನಾದ, ಶ್ವೇತಾಶ್ವತರ ಎಂಬ ಪವಿತ್ರ ನಾಮಾಂಕಿತ ನಾದ ಮಹಾಮುನಿಯನ್ನು ಕಂಡನು.

೩೩. ಆ ಶ್ವೇತಾಶ್ವತರ ಮುನಿಯು ಭಸ್ಮದಿಂದ ಲೇಪಿಸಿದ ಸರ್ವಾವಯವ ವುಳ್ಳವನೂ, ಕೌಪೀನವೆಂಬ ಆಚ್ಛಾದನದಿಂದ ಕೂಡಿದವನೂ, ತಪಸ್ಸಿನಿಂದ ದೇಹ ವನ್ನು ಕೃಶಮಾಡಿದವನೂ ಮತ್ತು ಶುಭ್ರವಾದ ಯಜ್ಞೋಪವೀತವನ್ನು ಧರಿಸಿ ದವನೂ ಆಗಿದ್ದನು.

೩೪. ಆಗ ಮಹಾದೇವನ ಸ್ತೋತ್ರವನ್ನು ಮುಗಿಸಿ ಆನಂದಬಾಷ್ಪವನ್ನು ಸುರಿಸುವ ನೇತ್ರವುಳ್ಳವನಾಗಿ ತಲೆಬಾಗಿಸಿ ಆ ಮುನಿಯ ಚರಣಗಳನ್ನು ವಂದಿಸಿದನು. ಮತ್ತು ಬದ್ಧಾಂಜಲಿಯಾಗಿ ಈ ವಚನವನ್ನು ಹೇಳಿದನು.

೩೫. ಮುನೀಶ್ವರನೇ ! ಯೋಗಜ್ಞಾನಿಗಳಲ್ಲಿ ವರೇಣ್ಯನೂ, ಯೋಗೀಶ್ವರನೂ ಮತ್ತು ಪೂಜ್ಯನೂ ಆದ ನೀನು ನನ್ನಿಂದ ಪ್ರತ್ಯಕ್ಷವಾಗಿ ಸಂದರ್ಶಿಸಲ್ಪಟ್ಟಿರುವುದರಿಂದ ಈಗ ನಾನು ಧನ್ಯನಾಗಿದ್ದೇನೆ, ಮತ್ತು ನಿನ್ನಿಂದ ಅನುಗ್ರಹಿಸಲ್ಪಟ್ಟಿದ್ದೇನೆ.

ಅಹೋ ಮೇ ಸುಮಹದ್ಭಾಗ್ಯಂ ತಪಾಂಸಿ ಸಫಲಾನಿ ಮೇ ।
ಕಿಂ ಕರಿಷ್ಯಾಮಿ ಶಿಷ್ಯೋಽಹಂ ತವ ಮಾಂ ಪಾಲಯಾನಘ ॥ ೩೬ ॥

ಸೋಽನುಗೃಹ್ಯಾಥ ರಾಜಾನಂ ಸುಶೀಲಂ ಶೀಲಸಂಯುತಮ್ ।
ಶಿಷ್ಯತ್ವೇ ಪ್ರತಿಜಗ್ರಾಹ ತಪಸಾ ಕ್ಷೀಣಕಲ್ಮಷಮ್ ॥ ೩೭ ॥

ಸಾನ್ಯಾಸಿಕಂ ವಿಧಿಂ ಕೃತ್ಸ್ನಂ ಕಾರಯಿತ್ವಾ ವಿಚಕ್ಷಣಃ ।
ದದೌ ತದೈಶ್ವರಂ ಜ್ಞಾನಂ ಸ್ವಶಾಖಾವಿಹಿತವ್ರತಮ್ ॥ ೩೮ ॥

ಅಶೇಷಂ ವೇದಸಾರಂ ತತ್ಪಶುಪಾಶವಿಮೋಚನಮ್ ।
ಅಂತ್ಯಾಶ್ರಮಮಿತಿ ಖ್ಯಾತಂ ಬ್ರಹ್ಮಾದಿಭಿರನುಷ್ಠಿತಮ್ ॥ ೩೯ ॥

---

೩೬. ನಿಷ್ಕಳಂಕನಾದ ಮುನಿಯೇ ! ನನ್ನ ಮಹಾಭಾಗ್ಯವು ಆಶ್ಚರ್ಯಕರ ವಾಗಿದೆ. ನನ್ನ ಸಮಸ್ತ ತಪಶ್ಚರ್ಯಗಳು ಸಫಲವಾಗಿವೆ. ನಿನಗೆ ಶಿಷ್ಯನಾದ ನಾನು ಈಗೇನುಮಾಡಲಿ? ನನ್ನನ್ನು ರಕ್ಷಿಸುವವನಾಗು.

೩೭. ತರುವಾಯ ಆ ಮುನಿವರನು ತಪಸ್ಸಿನಿಂದ ಕಲ್ಮಶವನ್ನು ದೂರ ಮಾಡಿರುವ ಮತ್ತು ಸದಾಚಾರದಿಂದ ಕೂಡಿದ ಸುಶೀಲರಾಜನನ್ನು ಅನುಗ್ರಹಿಸಿ ಅವನನ್ನು ಶಿಷ್ಯನನ್ನಾಗಿ ಪರಿಗ್ರಹಿಸಿದನು.

೩೮. ಮತ್ತು ಜ್ಞಾನಿಯಾದ ಮುನಿಯು ಸನ್ಯಾಸಾಶ್ರಮಪ್ರಾಪ್ತಿಗೆ ಅವಶ್ಯಕ ವಾದ ಸಂಪೂರ್ಣ ವಿಧಾನವನ್ನು ಮಾಡಿಸಿ ತನ್ನ ಶಾಖೆಯಲ್ಲಿ ವಿಧಿಸಲ್ಪಟ್ಟ ವ್ರತಾದೇಶಗಳೊಡನೆ ಆ ಶಿಷ್ಯನಿಗೆ ಈಶ್ವರ ತತ್ವಜ್ಞಾನವನ್ನು ಉಪದೇಶಿಸಿದನು.

೩೯. ಆ ಜ್ಞಾನಮಾರ್ಗವು, ಸಂಪೂರ್ಣ ವೇದಗಳ ಸಾರಾಂಶವೂ, ಬ್ರಹ್ಮಾದಿ ಪಶುಗಳ ಪಾಶವಿಮೋಚನವೂ, ಬ್ರಹ್ಮನೇ ಮುಂತಾದವರಿಂದ ಆಚರಿಸಲ್ಪಟ್ಟಿದ್ದೂ ಮತ್ತು ಅಂತ್ಯಾಶ್ರಮವೆಂದು ಪ್ರಸಿದ್ಧವೂ ಆಗಿತ್ತು.

ಉವಾಚ ಶಿಷ್ಯಾನ್ ಸಂಪ್ರೇಕ್ಷ್ಯ ಯೇ ತದಾಶ್ರಮವಾಸಿನಃ ।
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಬ್ರಹ್ಮಚರ್ಯಪರಾಯಣಾಃ ॥ ೪೦ ॥

ಮಯಾ ಪ್ರವರ್ತಿತಾಂ ಶಾಖಾಮಧೀತ್ಯೈವೇಹ ಯೋಗಿನಃ ।
ಸಮಾಸತೇ ಮಹಾದೇವ ಧ್ಯಾಯಂತೋ ವಿಶ್ವಮೈಶ್ವರಮ್ ॥ ೪೧ ॥

ಇಹ ದೇವೋ ಮಹಾದೇವೋ ರಮಮಾಣಃ ಸಹೋಮಯಾ ।
ಅಧ್ಯಾಸ್ತೇ ಭಗವಾನೀಶೋ ಭಕ್ತಾನಾಮನುಕಂಪಯಾ ॥ ೪೨ ॥

ಇಹಾಶೇಷಜಗದ್ಧಾತಾ ಪುರಾ ನಾರಾಯಣಃ ಸ್ವಯಮ್ ।
ಆರಾಧಯನ್ಮಹಾದೇವಂ ಲೋಕಾನಾಂ ಹಿತಕಾಮ್ಯಯಾ ॥ ೪೩ ॥

---

೪೦. ತರುವಾಯ ಆ ಮುನಿವರನು ತನ್ನ ಆಶ್ರಮದಲ್ಲಿ ವಾಸಿಸುವ ಬ್ರಹ್ಮಚರ್ಯ ವ್ರತದಲ್ಲಿ ಆಸಕ್ತರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯಜಾತಿಗೆ ಸೇರಿದ ಶಿಷ್ಯರನ್ನು ನೋಡಿ ಈ ರೀತಿಯಾಗಿ ಹೇಳಿದನು.

೪೧. ನನ್ನಿಂದ ಪ್ರವರ್ತಿಸಲ್ಪಟ್ಟ ವೇದಶಾಖಾವಿಶೇಷವನ್ನು ಅಧ್ಯಯನ ಮಾಡಿಸುತ್ತಾ ವಿಶ್ವರೂಪನಾದ ಮತ್ತು ದೇವೋತ್ತಮನಾದ ಈಶ್ವರನನ್ನು ಧ್ಯಾನಿಸುತ್ತಾ ಅನೇಕ ಯೋಗಿಗಳು ಇಲ್ಲಿ ವಾಸಮಾಡುತ್ತಾರೆ.

೪೨. ಈ ಪ್ರದೇಶದಲ್ಲಿ ಷಡ್ಗುಣೈಶ್ವರ್ಯಸಂಪನ್ನನೂ, ಸರ್ವೇಶ್ವರನೂ ಮತ್ತು ಸ್ವಾಮಿಯೂ, ಆದ ಮಹಾದೇವನು ಭಕ್ತಜನರನ್ನು ಅನುಗ್ರಹಿಸಲು ಪಾರ್ವತೀದೇವಿ ಯೊಡನೆ ಕ್ರೀಡಾವಿಹಾರಿಯಾಗಿ ವಾಸಿಸುತ್ತಿರುವನು.

೪೩. ಈ ಸ್ಥಳದಲ್ಲಿ ಪೂರ್ವಕಾಲದಲ್ಲಿ ಸಮಸ್ತ ಜಗತ್ತನ್ನು ಧರಿಸಿರುವ ನಾರಾಯಣನು ಸರ್ವಲೋಕಗಳಿಗೆ ಹಿತವು ಉಂಟಾಗಲೆಂಬ ಅಭಿಲಾಷೆಯಿಂದ ತಾನಾಗಿ ಮಹಾದೇವನನ್ನು ಆರಾಧಿಸಿದನು.

ಇಹೈನಂ ದೇವಮೀಶಾನಂ ದೇವಾನಾಮಪಿ ದೈವತಮ್ ।
ಆರಾಧ್ಯ ಮಹತೀಂ ಸಿದ್ಧಿಂ ಲೇಭಿರೇ ದೇವದಾನವಾಃ ॥ ೪೪ ॥

ಇಹೈವ ಮುನಯಃ ಸರ್ವೇ ಮರೀಚಾದ್ಯಾ ಮಹೇಶ್ವರಮ್ ।
ದೃಷ್ಟ್ವಾ ತಪೋಬಲಾಜ್ಜ್ಞಾನಂ ಲೇಭಿರೇ ಸಾರ್ವಕಾಲಿಕಮ್ ॥ ೪೫ ॥

ತಸ್ಮಾತ್ತ್ವಮಪಿ ರಾಜೇಂದ್ರ ತಪೋಯೋಗಸಮನ್ವಿತಃ ।
ತಿಷ್ಠ ನಿತ್ಯಂ ಮಯಾ ಸಾರ್ಧಂ ತತಃ ಸಿದ್ಧಿಮವಾಪ್ಸ್ಯಸಿ ॥ ೪೬ ॥

ಏವಮಾಭಾಷ್ಯ ವಿಪ್ರೇಂದ್ರೋ ದೇವಂ ಧ್ಯಾತ್ವಾ ಪಿನಾಕಿನಮ್ ।
ಆಚಚಕ್ಷೇ ಮಹಾಮಂತ್ರಂ ಯಥಾವತ್ಸರ್ವಸಿದ್ಧಯೇ ॥ ೪೭ ॥

---

೪೪. ಮತ್ತು ಈ ಸ್ಥಳದಲ್ಲಿ ಅನೇಕ ದೇವ-ದಾನವರು ದೇವತೆಗಳಿಗೆಲ್ಲ ದೇವತೆಯೂ, ಸರ್ವೇಶ್ವರನೂ ಆದ ಶಂಕರಸ್ವಾಮಿಯನ್ನು ಆರಾಧಿಸಿ ಮಹಾಸಿದ್ಧಿಗಳನ್ನು ಹೊಂದಿರುವರು.

೪೫. ಮತ್ತು ಈ ಪ್ರದೇಶದಲ್ಲಿಯೇ ಮರೀಚಿ ಮುಂತಾದ ಮಹಾಮುನಿಗಳು ತಮ್ಮ ತಪೋಮಹಿಮೆಯಿಂದ ಮಹೇಶ್ವರನನ್ನು ಸಾಕ್ಷಾತ್ಕರಿಸಿ ಎಲ್ಲಾ ಕಾಲಗಳಲ್ಲಿಯೂ ಲೋಪವಾಗದಿರುವ ತತ್ವಜ್ಞಾನವನ್ನು ಹೊಂದಿದರು.

೪೬. ರಾಜೇಂದ್ರನೇ! ಆದುದರಿಂದ ನೀನು ಕೂಡ ತಪಸ್ಸು ಮತ್ತು ಯೋಗಾಭ್ಯಾಸಗಳಿಂದ ಕೂಡಿದವನಾಗಿ ಯಾವಾಗಲೂ ನನ್ನೊಡನೆ ವಾಸಮಾಡು. ಅದರಿಂದ ಉತ್ತಮವಾದ ಸಿದ್ಧಿಯನ್ನು ಹೊಂದುತ್ತೀ.

೪೭. ಬ್ರಾಹ್ಮಣೋತ್ತಮನಾದ ಮಹಾಮುನಿಯು ಹೀಗೆಂದು ಹೇಳಿ ಪಿನಾಕಾಯುಧವನ್ನು ಧರಿಸಿದ ಮಹೇಶ್ವರನನ್ನು ಧ್ಯಾನಿಸಿ ಸರ್ವ ಕಾಮಗಳ ಸಿದ್ಧಿಗೋಸ್ಕರ ಯಥಾವತ್ತಾಗಿ ಶಿವ ಮಹಾಮಂತ್ರವನ್ನು ಉಪದೇಶಿಸಿದನು.

ಸರ್ವಪಾಪೋಪಶಮನಂ ವೇದಸಾರಂ ವಿಮುಕ್ತಿದಮ್ ।
ಅಗ್ನಿರಿತ್ಯಾದಿಕಂ ಪುಣ್ಯಮೃಷಿಭಿಃ ಸಂಪ್ರವರ್ತಿತಮ್ ॥ ೪೮ ॥

ಸೋಽಪಿ ತದ್ವಚನಾದ್ರಾಜಾ ಸುಶೀಲಃ ಶ್ರದ್ಧಯಾನ್ವಿತಃ ।
ಸಾಕ್ಷಾತ್ಪಾಶುಪತೋ ಭೂತ್ವಾ ವೇದಾಭ್ಯಾಸರತೋಽಭವತ್ ॥ ೪೯ ॥

ಭಸ್ಮೋದ್ಧೂಲಿತಸರ್ವಾಂಗಃ ಕಂದಮೂಲಫಲಾಶನಃ ।
ಶಾಂತೋ ದಾಂತೋ ಜಿತಕ್ರೋಧಃ ಸನ್ಯಾಸವಿಧಿಮಾಶ್ರಿತಃ ॥ ೫೦ ॥

ಹವಿರ್ಧಾನಸ್ತಥಾಗ್ನೇಯ್ಯಾಂ ಜನಯಾಮಾಸ ವೈ ಸುತಮ್ ।
ಪ್ರಾಚೀನಬರ್ಹಿಷಂ ನಾಮ್ನಾ ಧನುರ್ವೇದಸ್ಯ ಪಾರಗಮ್ ॥ ೫೧ ॥

---

೪೮. "ಅಗ್ನಿರಿತಿ" ಮುಂತಾದ ಆ ಮಹಾಮಂತ್ರವು ಸಮಸ್ತ ಪಾಪಗಳನ್ನು ಶಮನಮಾಡುವುದೂ, ವೇದಗಳಲ್ಲಿ ಸಾರರೂಪವಾದುದೂ ಮೋಕ್ಷವನ್ನು ಕೊಡುವುದೂ ಮತ್ತು ಪವಿತ್ರವೂ ಆಗಿ ಮಹರ್ಷಿಗಳಿಂದ ಸಂಪ್ರದಾಯಬದ್ಧವಾಗಿ ಪ್ರವರ್ತಿಸಲ್ಪಟ್ಟಿತು.

೪೯. ಆ ಸುಶೀಲನೆಂಬ ರಾಜನು ಮಹಾಮುನಿಯ ವಚನದಂತೆ ಶ್ರದ್ಧೆಯಿಂದ ಕೂಡಿದವನಾಗಿ ಪ್ರತ್ಯಕ್ಷವಾಗಿ ಪಾಶುಪತವ್ರತಧಾರಿಯಾಗಿ ವೇದಾಭ್ಯಾಸದಲ್ಲಿ ನಿರತನಾದನು.

೫೦. ಮತ್ತು ಭಸ್ಮದಿಂದ ಲೇಪಿಸಿದ ಸರ್ವಾಂಗವುಳ್ಳವನೂ ಕಂದಮೂಲಫಲ ಮುಂತಾದ ಪುಣ್ಯಾಹಾರವನ್ನು ಸ್ವೀಕರಿಸುವವನೂ, ಶಾಂತನೂ, ಜಿತೇಂದ್ರಿಯನೂ, ಕ್ರೋಧರಹಿತನೂ ಆಗಿ ಸನ್ಯಾಸ ಧರ್ಮವನ್ನು ಆಶ್ರಯಿಸಿದನು.

೫೧. ಹವಿರ್ಧಾನನೆಂಬುವನು ಆಗ್ನೇಯಿ ಎಂಬ ಪತ್ನಿಯಲ್ಲಿ ಧನುರ್ವೇದದಲ್ಲಿ ಪಾರಂಗತನಾದ ಪ್ರಾಚೀನಬರ್ಹಿ ಎಂಬ ಸಂಜ್ಞೆಯಿಂದ ಅಂಕಿತನಾದ ಒಬ್ಬ ಪುತ್ರನನ್ನು ಹೊಂದಿದನು.

ಪ್ರಾಚೀನಬರ್ಹಿರ್ಭಗವಾನ್ ಸರ್ವಶಸ್ತ್ರಭೃತಾಂ ವರಃ ।
ಸಮುದ್ರತನಯಾಯಾಂ ವೈ ದಶ ಪುತ್ರಾನಜೀಜನತ್ ॥ ೫೨ ॥

ಪ್ರಚೇತಸಸ್ತೇ ವಿಖ್ಯಾತಾ ರಾಜಾನಃ ಪ್ರಥಿತೌಜಸಃ ।
ಅಧೀತವಂತಃ ಸ್ವಂ ವೇದಂ ನಾರಾಯಣಪರಾಯಣಾಃ ॥ ೫೩ ॥

ದಶಭ್ಯಸ್ತು ಪ್ರಚೇತೋಭ್ಯೋ ಮಾರಿಷಾಯಾಂ ಪ್ರಜಾಪತಿಃ ।
ದಕ್ಷೋ ಜಜ್ಞೇ ಮಹಾಭಾಗೋ ಯಃ ಪೂರ್ವಂ ಬ್ರಹ್ಮಣಃ ಸುತಃ ॥೫೪॥

ಸ ತು ದಕ್ಷೋ ಮಹೇಶೇನ ರುದ್ರೇಣ ಸಹ ಧೀಮತಾ ।
ಕೃತ್ವಾ ವಿವಾದಂ ರುದ್ರೇಣ ಶಪ್ತಃ ಪ್ರಾಚೇತಸೋಽಭವತ್ ॥ ೫೫ ॥

---

೫೨. ಸಮಸ್ತ ಶಸ್ತ್ರಧಾರಿಗಳಲ್ಲಿ ಅಗ್ರಗಣ್ಯನೂ, ಪರಮಪೂಜ್ಯನೂ ಆದ ಆ ಪ್ರಾಚೀನಬರ್ಹಿಯು ಸಮುದ್ರರಾಜನ ಪುತ್ರಿಯಲ್ಲಿ ಹತ್ತು ಮಂದಿ ಪುತ್ರರನ್ನು ಪಡೆದನು.

೫೩. ಆ ಹತ್ತು ಮಂದಿ ಪುತ್ರರು ವಿಖ್ಯಾತವಾದ ವಿಕ್ರಮವುಳ್ಳ, ಪ್ರಚೇತ ಎಂಬ ಪ್ರಸಿದ್ಧಿಯನ್ನು ಗಳಿಸಿದ ರಾಜರಾಗಿ ತಮ್ಮ ವೇದಶಾಖೆಯನ್ನು ಅಧ್ಯಯನ ಮಾಡಿ ನಾರಾಯಣನ ಭಕ್ತಿಯಲ್ಲಿ ನಿರತರಾದರು.

೫೪. ಆ ಹತ್ತು ಮಂದಿ ಪ್ರಚೇತ ಎಂಬುವರಿಂದ ಮಾರಿಷಾ ಎಂಬಾಕೆಯಲ್ಲಿ ಪೂರ್ವದಲ್ಲಿ ಬ್ರಹ್ಮನ ಮಾನಸಪುತ್ರನಾದ, ಮಹಾಭಾಗ್ಯಶಾಲಿಯಾದ ದಕ್ಷಬ್ರಹ್ಮನು ಪುತ್ರನಾಗಿ ಜನಿಸಿದನು.

೫೫. ಪ್ರಚೇತ ಎಂಬುವರ ಪುತ್ರನಾದ ದಕ್ಷಬ್ರಹ್ಮನು ಪರಮ ಜ್ಞಾನಿಯೂ ಮಹೇಶ್ವರನೂ ಆದ ರುದ್ರಮೂರ್ತಿಯೊಡನೆ ವಿವಾದವನ್ನು ಮಾಡಿ ಆ ನಿಮಿತ್ತದಿಂದ ರುದ್ರನಿಂದ ಶಪಿಸಲ್ಪಟ್ಟನು.

ಸಮಾಯಾಂತಂ ಮಹಾದೇವೋ ದಕ್ಷಂ ದೇವ್ಯಾ ಗೃಹಂ ಹರಃ ।
ದೃಷ್ಟ್ವಾ ಯಥೋಚಿತಾಂ ಪೂಜಾಂ ದಕ್ಷಾಯ ಪ್ರದದೌ ಸ್ವಯಮ್ ॥

ತದಾ ವೈ ತಮಸಾವಿಷ್ಟಃ ಸೋಽಧಿಕಾಂ ಬ್ರಹ್ಮಣಃ ಸುತಃ ।
ಪೂಜಾಮನರ್ಹಾಮನ್ವಿಚ್ಛನ್ ಜಗಾಮ ಕುಪಿತೋ ಗೃಹಮ್ ॥ ೫೭ ॥

ಕದಾಚಿತ್ಸ್ವಗೃಹಂ ಪ್ರಾಪ್ತಾಂ ಸತೀಂ ದಕ್ಷಃ ಸುದುರ್ಮನಾಃ ।
ಭರ್ತ್ರಾ ಸಹ ವಿನಿಂದ್ಯೈನಾಂ ಭರ್ತ್ಸಯಾಮಾಸ ವೈ ರುಷಾ ॥ ೫೮ ॥

ಅನ್ಯೇ ಜಾಮಾತರಃ ಶ್ರೇಷ್ಠಾ ಭರ್ತುಸ್ತವ ಪಿನಾಕಿನಃ ।
ತ್ವಮಪ್ಯಸತ್ಸುತಾಸ್ಮಾಕಂ ಗೃಹಾದ್ಗಚ್ಛ ಯಥಾಗತಮ್ ॥ ೫೯ ॥

---

೫೬. ದೇವೋತ್ತಮನಾದ ಈಶ್ವರನು ತನ್ನ ಪತ್ನಿಯಾದ ಪಾರ್ವತೀದೇವಿಯ ಗೃಹಕ್ಕೆ ದಕ್ಷಬ್ರಹ್ಮನು ಬರುತ್ತಿದ್ದುದನ್ನು ಕಂಡು ಆ ದಕ್ಷಬ್ರಹ್ಮನಿಗೆ ತಾನು ಯಥೋಚಿತವಾದ ಪೂಜಾಸತ್ಕಾರವನ್ನು ಮಾಡಿದನು.

೫೭. ಆಗ ಬ್ರಹ್ಮಪುತ್ರನಾದ ದಕ್ಷಪ್ರಜಾಪತಿಯು ತಮೋಗುಣದ ಆವೇಶವುಳ್ಳವನಾಗಿ ತನಗೆ ಅರ್ಹವಲ್ಲದ ಹೆಚ್ಚಾದ ಪೂಜಾಸತ್ಕಾರವನ್ನು ಅಪೇಕ್ಷಿಸಿದವನಾಗಿ ಕೋಪಗೊಂಡು ಹಿಂತಿರುಗಿ ಮನೆಗೆ ಹೋದನು.

೫೮. ತರುವಾಯ ಒಂದು ವೇಳೆ ತನ್ನ ಮನೆಗೆ ಬಂದಿದ್ದ ಸತೀದೇವಿಯ ವಿಷಯದಲ್ಲಿ ದುಷ್ಟವಾದ ಆಶಯವುಳ್ಳ ದಕ್ಷಬ್ರಹ್ಮನು ಪತಿಯ ಕೂಡ ಆಕೆಯನ್ನು ನಿಂದಿಸಿ ಕೋಪದಿಂದ ಬೆದರಿಸಿದನು.

೫೯. ಮತ್ತು ಸತೀದೇವಿಯೇ! ಪಿನಾಕಾಯುಧವನ್ನು ಧರಿಸಿದ ನಿನ್ನ ಪತಿಯಾದ ಶಂಕರನಿಗಿಂತ ನನ್ನ ಇತರ ಅಳಿಯಂದಿರು ಶ್ರೇಷ್ಠರಾಗಿರುವರು. ನೀನು ನಮಗೆ ದುಷ್ಟ ಪುತ್ರಿಯಾಗಿ ಜನಿಸಿದ್ದೀ. ಆದ್ದರಿಂದ ನೀನು ಬಂದಂತೆ ಈ ಮನೆಯಿಂದ ಹಿಂತಿರುಗಿ ಹೋಗು.

ತಸ್ಯ ತದ್ವಾಕ್ಯಮಾಕರ್ಣ್ಯ ಸಾ ದೇವೀ ಶಂಕರಪ್ರಿಯಾ ।
ವಿನಿಂದ್ಯ ಪಿತರಂ ದಕ್ಷಂ ದದಾಹಾತ್ಮಾನಮಾತ್ಮನಾ ॥ ೬೦ ॥

ಪ್ರಣಮ್ಯ ಪಶುಭರ್ತಾರಂ ಭರ್ತಾರಂ ಕೃತ್ತಿವಾಸಸಮ್ ।
ಹಿಮವದ್ದುಹಿತಾ ಸಾಭೂತ್ತಪಸಾ ತಸ್ಯ ತೋಷಿತಾ ॥ ೬೧ ॥

ಜ್ಞಾತ್ವಾ ತಾಂ ಭಗವಾನ್ ರುದ್ರಃ ಪ್ರಪನ್ನಾರ್ತಿಹರೋ ಹರಃ ।
ಶಶಾಪ ದಕ್ಷಂ ಕುಪಿತಃ ಸಮಾಗತ್ಯಾಥ ತದ್ಗೃಹಮ್ ॥ ೬೨ ॥

ತ್ಯಕ್ತ್ವಾ ದೇಹಮಿಮಂ ಬ್ರಾಹ್ಮಂ ಕ್ಷತ್ರಿಯಾಣಾಂ ಕುಲೇ ಭವ ।
ಸ್ವಸ್ಯಾಂ ಸುತಾಯಾಂ ಮೂಢಾತ್ಮಾ ಪುತ್ರಮುತ್ಪಾದಯಿಷ್ಯಸಿ ॥ ೬೩ ॥

---

೬೦. ಶಂಕರನ ಸತಿಯಾದ ಆ ಪಾರ್ವತೀದೇವಿಯು ತಂದೆಯ ಆ ನಿಷ್ಠುರ ವಚನವನ್ನು ಕೇಳಿ ತಂದೆಯಾದ ದಕ್ಷಬ್ರಹ್ಮನನ್ನು ತಿರಸ್ಕರಿಸಿ ತನ್ನ ಯೋಗಾಭ್ಯಾಸ ದಿಂದ ಉಂಟಾದ ಅಗ್ನಿಯಲ್ಲಿ ದೇಹವನ್ನು ತ್ಯಜಿಸಿದಳು.

೬೧. ಆಗ ಬ್ರಹ್ಮಾದಿಪಶುಗಳಿಗೆ ಸ್ವಾಮಿಯಾದ ಮತ್ತು ಗಜಚರ್ಮಾಂಬರ ಧಾರಿಯಾದ ತನ್ನ ಪತಿದೇವನನ್ನು ನಮಸ್ಕರಿಸಿ ದೇಹವನ್ನು ಬಿಟ್ಟು ಹಿಮವಂತನ ತಪೋಮಹಿಮೆಯಿಂದ ಸಂತುಷ್ಟಳಾಗಿ ಅವನಿಗೆ ಪುತ್ರಿಯಾಗಿ ಜನಿಸಿದಳು.

೬೨. ಆಗ ಕಷ್ಟಕ್ಕೆ ಸಿಕ್ಕಿದವರ ಪೀಡೆಯನ್ನು ಅಪಹರಿಸುವ ಸರ್ವ ಸಂಹಾರಕನಾದ ಮತ್ತು ಪೂಜ್ಯನಾದ ರುದ್ರದೇವನು ತನ್ನ ಸತಿಯ ವೃತ್ತಾಂತವನ್ನು ತಿಳಿದು ಕೋಪಗೊಂಡವನಾಗಿ ಆ ದಕ್ಷಬ್ರಹ್ಮನ ಮನೆಗೆ ಬಂದು ಅವನನ್ನು ಶಪಿಸಿದನ

೬೩. ದಕ್ಷನೇ ! ನೀನು ಬ್ರಾಹ್ಮಣ ಜಾತಿಯ ಈ ಪವಿತ್ರದೇಹವನ್ನು ಬಿಟ್ಟು ಕ್ಷತ್ರಿಯರ ವಂಶದಲ್ಲಿ ಹುಟ್ಟು, ಮತ್ತು ಮೋಹಗೊಂಡ-ಮಾನಸವುಳ್ಳವನಾಗಿ ನಿನ್ನ ಪುತ್ರಿಯಲ್ಲಿ ಪುತ್ರಸಂತಾನವನ್ನು ಹೊಂದುತ್ತೀ.

ಏವಮುಕ್ತ್ವಾ ಮಹಾದೇವೋ ಯಯೌ ಕೈಲಾಸಪರ್ವತಮ್ ।
ಸ್ವಾಯಂಭುವೋಽಪಿ ಕಾಲೇನ ದಕ್ಷಃ ಪ್ರಾಚೇತಸೋಽಭವತ್ ॥ ೬೪ ॥

ಏತದ್ವಃ ಕಥಿತಂ ಸರ್ವಂ ಮನೋಃ ಸ್ವಾಯಂಭುವಸ್ಯ ತು ।
ನಿಸರ್ಗಂ ದಕ್ಷಪರ್ಯಂತಂ ಶೃಣ್ವತಾಂ ಪಾಪನಾಶನಮ್ ॥ ೬೫ ॥

ಇತಿ ಶ್ರೀ ಕೂರ್ಮಪುರಾಣೇ ಚತುರ್ದಶೋಽಧ್ಯಾಯಃ

---

೬೪. ಮಹಾದೇವನು ಹೀಗೆಂದು ಹೇಳಿದ ತರುವಾಯ ತನ್ನ ನಿವಾಸವಾದ ಕೈಲಾಸಪರ್ವತಕ್ಕೆ ತೆರಳಿದನು. ಬ್ರಹ್ಮಮಾನಸಪುತ್ರನಾದ ದಕ್ಷನು ಕೆಲವು ಕಾಲಾನಂತರದಲ್ಲಿ ಪ್ರಚೇತಸ್ ಎಂಬುವರ ಪುತ್ರನಾಗಿ ಜನಿಸಿದನು.

೬೫. ಹೀಗೆ ಸ್ವಾಯಂಭುವಮನುವಿನಿಂದ ಪ್ರಸವಿಸಿದ ಮತ್ತು ಶ್ರವಣ ಮಾಡಿದವರ ಪಾಪಗಳನ್ನು ನಾಶಮಾಡುವ ದಕ್ಷಬ್ರಹ್ಮನ ಪರ್ಯಂತವಾದ ಸೃಷ್ಟಿ ಚರಿತ್ರವು ನನ್ನಿಂದ ನಿಮಗೆ ಹೇಳಲ್ಪಟ್ಟಿದೆ.

( ಕೂರ್ಮಪುರಾಣದಲ್ಲಿ ಹದಿನಾಲ್ಕನೆಯ ಅಧ್ಯಾಯವು ಸಮಾಪ್ತವು )



ಶ್ರೀಃ

# ಕೂರ್ಮಪುರಾಣಂ

## ಪಂಚದಶೋಽಧ್ಯಾಯಃ

## ( ದಕ್ಷಯಜ್ಞವಿಧ್ವಂಸನಮ್ )

ನೈಮಿಷೇಯಾ ಊಚುಃ :--

ದೇವಾನಾಂ ದಾನವಾನಾಂ ಚ ಗಂಧರ್ವೋರಗರಕ್ಷಸಾಮ್ ।
ಉತ್ಪತ್ತಿಂ ವಿಸ್ತರಾದ್ಬ್ರೂಹಿ ಸೂತ ವೈವಸ್ವತೇಽಂತರೇ ॥ ೧ ॥

ಸ ಶಪ್ತಃ ಶಂಭುನಾ ಪೂರ್ವಂ ದಕ್ಷಃ ಪ್ರಾಚೇತಸೋ ನೃಪಃ ।
ಕಿಮಕಾರ್ಷೀನ್ಮಹಾಬುದ್ಧೇ ಶ್ರೋತುಮಿಚ್ಛಾಮ ಸಾಂಪ್ರತಮ್ ॥ ೨ ॥

---

## ಹದಿನೈದನೆಯ ಅಧ್ಯಾಯವು

೧ ನೈಮಿಷಾರಣ್ಯವಾಸಿಗಳಾದ ಮುನಿಜನರು ಇಂತೆಂದರು :— ಸೂತ ಮುನಿಯೇ! ವೈವಸ್ವತಮನ್ವಂತರದಲ್ಲಿ ಉಂಟಾದ ದೇವ-ದಾನವ-ಗಂಧರ್ವ-ನಾಗ ಮತ್ತು ರಾಕ್ಷಸರೆಂಬ ಪ್ರಜೆಗಳ ಉತ್ಪತ್ತಿ ಕ್ರಮವನ್ನು ವಿಸ್ತಾರವಾಗಿ ವರ್ಣಿಸು.

೨. ಮತ್ತು ಮಹಾಜ್ಞಾನಿಯಾದ ಸೂತಮುನಿಯೇ! ಪೂರ್ವದಲ್ಲಿ ಶಂಕರನಿಂದ ಶಪಿಸಲ್ಪಟ್ಟ ಪ್ರಚೇತಪುತ್ರನಾದ ದಕ್ಷರಾಜನು ಮುಂದೇನುಮಾಡಿದನೋ ಅದನ್ನೀಗ ಕೇಳಲು ನಾವು ಆಶಿಸುತ್ತೇವೆ.

**ಸೂತ ಉವಾಚ :—**

ವಕ್ಷ್ಯೇ ನಾರಾಯಣೇನೋಕ್ತಂ ಪೂರ್ವಕಲ್ಪಾನುಷಂಗಿಕಮ್ ।
ತ್ರಿಕಾಲಬದ್ಧಂ ಪಾಪಘ್ನಂ ಪ್ರಜಾಸರ್ಗಸ್ಯ ವಿಸ್ತರಮ್ ॥ ೩ ॥

ಸ ಶಪ್ತಃ ಶಂಭುನಾ ಪೂರ್ವಂ ದಕ್ಷಃ ಪ್ರಾಚೇತಸೋ ನೃಪಃ ।
ವಿನಿಂದ್ಯಃ ಪೂರ್ವವೈರೇಣ ಗಂಗಾದ್ವಾರೇಽಯಜದ್ಭವಮ್ ॥ ೪ ॥

ದೇವಾಶ್ಚ ಸರ್ವೇ ಭಾಗಾರ್ಥಮಾಹೃತಾ ವಿಷ್ಣುನಾ ಸಹ ।
ಸಹೈವ ಮುನಿಭಿಃ ಸರ್ವೈರಾಗತಾ ಮುನಿಪುಂಗವಾಃ ॥ ೫ ॥

ದೃಷ್ಟ್ವಾ ದೇವಕುಲಂ ಕೃತ್ಸ್ನಂ ಶಂಕರೇಣ ವಿನಾಗತಮ್ ।
ದಧೀಚೋ ನಾಮ ವಿಪ್ರರ್ಷಿಃ ಪ್ರಾಚೇತಸಮಥಾಬ್ರವೀತ್ ॥ ೬ ॥

---

೩. ಸೂತಮುನಿಯು ಇಂತೆಂದನು: — ಪೂರ್ವಕಲ್ಪಕ್ಕೆ ಸಂಬಂಧಿಸಿರುವ, ಭೂತಾದಿ ತ್ರಿಕಾಲಕ್ಕೆ ಸಂಬಂಧವಾದ, ಶ್ರವಣದಿಂದ ಪಾಪವನ್ನು ಕಳೆಯುವ, ನಾರಾಯಣನಿಂದ ಉಪದೇಶಿಸಲ್ಪಟ್ಟ ಪ್ರಜಾಸೃಷ್ಟಿಯ ವಿಸ್ತಾರವನ್ನು ವರ್ಣಿಸುವೆನು.

೪. ಪೂರ್ವದಲ್ಲಿ ಶಂಕರನಿಂದ ಶಪಿಸಲ್ಪಟ್ಟ ಪ್ರಚೇತಪುತ್ರನಾದ ದಕ್ಷರಾಜನು ಶಂಕರನಲ್ಲಿದ್ದ ಪೂರ್ವವೈರದಿಂದ ನಿಂದಾರ್ಹವಾದ ಮಾನಸವುಳ್ಳವನಾಗಿ ಗಂಗಾದ್ವಾರದಲ್ಲಿ ಪರಮಾತ್ಮನನ್ನು ಉದ್ದೇಶಿಸಿ ಯಾಗಮಾಡಿದನು.

೫. ಅಲ್ಲಿ ಮಹಾವಿಷ್ಣುವಿನೊಡನೆ ಸಮಸ್ತದೇವತೆಗಳು ಯಜ್ಞದ ಹವಿರ್ಭಾಗವನ್ನು ಸ್ವೀಕರಿಸಲು ಆಹ್ವಾನಿಸಲ್ಪಟ್ಟರು. ಅನೇಕ ಮುನಿಪುಂಗವರು ಸಮಸ್ತ ಮುನಿಜನಗಳೊಂದಿಗೆ ಅಲ್ಲಿ ಬಂದು ಸೇರಿದರು.

೬. ಅಲ್ಲಿ ಈಶ್ವರನೊಬ್ಬನ ಹೊರತು ಸಂಪೂರ್ಣವಾಗಿ ಬಂದಿದ್ದ ದೇವವರ್ಗವನ್ನು ನೋಡಿ ದಧೀಚ ಎಂಬ ಒಬ್ಬ ಬ್ರಹ್ಮರ್ಷಿಯು ಪ್ರಚೇತ ಪುತ್ರನಾದ ದಕ್ಷನನ್ನು ಕುರಿತು ಹೀಗೆ ಹೇಳಿದನು.

**ದಧೀಚ ಉವಾಚ :—**

ಬ್ರಹ್ಮಾದ್ಯಾಸ್ತು ಪಿಶಾಚಾಂತಾ ಯಸ್ಯಾಜ್ಞಾನುವಿಧಾಯಿನಃ ।
ಸ ದೇವಃ ಸಾಂಪ್ರತಂ ರುದ್ರೋ ವಿಧಿನಾ ಕಿಂ ನ ಪೂಜ್ಯತೇ ॥ ೭ ॥

**ದಕ್ಷ ಉವಾಚ :—**

ಸರ್ವೇಷ್ವೇವ ಹಿ ಯಜ್ಞೇಷು ನ ಭಾಗಃ ಪರಿಕಲ್ಪಿತಃ ।
ನ ಮಂತ್ರಾ ಭಾರ್ಯಯಾ ಸಾರ್ಧಂ ಶಂಕರಸ್ಯೇತಿ ನೇಜ್ಯತೇ ॥ ೮ ॥

ವಿಹಸ್ಯ ದಕ್ಷಂ ಕುಪಿತೋ ವಚಃ ಪ್ರಾಹ ಮಹಾಮುನಿಃ ।
ಶೃಣ್ವತಾಂ ಸರ್ವದೇವಾನಾಂ ಸರ್ವಜ್ಞಾನಮಯಃ ಸ್ವಯಮ್ ॥ ೯ ॥

**ದಧೀಚ ಉವಾಚ :—**

ಯತಃ ಪ್ರವೃತ್ತಿರ್ವಿಶ್ವಾತ್ಮಾ ಯಶ್ಚಾಸೌ ಪರಮೇಶ್ವರಃ ।
ಸಂಪೂಜ್ಯತೇ ಸರ್ವಯಜ್ಞೈರ್ವಿದಿತ್ವಾ ಕಿಂ ನ ಶಂಕರಃ ॥ ೧೦ ॥

---

೭. ದಧೀಚ ಬ್ರಹ್ಮರ್ಷಿಯು ಹೀಗೆಂದನು:—ಬ್ರಹ್ಮದೇವನು ಆದಿಯಾಗಿ ಪಿಶಾಚಗಳು ಅಂತವಾಗಿರುವ ಸರ್ವಪ್ರಜೆಗಳೂ ಯಾವ ಪರಮಶಿವನ ಆಜ್ಞೆಯಂತೆ ನಡೆಯುತ್ತಲಿವೆಯೋ, ಅಂತಹ ಸ್ವಾಮಿಯಾದ ರುದ್ರಮೂರ್ತಿಯು ಯಥಾವಿಧಿಯಾಗಿ ಈಗ ಏಕೆ ಪೂಜಿಸಲ್ಪಡುತ್ತಿಲ್ಲ ?

೮. ದಕ್ಷಬ್ರಹ್ಮನು ಇಂತೆಂದನು:—ಸಮಸ್ತ ಯಜ್ಞಗಳಲ್ಲಿಯೂ ಶಂಕರನಿಗೆ ಹವಿರ್ಭಾಗವು ಕಲ್ಪಿಸಲ್ಪಟ್ಟಿಲ್ಲ ಮತ್ತು ಭಾರ್ಯಾಸಹಿತನಾದ ಶಂಕರನನ್ನು ಉದ್ದೇಶಿಸುವ ಮಂತ್ರಗಳು ಸಿದ್ಧವಾಗಿಲ್ಲ. ಆದುದರಿಂದ ಶಂಕರನು ಪೂಜಿಸಲ್ಪಡುವುದಿಲ್ಲ.

೯. ಆಗ ಸರ್ವ ಜ್ಞಾನ ನಿಧಿಯಾದ ಆ ಮಹಾಮುನಿಯು ತಾನು ಕುಪಿತನಾಗಿ ಸಮಸ್ತ ದೇವತೆಗಳೂ ಕೇಳುತ್ತಿರುವ ಹಾಗೆ ದಕ್ಷಬ್ರಹ್ಮನನ್ನು ಹಾಸ್ಯಮಾಡಿ ಈ ವಚನವನ್ನು ಹೇಳಿದನು.

೧೦. ದಧೀಚ ಮುನಿಯು ಇಂತೆಂದನು:—ಯಾವ ಪರಮಾತ್ಮನಿಂದ ಸರ್ವ ಜಗತ್ ಪ್ರವೃತ್ತಿಯು ನಡೆಯುವುದೋ, ಯಾವ ಪರಮೇಶ್ವರನು ವಿಶ್ವರೂಪಿಯಾಗಿರುವನೋ, ಅಂತಹ ಶಂಕರನನ್ನು ಪರಮಾರ್ಥವಾಗಿ ತಿಳಿದು ಸಮಸ್ತ ಯಜ್ಞಗಳಿಂದ ಪೂಜಿಸಲ್ಪಡುತ್ತಿಲ್ಲವೇ.

ದಕ್ಷ ಉವಾಚ :—

ನ ಹ್ಯಯಂ ಶಂಕರೋ ರುದ್ರಃ ಸಂಹರ್ತಾ ತಾಮಸೋ ಹರಃ ।
ನಗ್ನಃ ಕಪಾಲೀ ವಿದಿತೋ ವಿಶ್ವಾತ್ಮಾ ನೋಪಪದ್ಯತೇ ॥ ೧೧ ॥

ಈಶ್ವರೋ ಹಿ ಜಗತ್ಸ್ರಷ್ಟಾ ಪ್ರಭುರ್ನಾರಾಯಣೋ ಹರಿಃ ।
ಸತ್ತ್ವಾತ್ಮಕೋಽಸೌ ಭಗವಾನಿಜ್ಯತೇ ಸರ್ವಕರ್ಮಸು ॥ ೧೨ ॥

ದಧೀಚ ಉವಾಚ :—

ಕಿಂ ತ್ವಯಾ ಭಗವಾನೇಷ ಸಹಸ್ರಾಂಶುರ್ನ ದೃಶ್ಯತೇ ।
ಸರ್ವಲೋಕೈಕಸಂಹರ್ತಾ ಕಾಲಾತ್ಮಾ ಪರಮೇಶ್ವರಃ ॥ ೧೩ ॥

---

೧೧. ದಕ್ಷಬ್ರಹ್ಮನು ಇಂತೆಂದನು :—ಈ ಶಿವನು ಶಂಕರನೆಂದು ಕರೆಯಲು ಅರ್ಹನಲ್ಲ. ಇವನು ರುದ್ರಮೂರ್ತಿಯೂ, ಸಂಹಾರಕನೂ, ತಮೋಗುಣಮಯನೂ, ಅಪಹಾರಕನೂ, ದಿಗಂಬರನೂ ಮತ್ತು ಕಪಾಲಧಾರಿಯೂ ಆಗಿ ತಿಳಿಯಲ್ಪಟ್ಟಿರುವನು. ಇವನು ವಿಶ್ವರೂಪಿಯಾದ ಪರಮಾತ್ಮನಾಗಲಾರನು.

೧೨. ಜಗತ್ತನ್ನು ಸೃಷ್ಟಿಸಿದವನೂ, ಸಮರ್ಥನೂ ಮತ್ತು ಅನರ್ಥಭಂಜಕನೂ ಆದ ನಾರಾಯಣನು ಜಗದೀಶ್ವರನಾಗಿದ್ದಾನೆ. ಪೂಜ್ಯನಾದ ಈ ವಿಷ್ಣುವು ಸತ್ವಗುಣ ಪೂರ್ಣನಾಗಿ ಸರ್ವ ಕರ್ಮಗಳಲ್ಲಿ ಪೂಜಿಸಲ್ಪಡುತ್ತಾನೆ.

೧೩. ಧದೀಚಮುನಿಯು ಇಂತೆಂದನು :— ದಕ್ಷನೇ ! ಸಮಸ್ತ ಲೋಕಗಳಿಗೆ ಒಬ್ಬನೇ ಸಂಹಾರಕನೂ, ಕಾಲಸ್ವರೂಪಿಯೂ, ಪರಮೇಶ್ವರನೂ ಮತ್ತು ಸರ್ವಜ್ಞನೂ ಆದ ಈ ಆದಿತ್ಯನು ನಿನ್ನಿಂದ ನೋಡಲ್ಪಡುತ್ತಿಲ್ಲವೇ ?

ಯಂ ಗೃಣಂತೀಹ ವಿದ್ವಾಂಸೋ ಧಾರ್ಮಿಕಾ ಬ್ರಹ್ಮವಾದಿನಃ ।
ಸೋಽಯಂ ಸಾಕ್ಷೀ ತೀವ್ರರುಚಿಃ ಕಾಲಾತ್ಮಾ ಶಾಂಕರೀ ತನುಃ ॥ ೧೪ ॥

ಏಷ ರುದ್ರೋ ಮಹಾದೇವಃ ಕಪಾಲೀ ಚ ಘೃಣೀ ಹರಃ ।
ಆದಿತ್ಯೋ ಭಗವಾನ್ ಸೂರ್ಯೋ ನೀಲಗ್ರಿವೋ ವಿಲೋಹಿತಃ ॥ ೧೫ ॥

ಸಂಸ್ತೂಯತೇ ಸಹಸ್ರಾಂಶುಃ ಸಾಮಗಾಧ್ವರ್ಯುಹೋತೃಭಿಃ ।
ಪಶ್ಯೈನಂ ವಿಶ್ವಕರ್ಮಾಣಂ ರುದ್ರಮೂರ್ತಿಂ ತ್ರಯೀಮಯಮ್ ॥೧೬॥

ದಕ್ಷ ಉವಾಚ : —

ಯ ಏತೇ ದ್ವಾದಶಾದಿತ್ಯಾ ಆಗತಾ ಯಜ್ಞಭಾಗಿನಃ ।
ಸರ್ವೇ ಸೂರ್ಯ ಇತಿ ಜ್ಞೇಯಾ ನ ಹ್ಯನ್ಯೋ ವಿದ್ಯತೇ ರವಿಃ ॥ ೧೭ ॥

---

೧೪. ಧರ್ಮಪರರೂ, ಬ್ರಹ್ಮಾದಿಗಳೂ ಆದ ಜ್ಞಾನಿಗಳು ಯಾವ ಸೂರ್ಯ ನಾರಾಯಣಸ್ವಾಮಿಯನ್ನು ಸ್ತುತಿಸುವರೋ, ಆ ಸೂರ್ಯನಾರಾಯಣನು ಕರ್ಮ ಸಾಕ್ಷಿಯೂ, ಉಗ್ರವಾದ ಕಾಂತಿಯುಳ್ಳವನೂ, ಕಾಲಾತ್ಮಕನೂ ಮತ್ತು ಶಂಕರನ ಮೂರ್ತಿಸ್ವರೂಪನೂ ಆಗಿರುವನು.

೧೫. ಈ ರುದ್ರದೇವನು ದೇವೋತ್ತಮನೂ, ಕಪಾಲಧಾರಿಯೂ, ದಯಾಮಯನೂ, ಸಂಹಾರಕನೂ, ಆದಿತ್ಯರೂಪಿಯೂ, ಪೂಜ್ಯನೂ, ಸೂರ್ಯರೂಪನೂ, ನೀಲಕಂಠನೂ ಮತ್ತು ಲೋಹಿತವರ್ಣವುಳ್ಳವನೂ ಎಂದು ನಾನಾ ವಿಧವಾಗಿ ಸ್ತುತಿಸಲ್ಪಡುತ್ತಾನೆ.

೧೬. ಉದ್ಗಾತೃ ಅಧ್ವರ್ಯು ಮತ್ತು ಹೋತಾ ಎಂಬ ಋತ್ವಿಜರಿಂದ ಈ ಆದಿತ್ಯನು ಬಹುರೂಪಗಳಿಂದ ಸ್ತುತಿಸಲ್ಪಡುತ್ತಾನೆ. ಪ್ರಪಂಚಕ್ಕೆ ಕಾರಣನಾದ ಈ ಆದಿತ್ಯನನ್ನು ವೇದತ್ರಯರೂಪನನ್ನಾಗಿಯೂ, ರುದ್ರಮೂರ್ತಿಯನ್ನಾಗಿಯೂ ತಿಳಿ.

೧೭. ದಕ್ಷಬ್ರಹ್ಮನು ಹೀಗೆ ಹೇಳಿದನು :—ಇಲ್ಲಿಗೆ ಯಜ್ಞಭಾಗಕ್ಕೋಸ್ಕರ ಯಾವ ದ್ವಾದಶಾದಿತ್ಯರು ಬಂದಿರುವರೋ , ಇವರೆಲ್ಲರೂ ಸೂರ್ಯ ಎಂಬುದಾಗಿ ತಿಳಿಯಬೇಕಾಗಿರುವರು. ಇವರಿಗಿಂತ ಬೇರೆ ಸೂರ್ಯನು ಇರುವುದಿಲ್ಲ.

ಏವಮುಕ್ತೇ ತು ಮುನಯಃ ಸಮಾಯಾತಾ ದಿದೃಕ್ಷವಃ ।
ಬಾಢಮಿತ್ಯಬ್ರುವನ್ ದಕ್ಷಂ ತಸ್ಯ ಸಾಹಾಯ್ಯಕಾರಿಣಃ　　॥ ೧೮ ॥

ತಮಸಾವಿಷ್ಟಮನಸೋ ನ ಪಶ್ಯಂತೋ ವೃಷಧ್ವಜಮ್ ।
ಸಹಸ್ರಶೋಽಥ ಶತಶೋ ಬಹುಶೋ ಭೂಯ ಏವ ಹಿ　　॥ ೧೯ ॥

ನಿಂದಂತೋ ವೈದಿಕಾನ್ ಮಂತ್ರಾನ್ ಸರ್ವಭೂತಪತಿಂ ಹರಮ್ ।
ಅಪೂಜಯನ್ ದಕ್ಷವಾಕ್ಯಂ ಮೋಹಿತಾ ವಿಷ್ಣುಮಾಯಯಾ　　॥ ೨೦ ॥

ದೇವಾಶ್ಚ ಸರ್ವೇ ಭಾಗಾರ್ಥಮಾಗತಾ ವಾಸವಾದಯಃ ।
ನಾಪಶ್ಯನ್ ದೇವಮೀಶಾನಮೃತೇ ನಾರಾಯಣಂ ಹರಿಮ್　　॥ ೨೧ ॥

---

೧೮. ದಕ್ಷನಿಂದ ಹೀಗೆ ಹೇಳಲ್ಪಡುತ್ತಿರಲು ಯಜ್ಞವನ್ನು ನೋಡಲು ಬಂದಿರುವ ಮುನಿಜನರು ಅವನಿಗೆ ಸಹಾಯವನ್ನು ನೀಡುತ್ತಾ ದಕ್ಷಬ್ರಹ್ಮನನ್ನು ಕುರಿತು ಇದು ನಿಜವಾದುದು ಎಂದು ನುಡಿದರು.

೧೯. ಸಹಸ್ರ ಶತ ಮತ್ತು ಬಹು ಮುಂತಾದ ಅಧಿಕಾಧಿಕ ಸಂಖ್ಯೆಯಿಂದ ಕೂಡಿದ ಆ ಮುನಿಜನರು ತಮೋಗುಣದ ಆವೇಶವುಳ್ಳ ಮಾನಸವುಳ್ಳವರಾಗಿ ವೃಷಭ ಧ್ವಜದಿಂದ ಶೋಭಿಸುವ ಪರಮೇಶ್ವರನ ರೂಪವನ್ನು ತಿಳಿಯಲಿಲ್ಲ.

೨೦. ಮತ್ತು ಮಹಾವಿಷ್ಣುವಿನ ಮಾಯೆಯಿಂದ ಮೋಹಗೊಂಡವರಾಗಿ ಸರ್ವಭೂತಾಧಿಪತಿಯಾದ ಈಶ್ವರನನ್ನೂ, ಸಮಸ್ತ ವೇದ ಮಂತ್ರಗಳನ್ನೂ ನಿಂದಿಸುತ್ತಾ ದಕ್ಷಬ್ರಹ್ಮನ ವಚನವನ್ನು ಪ್ರಶಂಸೆಮಾಡಿದರು.

೨೧. ಮತ್ತು ಯಜ್ಞದಲ್ಲಿ ಹವಿರ್ಭಾಗವನ್ನು ಸ್ವೀಕರಿಸಲು ಬಂದಿರುವ ಇಂದ್ರನೇ ಮುಂತಾದ ಸಮಸ್ತ ದೇವತೆಗಳು ಪಾಪಭಂಜಕನಾದ ಮಹಾವಿಷ್ಣುವನ್ನು ಹೊರತು ಬೇರೊಬ್ಬಸ್ವಾಮಿಯಾದ ಸರ್ವೇಶ್ವರನನ್ನು ನೋಡಲಿಲ್ಲ.

ಹಿರಣ್ಯಗರ್ಭೋ ಭಗವಾನ್ ಬ್ರಹ್ಮಾ ಬ್ರಹ್ಮವಿದಾಂ ವರಃ ।
ಪಶ್ಯತಾಮೇವ ಸರ್ವೇಷಾಂ ಕ್ಷಣಾದಂತರಧೀಯತ ॥ ೨೨ ॥

ಅಂತರ್ಹಿತೇ ಭಗವತಿ ದಕ್ಷೋ ನಾರಾಯಣಂ ಹರಿಮ್ ।
ರಕ್ಷಕಂ ಜಗತಾಂ ದೇವಂ ಜಗಾಮ ಶರಣಂ ಸ್ವಯಮ್ ॥ ೨೩ ॥

ಪ್ರವರ್ತಯಾಮಾಸ ಚ ತಂ ಯಜ್ಞಂ ದಕ್ಷೋಽಥ ನಿರ್ಭಯಃ ।
ರಕ್ಷಕೋ ಭಗವಾನ್ ವಿಷ್ಣುಃ ಶರಣಾಗತರಕ್ಷಕಃ ॥ ೨೪ ॥

ಪುನಃ ಪ್ರಾಹ ಚ ತಂ ದಕ್ಷಂ ದಧೀಚೋ ಭಗವಾನೃಷಿಃ ।
ಸಂಪ್ರೇಕ್ಷ್ಯರ್ಷಿಗಣಾನ್ ದೇವಾನ್ ಸರ್ವಾನ್ ವೈ ರುದ್ರವಿದ್ವಿಷಃ ॥೨೫॥

---

೨೨. ಆಗ ಬ್ರಹ್ಮಜ್ಞಾನಿಗಳಲ್ಲಿ ಪ್ರವರನೂ ಪೂಜ್ಯನೂ ಮತ್ತು ಬ್ರಹ್ಮಾಂಡ ವನ್ನು ಗರ್ಭದಲ್ಲಿ ಧರಿಸಿದವನೂ ಆದ ಬ್ರಹ್ಮದೇವನು ಸಭಿಕರೆಲ್ಲರೂ ನೋಡುತ್ತಿರುವ ಹಾಗೆ ನಿಮಿಷಮಾತ್ರದಲ್ಲಿ ಅಂತರ್ಧಾನ ಹೊಂದಿದನು.

೨೩. ಆಗ ಭಗವಂತನಾದ ಬ್ರಹ್ಮದೇವನು ಅದೃಶ್ಯನಾಗಲು ದಕ್ಷಬ್ರಹ್ಮನು ಸರ್ವಜಗದ್ರಕ್ಷಕನೂ ಸಮುದ್ರಶಾಯಿಯೂ ಆದ ಮಹಾವಿಷ್ಣು ಸ್ವಾಮಿಯನ್ನು ತಾನಾಗಿ ಶರಣುಹೊಂದಿದನು.

೨೪. ತರುವಾಯ ದಕ್ಷಬ್ರಹ್ಮನು ನಿರ್ಭಯನಾಗಿ ಆ ಯಜ್ಞಸಮಾರಂಭವನ್ನು ಮುಂದೆ ನಡೆಸಿದನು. ಶರಣಾಗತರನ್ನು ಪಾಲಿಸುವ ಪೂಜ್ಯನಾದ ಮಹಾವಿಷ್ಣುವು ಅಲ್ಲಿ ರಕ್ಷಕನಾಗಿದ್ದನು.

೨೫. ಆಗ ಪೂಜ್ಯನಾದ ದಧೀಚ ಎಂಬ ಬ್ರಹ್ಮರ್ಷಿಯು ರುದ್ರನಲ್ಲಿ ದ್ವೇಷ ಭಾವವನ್ನಿಟ್ಟ ಆ ಸಮಸ್ತ ಋಷಿಗಳನ್ನೂ ಸರ್ವದೇವತೆಗಳನ್ನೂ ನೋಡಿ ದಕ್ಷ ಬ್ರಹ್ಮನನ್ನು ಕುರಿತು ಮತ್ತೆ ಈ ರೀತಿಯಾಗಿ ಹೇಳಿದನು.

ಅಪೂಜ್ಯಪೂಜನೇ ಚೈವ ಪೂಜ್ಯಾನಾಂ ಚಾಪ್ಯಪೂಜನೇ ।
ನರಃ ಪಾಪಮವಾಪ್ನೋತಿ ಮಹದ್ವೈ ನಾತ್ರ ಸಂಶಯಃ ॥ ೨೬ ॥

ಅಸತಾಂ ಪ್ರಗ್ರಹೋ ಯತ್ರ ಸತಾಂ ಚೈವ ವಿಮಾನನಾ ।
ದಂಡೋ ದೈವಕೃತಸ್ತತ್ರ ಸದ್ಯಃ ಪತತಿ ದಾರುಣಃ ॥ ೨೭ ॥

ಏವ ಮುಕ್ತ್ವಾಥ ವಿಪ್ರರ್ಷಿಃ ಶಶಾಪೇಶ್ವರವಿದ್ವಿಷಃ ।
ಸಮಾಗತಾನ್ ಬ್ರಾಹ್ಮಣಾಂಸ್ತಾನ್ ದಕ್ಷಸಾಹಾಯ್ಯಕಾರಿಣಃ ॥ ೨೮ ॥

ಯಸ್ಮಾದ್ಬಹಿಃಕೃತೋ ವೇದಾದ್ಭವದ್ಭಿಃ ಪರಮೇಶ್ವರಃ ।
ವಿನಿಂದಿತೋ ಮಹಾದೇವಃ ಶಂಕರೋ ಲೋಕವಂದಿತಃ ॥ ೨೯ ॥

---

೨೬. ಪೂಜೆಗೆ ಅನರ್ಹರನ್ನು ಪೂಜಿಸುವುದರಿಂದಲೂ, ಪೂಜಾರ್ಹರನ್ನು ಪೂಜಿಸದಿರುವುದರಿಂದಲೂ ಮಾನವನು ಮಹತ್ತಾದ ಪಾಪಕ್ಕೆ ಭಾಗಿಯಾಗುತ್ತಾನೆ. ಈ ವಿಷಯದಲ್ಲಿ ಸಂದೇಹವಿಲ್ಲ.

೨೭. ಯಾವ ಸಂದರ್ಭದಲ್ಲಿ ಅಸಾಧುಗಳ ಆದರವೂ, ಸಾಧುಗಳ ತಿರಸ್ಕಾರವೂ ಜರುಗುವುದೊ ; ಅಲ್ಲಿ ಕೂಡಲೇ ದೈವವಿಹಿತವಾದ, ಅತಿ ಕಠಿಣವಾದ ದಂಡವು ಸಂಭವಿಸುವುದು.

೨೮. ಆ ಬ್ರಹ್ಮರ್ಷಿಯು ಹೀಗೆ ಹೇಳಿದನಂತರ ಈಶ್ವರ ದ್ವೇಷಿಗಳೂ, ದಕ್ಷಬ್ರಹ್ಮನಿಗೆ ಸಹಾಯ ನೀಡಲು ಬಂದಿರುವವರೂ, ಆದ ಸಮಸ್ತ ಬ್ರಾಹ್ಮಣರನ್ನು ಶಪಿಸಿದನು.

೨೯. ವಿಪ್ರರೇ! ನಿಮ್ಮಿಂದ ದೇವೋತ್ತಮನೂ, ಸರ್ವಲೋಕಕ್ಕೆ ವಂದ್ಯನೂ, ಪರಮೇಶ್ವರನೂ ಆದ ಶಂಕರನು ವೇದದಿಂದ ಬಹಿಷ್ಕರಿಸಲ್ಪಟ್ಟವನಾಗಿ ನಿಂದಿಸಲ್ಪಟ್ಟನಲ್ಲವೇ.

ಭವಿಷ್ಯಂತಿ ತ್ರಯೀಬಾಹ್ಯಾಃ ಸರ್ವೇಽಪೀಶ್ವರವಿದ್ವಿಷಃ ।
ನಿಂದಂತೀಹೈಶ್ವರಂ ಮಾರ್ಗಂ ಕುಶಾಸ್ತ್ರಾಸಕ್ತಚೇತಸಃ ॥ ೩೦ ॥

ಮಿಥ್ಯಾಧೀತಸಮಾಚಾರಾ ಮಿಥ್ಯಾಜ್ಞಾನಪ್ರಲಾಪಿನಃ ।
ಪ್ರಾಪ್ಯ ಘೋರಂ ಕಲಿಯುಗಂ ಕಲಿಜೈಃ ಪರಿಪೀಡಿತಾಃ ೩೧ ॥

ತ್ಯಕ್ತ್ವಾ ತಪೋಬಲಂ ಕೃತ್ಸ್ನಂ ಗಚ್ಛಧ್ವಂ ನರಕಾನ್ ಪುನಃ ।
ಭವಿಷ್ಯತಿ ಹೃಷೀಕೇಶಃ ಸ್ವಾಶ್ರಿತೋಽಪಿ ಪರಾಙ್ಮುಖಃ ॥ ೩೨ ॥

ಏವಮುಕ್ತ್ವಾಥ ವಿಪ್ರರ್ಷಿರ್ವಿರರಾಮ ತಪೋನಿಧಿಃ ।
ಜಗಾಮ ಮನಸಾ ರುದ್ರಮಶೇಷಾಘವಿನಾಶನಮ್ ॥ ೩೩ ॥

---

೩೦. ಆದ್ದರಿಂದ ನೀವೆಲ್ಲರೂ ದುಷ್ಟಶಾಸ್ತ್ರಗಳಲ್ಲಿ ಆಸಕ್ತಿಹೊಂದಿದ ಚಿತ್ತವುಳ್ಳ ವರಾಗಿ ಈಶ್ವರಾರಾಧನ ಮಾರ್ಗವನ್ನು ನಿಂದಿಸುವವರೂ, ವೇದ ಬಾಹ್ಯರೂ, ಈಶ್ವರ ದ್ವೇಷಿಗಳೂ ಆಗುತ್ತೀರಿ.

೩೧. ಮತ್ತು ಘೋರವಾದ ಕಲಿಯುಗದಲ್ಲಿ ಹುಟ್ಟಿ ನಿರರ್ಥಕವಾಗಿ ಅಧ್ಯಯನ ಮಾಡಿದ ಧರ್ಮಶಾಸ್ತ್ರವುಳ್ಳವರೂ, ನಿರರ್ಥಕವಾದ ಜ್ಞಾನಪ್ರಲಾಪವುಳ್ಳವರೂ ಆಗಿ ಕಲಿಯುಗದ ದೋಷಗಳಿಂದ ಪೀಡಿಸಲ್ಪಡುವಿರಿ.

೩೨. ಮತ್ತು ನಿಮ್ಮ ಸಂಪೂರ್ಣವಾದ ತಪೋಮಹಿಮೆಯನ್ನು ಕಳೆದು ಕೊಂಡು ಮತ್ತೆ ನರಕವಾಸವನ್ನು ಅನುಭವಿಸುತ್ತೀರಿ. ನಿಮ್ಮಿಂದ ಆಶ್ರಯಿಸಲ್ಪಟ್ಟ ಮಹಾವಿಷ್ಣುವು ನಿಮ್ಮಲ್ಲಿ ಪರಾಙ್ಮುಖನಾಗುವನು.

೩೩. ಆ ತಪೋನಿಧಿಯಾದ ಬ್ರಹ್ಮರ್ಷಿಯು ಹೀಗೆಂದು ಹೇಳಿದ ತರುವಾಯ ಸುಮ್ಮನಿದ್ದು ಸಮಸ್ತ ಪಾತಕಗಳನ್ನು ಧ್ವಂಸಮಾಡುವ ರುದ್ರದೇವನನ್ನು ಮನಸ್ಸಿನಲ್ಲಿ ಧ್ಯಾನಿಸಿದನು.

ಏತಸ್ಮಿನ್ನಂತರೇ ದೇವೀ ಮಹಾದೇವಂ ಮಹೇಶ್ವರಮ್ ।
ಪತಿಂ ಪಶುಪತಿಂ ದೇವಂ ಜ್ಞಾತ್ವೈತತ್ಪ್ರಾಹ ಸರ್ವದೃಕ್ ॥ ೩೪ ॥

ಶ್ರೀದೇವ್ಯುವಾಚ :—

ದಕ್ಷೋ ಯಜ್ಞೇನ ಯಜತೇ ಪಿತಾ ಮೇ ಪೂರ್ವಜನ್ಮನಿ ।
ವಿನಿಂದ್ಯ ಭವತೋ ಭಾವಮಾತ್ಮಾನಂ ಚಾಪಿ ಶಂಕರ ॥ ೩೫ ॥

ದೇವಾ ಮಹರ್ಷಯಶ್ಚಾಸಂಸ್ತತ್ರ ಸಾಹಾಯ್ಯಕಾರಿಣಃ ।
ವಿನಾಶಯಾಶು ತಂ ಯಜ್ಞಂ ವರಮೇತಂ ವೃಣೋಮ್ಯಹಮ್ ॥ ೩೬ ॥

ಏವಂ ವಿಜ್ಞಾಪಿತೋ ದೇವ್ಯಾ ದೇವದೇವಃ ಪರಃ ಪ್ರಭುಃ ।
ಸಸರ್ಜ ಸಹಸಾ ರುದ್ರಂ ದಕ್ಷಯಜ್ಞಜಿಘಾಂಸಯಾ ॥ ೩೭ ॥

---

೩೪. ಈ ಸಂದರ್ಭದಲ್ಲಿ ಸರ್ವಜ್ಞಳಾದ ಪಾರ್ವತೀದೇವಿಯು ಬ್ರಹ್ಮಾದಿ ಪಶುಪಾಲಕನೂ, ಸ್ವಾಮಿಯೂ, ದೇವೋತ್ತಮನೂ ಮತ್ತು ಮಹೇಶ್ವರನೂ ಆದ ಪತಿದೇವನನ್ನು ನೋಡಿ ಹೀಗೆಂದು ಹೇಳಿದಳು.

೩೫. ಪಾರ್ವತೀದೇವಿಯು ಇಂತೆಂದಳು :— ಪತಿದೇವನಾದ ಶಂಕರನೇ ! ಪೂರ್ವಜನ್ಮದಲ್ಲಿ ನನ್ನ ಜನಕನಾದ ದಕ್ಷಬ್ರಹ್ಮನು ನಿನ್ನ ಈಶ್ವರ ಭಾವವನ್ನೂ, ನಿನ್ನ ಆತ್ಮವನ್ನೂ ನಿಂದಿಸಿ ಯಜ್ಞಕರ್ಮವನ್ನು ಆಚರಿಸುತ್ತಾನೆ.

೩೬. ಆ ಯಜ್ಞದಲ್ಲಿ ದೇವತೆಗಳೂ, ಮಹರ್ಷಿಗಳೂ ನಿನ್ನ ನಿಂದೆಗೆ ಸಹಾಯಕರಾಗಿರುವರು. ಆದ್ದರಿಂದ ಆ ಯಜ್ಞವನ್ನು ಶೀಘ್ರವಾಗಿ ಧ್ವಂಸಮಾಡು. ನಾನು ಈ ವರವನ್ನು ಬೇಡಿಕೊಳ್ಳುತ್ತೇನೆ.

೩೭. ಈ ರೀತಿಯಾಗಿ ಪತ್ನಿಯಾದ ಪಾರ್ವತಿಯಿಂದ ವಿಜ್ಞಾಪಿಸಲ್ಪಟ್ಟಿರುವ, ಸರ್ವಶಕ್ತನಾದ ಮಹಾದೇವನು ಆ ದಕ್ಷಬ್ರಹ್ಮನ ಯಜ್ಞವನ್ನು ವಿಘಾತಗೊಳಿಸಲು ಕೂಡಲೇ ವೀರಭದ್ರನನ್ನು ಸೃಷ್ಟಿಸಿದನು.

ಸಹಸ್ರಶಿರಸಂ ಕ್ರುದ್ಧಂ ಸಹಸ್ರಾಕ್ಷಂ ಮಹಾಭುಜಮ್ ।
ಸಹಸ್ರಪಾಣಿಂ ದುರ್ಧರ್ಷಂ ಯುಗಾಂತಾನಿಲಸನ್ನಿಭಮ್ ॥ ೩೮ ॥

ದಂಷ್ಟ್ರಾಕರಾಲಂ ದುಷ್ಪ್ರೇಕ್ಷ್ಯಂ ಶಂಖಚಕ್ರಧರಂ ಪ್ರಭುಮ್ ।
ದಂಡಹಸ್ತಂ ಮಹಾನಾದಂ ಶಾರ್ಙ್ಗಿಣಂ ಭೂತಿಭೂಷಣಮ್ ॥ ೩೯ ॥

ವೀರಭದ್ರ ಇತಿ ಖ್ಯಾತಂ ದೇವದೇವಸಮನ್ವಿತಮ್ ।
ಸ ಜಾತಮಾತ್ರೋ ದೇವೇಶಮುಪತಸ್ಥೇ ಕೃತಾಂಜಲಿಃ ॥ ೪೦ ॥

ತಮಾಹ ದಕ್ಷಸ್ಯ ಮಖಂ ವಿನಾಶಯ ಶಿವೋಽಸ್ತು ತೇ ।
ವಿನಿಂದ್ಯ ಮಾಂ ಸ ಯಜತೇ ಗಂಗಾದ್ವಾರೇ ಗಣೇಶ್ವರ ॥ ೪೧ ॥

---

೩೮. ಆ ವೀರಭದ್ರಮೂರ್ತಿಯು ಸಹಸ್ರ ಶಿರಸ್ಸುಗಳುಳ್ಳವನೂ, ಕುಪಿತನೂ, ಸಹಸ್ರ ನೇತ್ರವುಳ್ಳವನೂ, ಮಹಾಭುಜಶಾಲಿಯೂ, ಸಹಸ್ರ ಹಸ್ತಗಳಿಂದ ಕೂಡಿದವನೂ, ಪರರಿಂದ ತಿರಸ್ಕರಿಸಲು ಅಶಕ್ಯನೂ ಮತ್ತು ಪ್ರಳಯಾಗ್ನಿಗೆ ಸಮಾನನೂ ಆಗಿದ್ದನು.

೩೯. ಮತ್ತು ಕೋರೆಹಲ್ಲುಗಳಿಂದ ಕರಾಳನೂ, ನೋಡಲು ಅಶಕ್ಯನೂ, ಶಂಖ-ಚಕ್ರಗಳನ್ನು ಧರಿಸಿದವನೂ, ಶಕ್ತನೂ, ಹಸ್ತದಲ್ಲಿ ದಂಡವನ್ನು ಧರಿಸಿದವನೂ, ಸಿಹ್ಮನಾದಮಾಡುವವನೂ, ಶೃಂಗಾಯುಧವನ್ನು ಧರಿಸಿದವನೂ ಮತ್ತು ಭಸ್ಮ ಲೇಪದಿಂದ ಶೋಭಿತನೂ ಆಗಿದ್ದನು.

೪೦. ಮತ್ತು ಮಹಾದೇವನಿಗೆ ಸಮಾನವಾದ ತೇಜಃಶಾಲಿಯೂ, ವೀರಭದ್ರನೆಂದು ಪ್ರಸಿದ್ಧನೂ ಆಗಿದ್ದನು. ಅವನು ಹುಟ್ಟಿದ ಕೂಡಲೇ ಬದ್ಧಾಂಜಲಿಯಾಗಿ ಮಹೇಶ್ವರನನ್ನು ಸಮೀಪಿಸಿದನು.

೪೧. ಆಗ ಶಿವನು ಗಣೇಶನನ್ನು ಕುರಿತು ಹೇಳಿದನು. ಗಣೇಶ್ವರನೇ ! ದಕ್ಷಬ್ರಹ್ಮನು ನನ್ನನ್ನು ನಿಂದಿಸಿ ಗಂಗಾದ್ವಾರದಲ್ಲಿ ಯಜ್ಞವನ್ನು ಮಾಡುತ್ತಾನೆ. ಆ ದಕ್ಷನ ಯಜ್ಞವನ್ನು ನಾಶಮಾಡು. ನಿನಗೆ ಕಲ್ಯಾಣವಾಗಲಿ.

ತತೋ ಬಂಧಪ್ರಮುಕ್ತೇನ ಸಿಹ್ಮೇನೈಕೇನ ಲೀಲಯಾ ।
ವೀರಭದ್ರೇಣ ದಕ್ಷಸ್ಯ ವಿನಾಶಮಗಮತ್ ಕ್ರತುಃ ॥ ೪೨ ॥

ಮನ್ಯುನಾ ಚೋಮಯಾ ಸೃಷ್ಟಾ ಭದ್ರಕಾಲೀ ಮಹೇಶ್ವರೀ ।
ತಯಾ ಚ ಸಾರ್ಧಂ ವೃಷಭಂ ಸಮಾರುಹ್ಯ ಯಯೌ ಗಣಃ ॥ ೪೩ ॥

ಅನ್ಯೇ ಸಹಸ್ರಶೋ ರುದ್ರಾ ನಿಸೃಷ್ಟಾಸ್ತೇನ ಧೀಮತಾ ।
ರೋಮಜಾ ಇತಿ ವಿಖ್ಯಾತಾಸ್ತಸ್ಯ ಸಾಹಾಯ್ಯಕಾರಿಣಃ ॥ ೪೪ ॥

ಶೂಲಶಕ್ತಿಗದಾಹಸ್ತಾ ದಂಡೋಪಲಕರಾಸ್ತಥಾ ।
ಕಾಲಾಗ್ನಿರುದ್ರಸಂಕಾಶಾ ನಾದಯಂತೋ ದಿಶೋ ದಶ ॥ ೪೫ ॥

---

೪೨. ಹೀಗೆಂದು ಹೇಳಿದ ತರುವಾಯ ಬಂಧದಿಂದ ಬಿಡುಗಡೆಯಾದ ಸಿಹ್ಮದಂತಿರುವ, ಏಕಾಕಿಯಾದ ವೀರಭದ್ರನಿಂದ ದಕ್ಷಬ್ರಹ್ಮನು ಮಾಡುತ್ತಿದ್ದ ಯಜ್ಞವು ಅನಾಯಾಸವಾಗಿ ಭಂಗವನ್ನು ಹೊಂದಿತು.

೪೩. ಅದೇ ಸಮಯದಲ್ಲಿ ಕುಪಿತಳಾದ ಪಾರ್ವತೀದೇವಿಯಿಂದ ಸರ್ವೇಶ್ವರಿಯಾದ ಭದ್ರಕಾಳೀದೇವಿಯು ಸೃಜಿಸಲ್ಪಟ್ಟಳು. ಆ ವೀರಭದ್ರನೆಂಬ ಗಣವು ಆ ಭದ್ರಕಾಳಿಯೊಡನೆ ವೃಷಭವಾಹನವನ್ನೇರಿ ಪ್ರಯಾಣಮಾಡಿದನು.

೪೪. ಆ ಸಮಯದಲ್ಲಿ ವೀರಭದ್ರನಿಗೆ ಸಹಾಯವನ್ನು ಮಾಡುವ, ರೋಮದಿಂದ ಹುಟ್ಟಿದವರೆಂದು ಪ್ರಸಿದ್ಧರಾದ, ಬೇರೆ ಸಹಸ್ರಾರುಮಂದಿ ರುದ್ರಮೂರ್ತಿಗಳು ಜ್ಞಾನಿಯಾದ ಮಹೇಶ್ವರನಿಂದ ಸೃಷ್ಟಿಸಲ್ಪಟ್ಟರು.

೪೫. ಆ ರುದ್ರಮೂರ್ತಿಗಳು ಹಸ್ತದಲ್ಲಿ ಶೂಲ-ಶಕ್ತಿ-ಗದೆ-ದಂಡ ಮತ್ತು ಶಿಲಾ ಮುಂತಾದ ಅನೇಕ ಆಯುಧಗಳನ್ನು ಧರಿಸಿದವರೂ, ಪ್ರಳಯಕಾಲದ ಸಂಹಾರಕ ರುದ್ರಮೂರ್ತಿಯಂತಿರುವವರೂ ಆಗಿ ಹತ್ತು ದಿಕ್ಕುಗಳನ್ನು ಧ್ವನಿ ಮಾಡಿಸಿದರು

ಸರ್ವೇ ವೃಷಭಮಾರೂಢಾ ಸಭಾರ್ಯಾಶ್ಚಾತಿಭೀಷಣಾಃ ।
ಸಮಾವೃತ್ಯ ಗಣಶ್ರೇಷ್ಠಂ ಯಯುರ್ದಕ್ಷಮುಖಂ ಪ್ರತಿ ॥ ೪೬ ॥

ಸರ್ವೇ ಸಂಪ್ರಾಪ್ಯ ತಂ ದೇಶಂ ಗಂಗಾದ್ವಾರಮಿತಿ ಶ್ರುತಮ್ ।
ದದೃಶುರ್ಯಜ್ಞದೇಶಂ ವೈ ದಕ್ಷಸ್ಯಾಮಿತತೇಜಸಃ ॥ ೪೭ ॥

ದೇವಾಂಗನಾಸಹಸ್ರಾಢ್ಯಮಪ್ಸರೋಗೀತನಾದಿತಮ್ ।
ವೇಣುವೀಣಾನಿನಾದಾಢ್ಯಂ ವೇದವಾದಾಭಿನಾದಿತಮ್ ॥ ೪೮ ॥

ದೃಷ್ಟ್ವಾ ಸಹರ್ಷಿಭಿರ್ದೇವೈಃ ಸಮಾಸೀನಂ ಪ್ರಜಾಪತಿಮ್ ।
ಉವಾಚ ಸ ಪ್ರಿಯೋ ರುದ್ರೈರ್ವೀರಭದ್ರಃ ಸ್ಮಯನ್ನಿವ ॥ ೪೯ ॥

---

೪೬. ಅವರೆಲ್ಲರೂ ವೃಷಭದಲ್ಲಿ ಕುಳಿತವರೂ, ಅತ್ಯಂತ ಭಯಂಕರರೂ ಆಗಿ ತಮ್ಮ ಭಾರ್ಯೆಯರೊಂದಿಗೆ ದಕ್ಷಬ್ರಹ್ಮನ ಯಜ್ಞಕರ್ಮಕ್ಕೆ ಎದುರಾಗಿ ಗಣಶ್ರೇಷ್ಠನಾದ ವೀರಭದ್ರನನ್ನು ಸುತ್ತಿ ನಿಂತರು.

೪೭. ಸರ್ವಜನರೂ ಆ ಸ್ಥಳಕ್ಕೆ ಬಂದು ಗಂಗಾದ್ವಾರವೆಂದು ಪ್ರಸಿದ್ಧವಾದ ಅಪಾರವಾದ ಪ್ರಭಾವವುಳ್ಳ ದಕ್ಷಬ್ರಹ್ಮನ ಆ ಯಜ್ಞಪ್ರದೇಶವನ್ನು ನೋಡಿದರು.

೪೮. ಆ ಯಜ್ಞ ಭೂಮಿಯು ಸಾವಿರಾರು ಮಂದಿ ದೇವಾಂಗನೆಯರಿಂದ ಪೂರ್ಣವೂ, ಅಪ್ಸರಃಸ್ತ್ರೀಯರು ಹಾಡುವ ಸಂಗೀತದಿಂದ ಗಾನಮಯವೂ, ಕೊಳಲು-ವೀಣೆ ಮುಂತಾದ ವಾದ್ಯಗಳ ಧ್ವನಿಯಿಂದ ರಮ್ಯವೂ ಮತ್ತು ವೇದಘೋಷದಿಂದ ಶಬ್ದಮಯವೂ ಆಗಿತ್ತು.

೪೯. ಆಗ ವೀರಭದ್ರನು ಋಷಿಗಳು ಮತ್ತು ದೇವತೆಗಳಿಂದ ಕೂಡಿ ಆ ಯಜ್ಞಶಾಲೆಯಲ್ಲಿ ಕುಳಿತುಕೊಂಡಿದ್ದ ಯಜಮಾನನಾದ ದಕ್ಷಬ್ರಹ್ಮನನ್ನು ನೋಡಿದನು. ಮತ್ತು ಈಶ್ವರನಿಗೆ ಪ್ರಿಯನಾದ ವೀರಭದ್ರನು ದಕ್ಷಬ್ರಹ್ಮನ ಆ ಯಜ್ಞ ಸಂಭ್ರಮವನ್ನು ನೋಡಿ ನಗುವನಂತೆ ಗಂಭೀರವಾದ ಈ ವಚನವನ್ನು ಹೇಳಿದನು.

ವಯಂ ಹ್ಯನುಚರಾಃ ಸರ್ವೇ ಶರ್ವಸ್ಯಾಮಿತತೇಜಸಃ ।
ಭಾಗಾರ್ಥಂ ಲಿಪ್ಸಯಾ ಭಾಗಾನ್ ಪ್ರಾಪ್ತಾ ಯಚ್ಛತ್ವಭೀಪ್ಸಿತಾನ್॥೫೦॥

ಅಥ ಚೇತ್ಕಸ್ಯಚಿದಿಯಂ ಮಾಯಾ ಮುನಿವರೋತ್ತಮಾಃ ।
ಭಾಗೋ ಭವದ್ಭ್ಯೋ ದೇಯಸ್ತು ನಾಸ್ಮಭ್ಯಮಿತಿ ಕಥ್ಯತಾಮ್ ॥ ೫೧ ॥

ತಂ ಬ್ರೂತಾಜ್ಞಾಪಯತಿ ಯೋ ವೇತ್ಸ್ಯಾಮೋ ಹಿ ವಯಂ ತತಃ ।
ಏವಮುಕ್ತಾಸ್ತ್ವಗಣೇಶೇನ ಪ್ರಜಾಪತಿಪುರಃಸರಾಃ ॥ ೫೨ ॥

ದೇವಾ ಊಚುಃ :—

ಪ್ರಮಾಣಂ ವೋ ನ ಜಾನೀಮೋ ಭಾಗೇ ಮಂತ್ರಾ ಇತಿ ಪ್ರಭುಮ್ ।
ಮಂತ್ರಾ ಊಚುಃ ಸುರಾ ಯೂಯಂ ತಮೋಽಪಹತಚೇತಸಃ ॥ ೫೩ ॥

---

೫೦. ನಾವು ಎಲ್ಲರೂ ಅಪಾರವಾದ ಮಹಿಮೆಯುಳ್ಳ ಈಶ್ವರನ ಸೇವಕರಾಗಿರುವೆವು, ಹವಿರ್ಭಾಗದ ಆಕಾಂಕ್ಷೆಯಿಂದ ಈ ಯಜ್ಞಭೂಮಿಗೆ ಬಂದಿದ್ದೇವೆ. ನಮಗೆ ಇಷ್ಟವಾದ ಭಾಗಗಳನ್ನು ಕೊಡು.

೫೧. ಮುನಿಶ್ರೇಷ್ಠರೇ! ಒಂದು ವೇಳೆ ಈ ವಿಷಯದಲ್ಲಿ ನಿಮ್ಮಿಂದ ನಮಗೆ ಯಾವುದೊಂದು ಹವಿರ್ಭಾಗವೂ ಕೊಡಬೇಕಾಗಿಲ್ಲವೆಂದು ಮಾಯಾರೂಪವಾದ ಆಜ್ಞೆಯನ್ನು ಯಾರಾದರೂ ಇಟ್ಟಿದ್ದರೆ ಅದು ಹೇಳಲ್ಪಡಲಿ.

೫೨. ಮತ್ತು ಯಾರು ಈ ರೀತಿ ಆಜ್ಞಾಪಿಸಿರುವನೋ; ಅವನನ್ನು ತೋರಿಸು. ತರುವಾಯ ನಾವು ತತ್ವವನ್ನು ತಿಳಿಯುತ್ತೇವೆ; ಹೀಗೆಂದು ಗಣೇಶ್ವರನಾದ ವೀರಭದ್ರನಿಂದ ಬ್ರಹ್ಮನೇ ಮುಂತಾದ ದೇವತೆಗಳು ಹೇಳಲ್ಪಟ್ಟರು.

೫೩. ದೇವತೆಗಳು ಹೀಗೆಂದರು :– ನಿಮಗೆ ಆಹುತಿಯನ್ನು ಕೊಡುವುದರಲ್ಲಿ ಆಧಾರವಾದ ಮಂತ್ರಗಳನ್ನು ಪ್ರಮಾಣವನ್ನಾಗಿ ನಾವು ಕಂಡಿಲ್ಲ. ಆಗ ಮಂತ್ರಗಳು ದೇವತೆಗಳೇ! ನೀವೆಲ್ಲರೂ ತಮೋಗುಣದಿಂದ ನಷ್ಟವಾದ ಪ್ರಜ್ಞೆಯುಳ್ಳವರಾಗಿದ್ದೀರಿ; ಹೀಗೆಂದು ಹೇಳಿದುವು.

ಯೇನಾಧ್ವರಸ್ಯ ರಾಜಾನಂ ಪೂಜಯೇಯುರ್ಮಹೇಶ್ವರಮ್ ।
ಈಶ್ವರಃ ಸರ್ವಭೂತಾನಾಂ ಸರ್ವದೇವತನುರ್ಹರಃ ॥ ೫೪ ॥

ಪೂಜ್ಯತೇ ಸರ್ವಯಜ್ಞೇಷು ಸರ್ವಾಭ್ಯುದಯಸಿದ್ಧಿದಃ ।
ಏವಮುಕ್ತ್ವಾ ಮಹೇಶಾನಮಾಯಯಾ ನಷ್ಟಚೇತನಾಃ ॥ ೫೫ ॥

ನ ಮೇನಿರೇ ಯಯುರ್ಮಂತ್ರಾ ದೇವಾನ್ಮುಕ್ತ್ವಾ ಸ್ವಮಾಲಯಮ್ ।
ತತಃ ಸಭದ್ರೋ ಭಗವಾನ್ ಸಭಾರ್ಯಃ ಸಗಣೇಶ್ವರಃ ॥ ೫೬ ॥

ಸ್ಪೃಶನ್ ಕರಾಭ್ಯಾಂ ವಿಪ್ರರ್ಷಿದಧೀಚಂ ಪ್ರಾಹ ದೇವಹಾ ।
ಮಂತ್ರಾಃ ಪ್ರಮಾಣಂ ನ ಕೃತಾ ಯುಷ್ಮಾಭಿರ್ಬಲದರ್ಪಿತೈಃ ॥ ೫೭ ॥

---

೫೪. ಹೀಗಿರಲು ಯಜ್ಞಕರ್ಮಕ್ಕೆ ಪ್ರಭುವಾದ ಮಹೇಶ್ವರನನ್ನು ಯಜ್ಞದಲ್ಲಿ ನೀವು ಪೂಜಿಸುವುದೆಂತು ? ಪರಮೇಶ್ವರನು ಸರ್ವಭೂತಗಳಿಗೆ ಒಡೆಯನೂ ಸಮಸ್ತ ದೇವತಾಮೂರ್ತಿಯೂ ಆಗಿರುವನು.

೫೫. ಸಮಸ್ತ ಅಭ್ಯುದಯಸಿದ್ಧಿಯನ್ನು ಕೊಡುವ ಇಂತಹ ಪರಮೇಶ್ವರನು ಸರ್ವ ಯಜ್ಞಗಳಲ್ಲಿ ಪೂಜಿಸಲ್ಪಡುತ್ತಾನೆ. ಮಂತ್ರಗಳು ಈಶ್ವರಮಾಯೆಯಿಂದ ಪ್ರಜ್ಞಾರಹಿತರಾದ ದೇವತೆಗಳನ್ನು ಕುರಿತು ಹೀಗೆಂದು ಹೇಳಿದುವು.

೫೬. ಆಗ ದೇವತೆಗಳು ಈ ತತ್ವವನ್ನು ತಿಳಿಯದಿರಲು ಆ ದೇವತೆಗಳನ್ನು ಬಿಟ್ಟು ಮಂತ್ರಗಳು ತಮ್ಮ ವಾಸಭೂಮಿಗೆ ಹೊರಟುಹೋದುವು. ತರುವಾಯ ಗಣೇಶ್ವರನಿಂದಲೂ, ಭಾರ್ಯೆಯಿಂದಲೂ ಕೂಡಿದ ಪೂಜ್ಯನಾದ ಆ ವೀರಭದ್ರನು ಯಜ್ಞಭಂಗದಲ್ಲಿ ಪ್ರವೃತ್ತನಾದನು.

೫೭. ಆಗ ದೇವತೆಗಳನ್ನು ಧ್ವಂಸಮಾಡುವ ವೀರಭದ್ರನು ತನ್ನ ಕೈಗಳಿಂದ ದಧೀಚ ಬ್ರಹ್ಮರ್ಷಿಯನ್ನು ಸ್ಪರ್ಶಿಸುತ್ತಾ ಹೀಗೆ ಹೇಳಿದನು. ಬಲದಿಂದ ಉನ್ಮತ್ತರಾದ ನಿಮ್ಮಿಂದ ಮಂತ್ರಗಳು ಪ್ರಮಾಣರೂಪವಾಗಿ ತಿಳಿಯಲ್ಪಟ್ಟಿಲ್ಲ.

ಯಸ್ಮಾತ್ತ್ವಪ್ರಸಹ್ಯ ತಸ್ಮಾದ್ವೋ ನಾಶಯಾಮ್ಯದ್ಯ ಗರ್ವಿತಾನ್ ।
ಇತ್ಯುಕ್ತ್ವಾ ಯಜ್ಞಶಾಲಾಂ ತಾಂ ದದಾಹ ಗಣಪುಂಗವಃ ॥ ೫೮ ॥

ಗಣೇಶ್ವರಾಶ್ಚ ಸಂಕ್ರುದ್ಧಾ ಯೂಪಾನುತ್ಪಾಟ್ಯ ಚಿಕ್ಷಿಪುಃ ।
ಪ್ರಸ್ತೋತ್ರಾ ಸಹ ಹೋತ್ರಾ ಚ ಅಶ್ವಂ ಚೈವ ಗಣೇಶ್ವರಾಃ ॥ ೫೯ ॥

ಗೃಹೀತ್ವಾ ಭೀಷಣಾಃ ಸರ್ವೇ ಗಂಗಾಸ್ರೋತಸಿ ಚಿಕ್ಷಿಪುಃ ।
ವೀರಭದ್ರೋಽಪಿ ದೀಪ್ತಾತ್ಮಾ ಶಕ್ರಸ್ಯೈವೋದ್ಯತಂ ಕರಮ್ ॥ ೬೦ ॥

ವ್ಯಷ್ಟಂಭಯದದೀನಾತ್ಮಾ ತಥಾನ್ಯೇಷಾಂ ದಿವೌಕಸಾಮ್ ।
ಭಗನೇತ್ರೇ ತಥೋತ್ಪಾಟ್ಯ ಕರಾಗ್ರೇಣೈವ ಲೀಲಯಾ ॥ ೬೧ ॥

---

೫೮. ಆದ್ದರಿಂದ ಈಗ ಅಹಂಕಾರಿಗಳಾದ ನಿಮ್ಮೆಲ್ಲರನ್ನೂ ಬಲಾತ್ಕಾರವಾಗಿ ಸಂಹರಿಸುತ್ತೇನೆ. ಹೀಗೆಂದು ಹೇಳಿ ಗಣಗಳಲ್ಲಿ ಶ್ರೇಷ್ಠನಾದ ವೀರಭದ್ರನು ಆ ಯಜ್ಞಶಾಲೆಯನ್ನು ಸುಟ್ಟುಹಾಕಿದನು.

೫೯. ಮತ್ತು ಅಲ್ಲಿದ್ದ ಇತರ ಗಣಾಧಿಪತಿಗಳು ಕುಪಿತರಾಗಿ ಯೂಪಸ್ತಂಭಗಳನ್ನು ಕಿತ್ತು ಒಗೆದರು. ಮತ್ತು ಕೆಲವು ಗಣೇಶ್ವರರು ಪ್ರಸ್ತೋತ ಹೋತ ಎಂಬ ಋತ್ವಿಜರನ್ನೂ, ಅಶ್ವವನ್ನೂ ನೆಲದಿಂದ ಮೇಲಕ್ಕೆತ್ತಿದರು.

೬೦. ಹಾಗೆ ಎತ್ತಿದ ಆ ಉಪಕರಣಗಳನ್ನು ಭೀಷಣರಾದ ಗಣೇಶ್ವರರು ಗಂಗಾಪ್ರವಾಹದಲ್ಲಿ ಎಸೆದರು. ಆಗ ಇದನ್ನು ತಡೆಯಲು ಮೇಲಕ್ಕೆತ್ತಿದ್ದ ಇಂದ್ರನ ಹಸ್ತವನ್ನು ಉಜ್ವಲಮೂರ್ತಿಯಾದ ವೀರಭದ್ರನು ತಡೆಗಟ್ಟಿದನು.

೬೧. ವೀರಭದ್ರನು ಸ್ವಲ್ಪವೂ ದೈನ್ಯವಿಲ್ಲದ ಚಿತ್ತವುಳ್ಳವನಾಗಿ ಇತರ ದೇವತೆಗಳಿಗೆ ಪೀಡೆಯನ್ನುಂಟುಮಾಡಿದನು. ಭಗದೇವತೆಯ ಕಣ್ಣುಗಳನ್ನು ಹಸ್ತಾಗ್ರದಿಂದ ಆಟವಾಡುವಂತೆ ಕಿತ್ತನು.

ನಿಹತ್ಯ ಮುಷ್ಟಿನಾ ದಂತಾನ್ ಪೂಷ್ಣಶ್ಚೈವಮಪಾಟಯತ್ ।
ತಥಾ ಚಂದ್ರಮಸಂ ದೇವಂ ಪಾದಾಂಗುಷ್ಠೇನ ಲೀಲಯಾ ॥ ೬೨ ॥

ಧರ್ಷಯಾಮಾಸ ಬಲವಾನ್ ಸ್ಮಯಮಾನೋ ಗಣೇಶ್ವರಃ ।
ವಹ್ನೇರ್ಹಸ್ತದ್ವಯಂ ಛಿತ್ವಾ ಜಿಹ್ವಾಮುತ್ಪಾಟ್ಯ ಲೀಲಯಾ ॥ ೬೩ ॥

ಜಘಾನ ಮೂರ್ಧ್ನಿ ಪಾದೇನ ಮುನೀನಪಿ ಮುನೀಶ್ವರಾಃ ।
ತಥಾ ವಿಷ್ಣುಂ ಸಗರುಡಂ ಸಮಾಯಾಂತಂ ಮಹಾಬಲಃ ॥ ೬೪ ॥

ವಿವ್ಯಾಧ ನಿಶಿತೈರ್ಬಾಣೈಃ ಸ್ತಂಭಯಿತ್ವಾ ಸುದರ್ಶನಮ್ ।
ಸಮಾಲೋಕ್ಯ ಮಹಾಬಾಹುರಾಗತ್ಯ ಗರುಡೋ ಗಣಮ್ ॥ ೬೫ ॥

---

೬೨. ಹಾಗು ಪೂಷದೇವತೆಯ ಹಲ್ಲುಗಳನ್ನು ಮುಷ್ಟಿಯಿಂದ ಹೊಡೆದು ಬಿಡಿಸಿದನು. ಮತ್ತು ಚಂದ್ರದೇವನನ್ನು ಕಾಲಿನ ಹೆಬ್ಬೆರಳಿನಿಂದ ಮೇಲಕ್ಕೆತ್ತಿ ತಿರಸ್ಕರಿಸಿದನು.

೬೩. ಮತ್ತು ಬಲಿಷ್ಠನಾದ ವೀರಭದ್ರನೆಂಬ ಆ ಗಣೇಶ್ವರನು ನಗುತ್ತಾ ಅಗ್ನಿದೇವನ ಎರಡು ಕೈಗಳನ್ನು ಕತ್ತರಿಸಿ ಆಟದಂತೆ ನಾಲಿಗೆಯನ್ನು ಕಿತ್ತು ಹಾಕಿದನು.

೬೪. ಮುನೀಶ್ವರರೇ! ಮತ್ತು ಅಲ್ಲಿ ಸೇರಿದ ಸಹಸ್ರ ಮಹರ್ಷಿಗಳ ತಲೆಯಲ್ಲಿ ಕಾಲಿನಿಂದ ಒದ್ದನು. ಆಗ ಗರುಡವಾಹನದಲ್ಲಿ ಕುಳಿತು ಬರುತ್ತಿದ್ದ ವಿಷ್ಣುವನ್ನು ಮಹಾಬಲಿಷ್ಠನಾದ ವೀರಭದ್ರನು ನೋಡಿದನು.

೬೫. ಮತ್ತು ವಿಷ್ಣುವಿನ ಸುದರ್ಶನ ಚಕ್ರವನ್ನು ತಡೆಗಟ್ಟಿ ಹರಿತವಾದ ಬಾಣಗಳನ್ನು ಪ್ರಯೋಗಿಸಿದನು. ಆಗ ಅಧಿಕವಾದ ಬಾಹುಬಲವುಳ್ಳ ಗರುಡನು ಗಣೇಶ್ವರನನ್ನು ನೋಡಿ ಮೇಲೆರಗಿದನು.

ಜಘಾನ ಪಕ್ಷೈಃ ಸಹಸಾ ನನಾದಾಂಬುನಿಧಿರ್ಯಥಾ ।
ತತಃ ಸಹಸ್ರಶೋ ರುದ್ರಃ ಸಸರ್ಜ ಗರುಡಾನ್ ಸ್ವಯಮ್ ॥ ೬೬ ॥

ವೈನತೇಯಾದಭ್ಯಧಿಕಾನ್ ಗರುಡಂ ತೇ ಪ್ರದುದ್ರುವುಃ ।
ತಾನ್ ದೃಷ್ಟ್ವಾ ಗರುಡೋ ಧೀಮಾನ್ ಪಲಾಯತ ಮಹಾಜವಃ ॥ ೬೭ ॥

ವಿಸೃಜ್ಯ ಮಾಧವಂ ವೇಗಾತ್ತದದ್ಭುತಮಿವಾಭವತ್ ।
ಅಂತರ್ಹಿತೇ ವೈನತೇಯೇ ಭಗವಾನ್ ಪದ್ಮಸಂಭವಃ ॥ ೬೮ ॥

ಆಗತ್ಯ ವರಯಾಮಾಸ ವೀರಭದ್ರಂ ಚ ಕೇಶವಮ್ ।
ಪ್ರಸಾದಯಾಮಾಸ ಚ ತಂ ಗೌರವಾತ್ಪರಮೇಷ್ಠಿನಃ ॥ ೬೯ ॥

---

೬೬. ಮತ್ತು ಸಮುದ್ರದಂತೆ ಗರ್ಜಿಸುತ್ತಾ ಬಲಾತ್ಕಾರವಾಗಿ ತನ್ನ ರೆಕ್ಕೆಗಳಿಂದ ವೀರಭದ್ರನನ್ನು ಹೊಡೆದನು. ಆಗ ರುದ್ರನು ತಾನು ಸಹಸ್ರಾರು ಗರುಡ ಪಕ್ಷಿಗಳನ್ನು ಪ್ರತಿಯಾಗಿ ಸೃಷ್ಟಿಸಿದನು.

೬೭. ವಿನತಾ ಪುತ್ರನಾದ ಗರುಡನಿಗಿಂತ ಹೆಚ್ಚಾದ, ರುದ್ರನ ಆ ಗರುಡ ಪಕ್ಷಿಗಳು ವಿಷ್ಣುವಿನ ಗರುಡನನ್ನು ಓಡಿಸಿದುವು. ಅವುಗಳನ್ನು ನೋಡಿ ಬುದ್ಧಿಶಾಲಿಯಾದ ಗರುಡನು ಅತಿ ವೇಗದಿಂದ ಓಡಿ ಹೋದನು.

೬೮. ಗರುಡನು ಮಹಾವಿಷ್ಣುವನ್ನು ಬಿಟ್ಟು ವೇಗದಿಂದ ಪಲಾಯನ ಮಾಡಿರುವುದು ಒಂದು ಅದ್ಭುತದಂತಾಯಿತು. ಆಗ ಗರುಡನು ಅಂತರ್ಧಾನ ಹೊಂದಲು ಪೂಜ್ಯನಾದ, ಕಮಲವಾಸಿಯಾದ ಬ್ರಹ್ಮನು ಅಲ್ಲಿಗೆ ಬಂದನು.

೬೯. ಆ ಬ್ರಹ್ಮದೇವನು ಅಲ್ಲಿಗೆ ಬಂದು ವೀರಭದ್ರನನ್ನೂ ಮಹಾವಿಷ್ಣುವನ್ನೂ ತಡೆದನು. ಮತ್ತು ಬ್ರಹ್ಮದೇವನ ಗೌರವದಿಂದ ಅವರಿಬ್ಬರೂ ಪರಮೇಶ್ವರನನ್ನು ಸ್ತುತಿಸಿ ಪ್ರಸನ್ನಗೊಳಿಸಿದರು.

ಸಂಸ್ತೂಯ ಭಗವಾನೀಶಂ ಶಂಭುಸ್ತತ್ರಾಗಮತ್ ಸ್ವಯಮ್ ।
ವೀಕ್ಷ್ಯ ದೇವಾಧಿದೇವಂ ತಮುಮಾಂ ಸರ್ವಗುಣೈರ್ವೃತಾಮ್ ॥ ೭೦ ॥

ತುಷ್ಟಾವ ಭಗವಾನ್ ಬ್ರಹ್ಮಾ ದಕ್ಷಃ ಸರ್ವೇ ದಿವೌಕಸಃ ।
ವಿಶೇಷಾತ್ಪಾರ್ವತೀಂ ದೇವೀಮೀಶ್ವರಾರ್ಧಶರೀರಿಣೀಮ್ ॥ ೭೧ ॥

ಸ್ತೋತ್ರೈರ್ನಾನಾವಿಧೈರ್ದಕ್ಷಃ ಪ್ರಣಮ್ಯ ಚ ಕೃತಾಂಜಲಿಃ ।
ತತೋ ಭಗವತೀ ದೇವೀ ಪ್ರಹಸಂತೀ ಮಹೇಶ್ವರಮ್ ॥ ೭೨ ॥

ಪ್ರಸನ್ನಮನಸಾ ರುದ್ರಂ ವಚಃ ಪ್ರಾಹ ಘೃಣಾನಿಧಿಃ ।
ತ್ವಮೇವ ಜಗತಃ ಸ್ರಷ್ಟಾ ಶಾಸಿತಾ ಚೈವ ರಕ್ಷಿತಾ ॥ ೭೩ ॥

---

೭೦. ಸ್ತುತಿಯಿಂದ ಪ್ರಸನ್ನನಾದ, ಭಗವಂತನಾದ ಶಂಕರನು ತಾನಾಗಿ ಆ ಸ್ಥಳಕ್ಕೆ ಬಂದನು. ಆಗ ಸರ್ವಗುಣಗಳಿಂದ ಅಲಂಕೃತಳಾದ ಪಾರ್ವತೀದೇವಿಯನ್ನೂ ದೇವೋತ್ತಮನಾದ ಈಶ್ವರನನ್ನೂ ಎಲ್ಲರೂ ಕಂಡರು.

೭೧. ಆಗ ಪೂಜ್ಯನಾದ ಬ್ರಹ್ಮದೇವನೂ, ದಕ್ಷಪ್ರಜಾಪತಿಯೂ ಮತ್ತು ಸಮಸ್ತ ದೇವತೆಗಳೂ ಉಮಾಮಹೇಶ್ವರರನ್ನು ಸ್ತುತಿಸಿದರು. ದಕ್ಷಬ್ರಹ್ಮನು ಈಶ್ವರನ ಅರ್ಧಾಂಗಿಯಾದ ಪಾರ್ವತೀದೇವಿಯನ್ನು ಅತಿಶಯವಾಗಿ ಸ್ತುತಿಸಿದನು.

೭೨. ಬದ್ಧಾಂಜಲಿಯಾದ ದಕ್ಷನು ವಿವಿಧ ಸ್ತೋತ್ರಗಳಿಂದ ಸ್ತುತಿಸಿ ದೇವಿಯನ್ನು ನಮಸ್ಕರಿಸಿದನು. ಅನಂತರದಲ್ಲಿ ಪೂಜ್ಯಳಾದ ಪಾರ್ವತೀದೇವಿಯು ನಗುತ್ತಾ ಈಶ್ವರನನ್ನು ನೋಡಿದಳು.

೭೩. ಕರುಣಾನಿಧಿಯಾದ ಪಾರ್ವತಿಯು ಪ್ರಸನ್ನವಾದ ಮನಸ್ಸಿನಿಂದ ರುದ್ರನಿಗೆ ಈ ವಚನವನ್ನು ಹೇಳಿದಳು:–ಪತಿದೇವನೇ! ಜಗತ್ತನ್ನು ಸೃಷ್ಟಿಸುವವನೂ, ಶಾಸನಮಾಡುವವನೂ ಮತ್ತು ಪಾಲಿಸುವವನೂ ನೀನೇ ಆಗಿದ್ದೀ.

ಅನುಗ್ರಾಹ್ಯೋ ಭಗವತಾ ದಕ್ಷಶ್ಚಾಪಿ ದಿವೌಕಸಃ ।
ತತಃ ಪ್ರಹಸ್ಯ ಭಗವಾನ್ ಕಪರ್ದೀ ನೀಲಲೋಹಿತಃ ॥ ೭೪ ॥

ಉವಾಚ ಪ್ರಣತಾನ್ ದೇವಾನ್ ಪ್ರಾಚೇತಸಮುಖೋ ಹರಃ ।
ಗಚ್ಛಧ್ವಂ ದೇವತಾಃ ಸರ್ವಾಃ ಪ್ರಸನ್ನೋ ಭವತಾಮಹಮ್ ॥ ೭೫ ॥

ಸಂಪೂಜ್ಯಃ ಸರ್ವಯಜ್ಞೇಷು ನ ನಿಂದ್ಯೋಽಹಂ ವಿಶೇಷತಃ ।
ತ್ವಂ ಚಾಪಿ ಶೃಣು ಮೇ ದಕ್ಷ ವಚನಂ ಸರ್ವರಕ್ಷಣಮ್ ॥ ೭೬ ॥

ತ್ಯಕ್ತ್ವಾ ಲೋಕೈಷಣಾಮೇತಾಂ ಮದ್ಭಕ್ತೋ ಭವ ಯತ್ನತಃ ।
ಭವಿಷ್ಯಸಿ ಗಣೇಶಾನಾಃ ಕಲ್ಪಾಂತೇಽನುಗ್ರಹಾನ್ಮಮ ॥ ೭೭ ॥

ತಾವತ್ತಿಷ್ಠ ಮಮಾದೇಶಾತ್ ಸ್ವಾಧಿಕಾರೇಷು ನಿರ್ವೃತಃ ।
ಏವಮುಕ್ತ್ವಾ ತು ಭಗವಾನ್ ಸಪತ್ನೀಕಃ ಸಹಾನುಗಃ ॥ ೭೮ ॥

---

೭೪. ಪೂಜ್ಯನಾದ ನಿನ್ನಿಂದ ಈ ದಕ್ಷಬ್ರಹ್ಮನು ಮತ್ತು ಸಮಸ್ತ ದೇವತೆಗಳು ಅನುಗ್ರಹಿಸಲ್ಪಡಬೇಕು. ಆಗ ಜಟಾಮಂಡಲಧಾರಿಯೂ ನೀಲಲೋಹಿತ ವರ್ಣವುಳ್ಳವನೂ ಆದ ಶಂಕರನು ನಕ್ಕನು.

೭೫. ಮತ್ತು ನಮಸ್ಕಾರಮಾಡಿರುವ ದೇವತೆಗಳನ್ನೂ, ಪ್ರಚೇತಪುತ್ರನಾದ ದಕ್ಷಬ್ರಹ್ಮನನ್ನೂ ಕುರಿತು ಶಿವನು ಹೇಳಿದನು. ಸಮಸ್ತ ದೇವತೆಗಳೇ ! ನಿಮ್ಮೆಲ್ಲರಿಗೂ ನಾನು ಪ್ರಸನ್ನನಾಗಿರುವೆನು. ನೀವೆಲ್ಲರೂ ಹೊರಟುಹೋಗಿ.

೭೬. ಸಮಸ್ತ ಯಜ್ಞಗಳಲ್ಲೂ ನಾನು ವಿಶೇಷವಾಗಿ ಪೂಜಾರ್ಹನಾಗಿರುವೆನು, ನನ್ನನ್ನು ನಿಂದಿಸಲಾಗದು, ದಕ್ಷಬ್ರಹ್ಮನೇ ! ಸರ್ವರಕ್ಷಣೆಗೆ ಕಾರಣವಾದ ನನ್ನ ವಚನವನ್ನು ನೀನು ಕೇಳು.

೭೭. ನೀನು ಈ ಲೌಕಿಕ ಹಿತ ಕಾಮನೆಯನ್ನು ಬಿಟ್ಟು ಪ್ರಯತ್ನದಿಂದ ನನ್ನ ಭಕ್ತನಾಗು. ಕಲ್ಪಾಂತದಲ್ಲಿ ನನ್ನ ಅನುಗ್ರಹದಿಂದ ನೀನು ಗಣೇಶ್ವರನಾಗುತ್ತೀ.

೭೮. ಆ ಕಲ್ಪಾಂತಕಾಲದವರೆಗೂ ನನ್ನ ಆಜ್ಞೆಯಂತೆ ನಿನ್ನ ಅಧಿಕಾರ ಕ್ರಮದಲ್ಲಿ ಸುಖವಾಗಿರು. ಹೀಗೆಂದು ಹೇಳಿ ಪತ್ನೀ-ಪರಿವಾರದಿಂದ ಕೂಡಿದ ಭಗವಂತನಾದ ಶಂಕರನು ಅಂತರ್ಹಿತನಾದನು.

ಅದರ್ಶನಮನುಪ್ರಾಪ್ತೋ ದಕ್ಷಸ್ಯಾಮಿತತೇಜಸಃ ।
ಅಂತರ್ಹಿತೇ ಮಹಾದೇವೇ ಶಂಕರೇ ಪದ್ಮಸಂಭವಃ ॥ ೭೯ ॥

ವ್ಯಾಜಹಾರ ಸ್ವಯಂ ದಕ್ಷಮಶೇಷಜಗತೋ ಹಿತಮ್ ।

ಬ್ರಹ್ಮೋವಾಚ :—

ಕಿಂ ಚಾಯಂ ಭವತೋ ಮೋಹಃ ಪ್ರಸನ್ನೇ ವೃಷಭಧ್ವಜೇ ॥ ೮೦ ॥

ಯದಾ ಚ ಸ ಸ್ವಯಂ ದೇವಃ ಪಾಲಯೇತ್ ತ್ವಾಮತಂದ್ರಿತಃ ।
ಸರ್ವೇಷಾಮೇವ ಭೂತಾನಾಂ ಹೃದ್ಯೇಷ ಪರಮೇಶ್ವರಃ ॥ ೮೧ ॥

ಪಶ್ಯಂತಿ ಯಂ ಬ್ರಹ್ಮಭೂತಾ ವಿದ್ವಾಂಸೋ ವೇದವಾದಿನಃ ।
ಸ ಚಾತ್ಮಾ ಸರ್ವಭೂತಾನಾಂ ಸ ಬೀಜಂ ಪರಮಾ ಗತಿಃ ॥ ೮೨ ॥

---

೭೯. ಆಗ ಶಂಕರನು ಅಗಣ್ಯವಾದ ಮಹಿಮೆಯುಳ್ಳ ದಕ್ಷಬ್ರಹ್ಮನಿಗೆ ಕಾಣದಂತಾದನು. ಹೀಗೆ ಮಹಾದೇವನಾದ ಶಂಕರನು ಅದೃಶ್ಯನಾಗಲು ಕಮಲಾಸನನಾದ ಬ್ರಹ್ಮನು ದಕ್ಷಬ್ರಹ್ಮನನ್ನು ಸಮೀಪಿಸಿದನು.

೮೦. ಮತ್ತು ಸಮಸ್ತ ಜಗತ್ತಿಗೂ ಹಿತಕರವಾದ ವಚನವನ್ನು ಬ್ರಹ್ಮದೇವನು ತಾನಾಗಿ ದಕ್ಷನಿಗೆ ಹೇಳಿದನು. ಬ್ರಹ್ಮದೇವನು ಇಂತೆಂದನು :— ವೃಷಭದಿಂದ ಅಂಕಿತವಾದ ಧ್ವಜವುಳ್ಳ ಪರಮಶಿವನು ಪ್ರಸನ್ನನಾಗಿರಲು ಇದೇನು ನಿನ್ನ ಮೋಹವು ?

೮೧. ಆಲಸ್ಯವಿಲ್ಲದೆ ಆ ಮಹಾದೇವನು ತಾನೇ ನಿನ್ನನ್ನು ರಕ್ಷಿಸುವನಲ್ಲವೇ? ಆ ಪರಮೇಶ್ವರನು ಸಮಸ್ತಭೂತಗಳ ಅಂತರಾತ್ಮದಲ್ಲಿ ವಾಸಮಾಡಿರುವನು.

೮೨. ಬ್ರಹ್ಮಸ್ವರೂಪರೂ, ವೇದವಾದಿಗಳೂ ಆದ ಮಹಾ ಜ್ಞಾನಿಗಳು ಯಾವ ಪರಮಶಿವನನ್ನು ಸಾಕ್ಷಾತ್ಕರಿಸಿರುವರೋ ; ಆ ಪರಮಶಿವನು ಸರ್ವ ಪ್ರಾಣಿಗಳಿಗೆ ಆತ್ಮರೂಪನೂ, ಬೀಜಸ್ವರೂಪನೂ, ಪರಮಸದ್ಗತಿಯೂ ಆಗಿರುವನು.

ಸ್ತೂಯತೇ ವೈದಿಕೈರ್ಮಂತ್ರೈರ್ದೇವದೇವೋ ಮಹೇಶ್ವರಃ ।
ತಮರ್ಚಯಂತಿ ಯೇ ರುದ್ರಂ ಸ್ವಾತ್ಮನಾ ಚ ಸನಾತನಮ್ ॥ ೮೩ ॥

ಚೇತಸಾ ಭಾವಯುಕ್ತೇನ ತೇ ಯಾಂತಿ ಪರಮಂ ಪದಮ್ ।
ತಸ್ಮಾದನಾದಿಮಧ್ಯಾಂತಂ ವಿಜ್ಞಾಯ ಪರಮೇಶ್ವರಮ್ ॥ ೮೪ ॥

ಕರ್ಮಣಾ ಮನಸಾ ವಾಚಾ ಸಮಾರಾಧಯ ಯತ್ನತಃ ।
ಯತ್ನಾತ್ಪರಿಹರೇಶಸ್ಯ ನಿಂದಾಂ ಸ್ವಾತ್ಮವಿನಾಶಿನೀಮ್ ॥ ೮೫ ॥

ಭವಂತಿ ಸರ್ವದೋಷಾಯ ನಿಂದಕಸ್ಯ ಕ್ರಿಯಾ ಹಿ ತಾಃ ।
ಯಸ್ತು ಚೈಷ ಮಹಾಯೋಗೀ ರಕ್ಷಕೋ ವಿಷ್ಣುರವ್ಯಯಃ ॥ ೮೬ ॥

---

೮೩. ದೇವೋತ್ತಮನಾದ ಆ ಮಹೇಶ್ವರನು ಅನೇಕ ವೈದಿಕ ಮಂತ್ರಗಳಿಂದ ಸ್ತುತಿಸಲ್ಪಡುತ್ತಾನೆ. ಅನೇಕ ಮಾನವರು ಸನಾತನನಾದ ಆ ರುದ್ರನನ್ನು ಸ್ವಾತ್ಮರೂಪದಿಂದ ಪೂಜಿಸುತ್ತಾರೆ.

೮೪. ಏಕಾಗ್ರತೆ ಮತ್ತು ಭಾವನೆಗಳಿಂದ ಕೂಡಿದ ಮನಸ್ಸಿನಿಂದ ಪೂಜಿಸಿದ ಮಾನವರು ಪರಮಪದವನ್ನು ಹೊಂದುತ್ತಾರೆ. ಆದ್ದರಿಂದ ನೀನು ಆದಿ-ಮಧ್ಯ-ಅಂತಗಳಿಂದ ವರ್ಜಿತನಾದ ಪರಮಶಿವನನ್ನು ತಿಳಿ.

೮೫. ಮತ್ತು ಕರ್ಮ-ಮಾನಸ ವಚನಗಳಿಂದ ಪ್ರಯತ್ನ ಪೂರ್ವಕವಾಗಿ ಆರಾಧಿಸು. ಹಾಗು ತನ್ನ ಆತ್ಮವಿನಾಶಕ್ಕೆ ಕಾರಣವಾದ ಪರಮಶಿವನ ನಿಂದೆಯನ್ನು ಪ್ರಯತ್ನದಿಂದ ವರ್ಜಿಸು.

೮೬. ಪರಮಶಿವನನ್ನು ನಿಂದಿಸುವವನ ಸತ್ಕರ್ಮಗಳೆಲ್ಲವೂ ನಾನಾ ವಿಧವಾದ ಅನರ್ಥಕ್ಕೆ ಕಾರಣವಾಗುವುವು. ಮಹಾಯೋಗಿಯೂ, ಶಾಶ್ವತನೂ ಆದ ಮಹಾ ವಿಷ್ಣುವು ಪ್ರಪಂಚದ ರಕ್ಷಕನಾಗಿರುವನಲ್ಲವೇ.

ಸ ದೇವೋ ಭಗವಾನ್ ರುದ್ರೋ ಮಹಾದೇವೋ ನ ಸಂಶಯಃ ।
ಮನ್ಯಂತೇ ಯೇ ಜಗದ್ಯೋನಿಂ ವಿಭಿನ್ನಂ ವಿಷ್ಣುಮೀಶ್ವರಾತ್ ॥ ೮೭ ॥

ಮೋಹಾದವೇದನಿಷ್ಠತ್ವಾತ್ತೇ ಯಾಂತಿ ನರಕಂ ನರಾಃ ।
ವೇದಾನುವರ್ತಿನೋ ರುದ್ರಂ ದೇವಂ ನಾರಾಯಣಂ ತಥಾ ॥ ೮೮ ॥

ಏಕೀಭಾವೇನ ಪಶ್ಯಂತಿ ಮುಕ್ತಿಭಾಜೋ ಭವಂತಿ ತೇ ।
ಯೋ ವಿಷ್ಣುಃ ಸ ಸ್ವಯಂ ರುದ್ರೋ ಯೋ ರುದ್ರಃ ಸ ಜನಾರ್ದನಃ॥೮೯

ಇತಿ ಮತ್ವಾ ಭಜೇದ್ದೇವಂ ಸ ಯಾತಿ ಪರಮಾಂ ಗತಿಮ್ ।
ಸೃಜತ್ಯೇಷ ಜಗತ್ಸರ್ವಂ ವಿಷ್ಣುಸ್ತತ್ಪಶ್ಯತೀಶ್ವರಃ ॥ ೯೦ ॥

---

೮೭. ಆ ವಿಷ್ಣುವು ಕೂಡ ಭಗವಂತನೂ, ದೇವೋತ್ತಮನೂ ಆದ ರುದ್ರ ಸ್ವರೂಪನೇ ಆಗಿರುವನು. ಇದರಲ್ಲಿ ಸಂಶಯವಿಲ್ಲ. ಜಗತ್ಕಾರಣನಾದ ವಿಷ್ಣುವನ್ನು ಈಶ್ವರನಿಗಿಂತ ಬೇರೆಯೆಂದು ತಿಳಿಯಲಾಗದು.

೮೮. ವೇದಬಾಹ್ಯರಾಗಿ ಮೋಹಕ್ಕೆ ಅಧೀನರಾಗಿರುವುದರಿಂದ ಶಿವ-ವಿಷ್ಣುಗಳ ಭೇದವನ್ನು ನಂಬಿದ ಮಾನವರು ನರಕಕ್ಕೆ ಹೋಗುವರು. ವೇದವಾದಿಗಳ ಮತದಲ್ಲಿ ರುದ್ರದೇವನೂ, ನಾರಾಯಣನೂ ಒಂದೇ ತತ್ವವು.

೮೯. ಅವರು ಐಕ್ಯರೂಪದಿಂದ ವಿಷ್ಣು-ಈಶ್ವರರನ್ನು ಸಾಕ್ಷಾತ್ಕರಿಸಿ ಮೋಕ್ಷವನ್ನು ಹೊಂದುತ್ತಾರೆ. ವಿಷ್ಣು ಎಂಬುವನು ಸ್ವಯಂ ರುದ್ರಮೂರ್ತಿಯೂ ರುದ್ರನು ಮಹಾವಿಷ್ಣುಸ್ವರೂಪಿಯೂ ಆಗಿರುವರು.

೯೦. ಹೀಗೆ ಶಿವ-ವಿಷ್ಣುಗಳ ಐಕ್ಯವನ್ನು ಭಾವಿಸಿ ಸ್ವಾಮಿಯನ್ನು ಭಜಿಸಿದ ಮಾನವನು ಸದ್ಗತಿಯನ್ನು ಹೊಂದುತ್ತಾನೆ. ಈ ಮಹಾವಿಷ್ಣುವು ಸಮಸ್ತ ಜಗತ್ತನ್ನೂ ಸೃಷ್ಟಿಸುತ್ತಾನೆ. ಈಶ್ವರನು ಅವನನ್ನು ಸಾಕ್ಷಾತ್ಕರಿಸುತ್ತಾನೆ.

ಇತ್ಥಂ ಜಗತ್ಸರ್ವಮಿದಂ ರುದ್ರನಾರಾಯಣೋದ್ಭವಮ್ ।
ತಸ್ಮಾತ್ ತ್ಯಕ್ತ್ವಾ ಹರೇರ್ನಿಂದಾಂ ಹರೇ ಚಾಪಿ ಸಮಾಹಿತಃ ॥ ೯೧ ॥

ಸಮಾಶ್ರಯ ಮಹಾದೇವಂ ಶರಣ್ಯಂ ಬ್ರಹ್ಮವಾದಿನಾಮ್ ।
ಉಪಶ್ರುತ್ಯಾಥ ವಚನಂ ವಿರಿಂಚಸ್ಯ ಪ್ರಜಾಪತಿಃ ॥ ೯೨ ॥

ಜಗಾಮ ಶರಣಂ ದೇವಂ ಗೋಪತಿಂ ಕೃತ್ತಿವಾಸಸಮ್ ।
ಯೇಽನ್ಯೇ ಶಾಪಾಗ್ನಿನಿರ್ದಗ್ಧಾ ದಧೀಚಸ್ಯ ಮಹರ್ಷಯಃ ॥ ೯೩ ॥

ದ್ವಿಷಂತೋ ಮೋಹಿತಾ ದೇವಂ ಸಂಬಭೂವುಃ ಕಲಿಷ್ವಥ ।
ತ್ಯಕ್ತ್ವಾ ತಪೋಬಲಂ ಕೃತ್ಸ್ನಂ ವಿಪ್ರಾಣಾಂ ಕುಲಸಂಭವಾಃ ॥ ೯೪ ॥

ಪೂರ್ವಸಂಸ್ಕಾರಮಾಹಾತ್ಮ್ಯಾದ್ಬ್ರಹ್ಮಣೋ ವಚನಾದಿಹ ।
ಮುಕ್ತಶಾಪಾಸ್ತತಃ ಸರ್ವೇ ಕಲ್ಪಾಂತೇ ರೌರವಾದಿಷು ॥ ೯೫ ॥

---

೯೧. ಹೀಗೆ ಸಮಸ್ತ ಜಗತ್ತು ರುದ್ರ ಮತ್ತು ನಾರಾಯಣರಿಂದ ಹುಟ್ಟಿರುವುದು. ಆದ್ದರಿಂದ ಹರಿಯ ನಿಂದೆಯನ್ನು ಬಿಟ್ಟು ಶಿವನಲ್ಲಿ ಸಮಾಧಾನಹೊಂದಿದ ಚಿತ್ತವುಳ್ಳವನಾಗು.

೯೨. ಹಾಗೆ ಬ್ರಹ್ಮವಾದಿಗಳಿಗೆ ರಕ್ಷಕನಾದ ಮಹಾದೇವನನ್ನು ಆರಾಧಿಸು. ಹೀಗೆಂಬ ಬ್ರಹ್ಮದೇವನ ವಚನವನ್ನು ದಕ್ಷಪ್ರಜಾಪತಿಯು ಶ್ರವಣಮಾಡಿದನು.

೯೩. ಮತ್ತು ನಂದೀಶ್ವರನೂ, ಗಜಚರ್ಮಾಂಬರಧಾರಿಯೂ ಆದ ಮಹೇಶ್ವರನನ್ನು ಶರಣುಹೊಂದಿದನು. ಮತ್ತೆ ಕೆಲವು ಮಂದಿ ಮಹರ್ಷಿಗಳು ದಧೀಚ ಬ್ರಹ್ಮರ್ಷಿಯ ಶಾಪಾಗ್ನಿಯಿಂದ ಭಸ್ಮೀಭೂತರಾಗಿದ್ದರಲ್ಲವೇ.

೯೪. ಅವರು ಮೋಹಿತರಾಗಿ ಪರಮಶಿವನನ್ನು ದ್ವೇಷಿಸುತ್ತಾ ಸಮಸ್ತ ತಪೋಮಹಿಮೆಯನ್ನು ಕಳೆದುಕೊಂಡು ಕಲಿಯುಗದಲ್ಲಿ ವಿಪ್ರರ ಜನ್ಮದಲ್ಲಿ ಹುಟ್ಟಿದವರೆಂದೆನಿಸಿದವರಾಗಿ ಜನ್ಮವನ್ನೆತ್ತಿದರು.

೯೫. ತರುವಾಯ ಪೂರ್ವಸಂಸ್ಕಾರದ ಮಹಿಮೆಯಿಂದಲೂ, ಬ್ರಹ್ಮನ ಆಜ್ಞಾವಚನದಿಂದಲೂ ಕಲ್ಪಾಂತಕಾಲದವರೆಗೂ ರೌರವಾದಿ ನರಕಯಾತನೆಗಳನ್ನು ಅನುಭವಿಸುತ್ತಾ ಶಾಪಮುಕ್ತರಾದರು.

ನಿಪಾತ್ಯಮಾನಾಃ ಕಾಲೇನ ಸಂಪ್ರಾಪ್ಯಾದಿತ್ಯವರ್ಚಸಮ್ ।
ಬ್ರಹ್ಮಾಣಂ ಜಗತಾಮೀಶಮನುಜ್ಞಾತಾಃ ಸ್ವಯಂಭುವಾ ॥ ೯೬ ॥

ಸಮಾರಾಧ್ಯ ತಪೋಯೋಗಾದೀಶಾನಂ ತ್ರಿದಶಾಧಿಪಮ್ ।
ಭವಿಷ್ಯಂತಿ ಯಥಾಪೂರ್ವಂ ಶಂಕರಸ್ಯ ಪ್ರಸಾದತಃ ॥ ೯೭ ॥

ಏತದ್ವಃ ಕಥಿತಂ ಸರ್ವಂ ದಕ್ಷಯಜ್ಞನಿಷೂದನಮ್ ।
ಶೃಣುಧ್ವಂ ದಕ್ಷಪುತ್ರೀಣಾಂ ಸರ್ವಾಸಾಂ ಚೈವ ಸಂತತಿಮ್ ॥ ೯೮ ॥

ಇತಿ ಶ್ರೀ ಕೂರ್ಮಪುರಾಣೇ ಪಂಚದಶೋಽಧ್ಯಾಯಃ

---

೯೬. ಕೆಟ್ಟಕಾಲವಶದಿಂದ ರೌರವಾದಿ ನರಕದಲ್ಲಿ ಬೀಳುತ್ತಾ ಕ್ರಮವಾಗಿ ಆದಿತ್ಯನಂತೆ ವರ್ಚಸ್ವಿಯೂ ಜಗದೀಶ್ವರನೂ ಆದ ಬ್ರಹ್ಮದೇವನನ್ನು ಹೊಂದಿ ಬ್ರಹ್ಮನಿಂದ ಆಜ್ಞಾಪಿಸಲ್ಪಡುವರು.

೯೭. ಆದರಂತೆ ತಪೋಯೋಗದಿಂದ ಸಮಸ್ತ ದೇವತಾಧಿಪತಿಯಾದ ಮಹೇಶ್ವರನನ್ನು ಆರಾಧಿಸಿ ಶಂಕರನ ಅನುಗ್ರಹದಿಂದ ಪೂರ್ವದಂತೆ ಆಗುವರು.

೯೮. ಮುನಿಗಳೇ! ದಕ್ಷಬ್ರಹ್ಮನ ಯಜ್ಞಭಂಗದ ಸಮಸ್ತ ಚರಿತ್ರೆಯು ನಿಮಗೆ ಹೇಳಲ್ಪಟ್ಟಿತು. ಮುಂದೆ ಎಲ್ಲಾ ದಕ್ಷಬ್ರಹ್ಮನ ಕನ್ಯೆಯರ ಸಂತತಿಯನ್ನು ಶ್ರವಣಮಾಡಿರಿ.

( ಕೂರ್ಮಪುರಾಣದಲ್ಲಿ ಹದಿನೈದನೆಯ ಅಧ್ಯಾಯವು ಸಮಾಪ್ತವು )

ಶ್ರೀಃ

# ಕೂರ್ಮಪುರಾಣಂ



## ಷೋಡಶೋಽಧ್ಯಾಯಃ

### ( ದಕ್ಷಕನ್ಯಾವಂಶಕಥನಮ್ )

**ಸೂತ ಉವಾಚ :—**

**ಪ್ರಜಾಃ ಸೃಜೇತಿ ಸಂದಿಷ್ಟಃ ಪೂರ್ವಂ ದಕ್ಷಃ ಸ್ವಯಂಭುವಾ ।**
**ಸಸರ್ಜ ದೇವಾನ್ ಗಂಧರ್ವಾನೃಷೀಂಶ್ಚೈವಾಸುರೋರಗಾನ್ ॥ ೧ ॥**

**ಯದಾಸ್ಯ ಸೃಜತಃ ಪೂರ್ವಂ ನ ವ್ಯವರ್ಧಂತ ತಾಃ ಪ್ರಜಾಃ ।**
**ತದಾ ಸಸರ್ಜ ಭೂತಾನಿ ಮೈಥುನೇನೈವ ಸರ್ವತಃ ॥ ೨ ॥**

---

## ಹದಿನಾರನೆಯ ಅಧ್ಯಾಯವು

೧. ಸೂತಮುನಿಯು ಇಂತೆಂದನು :—ಬ್ರಹ್ಮದೇವನಿಂದ ಆಜ್ಞಾಪಿಸಲ್ಪಟ್ಟ ದಕ್ಷಬ್ರಹ್ಮನು ಪೂರ್ವದಲ್ಲಿ ಪ್ರಜೆಗಳನ್ನು ಸೃಷ್ಟಿಸುವ ಸಮಯದಲ್ಲಿ ದೇವತೆ-ಗಂಧರ್ವ-ಋಷಿ-ಅಸುರ ಮತ್ತು ಸರ್ಪ ಎಂಬ ವಿವಿಧ ಪ್ರಜೆಗಳನ್ನು ಸೃಷ್ಟಿಸಿದನು.

೨. ಹೀಗೆ ಸೃಷ್ಟಿಸುತ್ತಿರುವ ದಕ್ಷಬ್ರಹ್ಮನಿಂದ ಯಾವಾಗ ಪ್ರಜೆಗಳು ಸಮೃದ್ಧಿಯಾಗಲಿಲ್ಲವೋ ; ಆಗ ಮೈಥುನ ಧರ್ಮದಿಂದ ಸರ್ವಪ್ರಜೆಗಳನ್ನು ಸೃಷ್ಟಿಸಲು ಆರಂಭಿಸಿದನು.

ಅಶಿಕ್ನ್ಯಾಂ ಜನಯಾಮಾಸ ವೀರಣಸ್ಯ ಪ್ರಜಾಪತೇಃ ।
ಸುತಾಯಾಂ ಧರ್ಮಯುಕ್ತಾಯಾಂ ಪುತ್ರಾಣಾಂ ತು ಸಹಸ್ರಕಮ್ ॥೩॥

ತೇಷು ಪುತ್ರೇಷು ನಷ್ಟೇಷು ಮಾಯಯಾ ನಾರದಸ್ಯ ತು ।
ಷಷ್ಟಿಂ ದಕ್ಷೋಽಸೃಜತ್ಕನ್ಯಾ ವೈರಿಣ್ಯಾಂ ವೈ ಪ್ರಜಾಪತಿಃ ॥ ೪ ॥

ದದೌ ಸ ದಶ ಧರ್ಮಾಯ ಕಶ್ಯಪಾಯ ತ್ರಯೋದಶ ।
ವಿಂಶತ್ಸಪ್ತ ಚ ಸೋಮಾಯ ಚತಸ್ರೋಽರಿಷ್ಟನೇಮಯೇ ॥ ೫ ॥

ದ್ವೇ ಚೈವ ಬಹುಪುತ್ರಾಯ ದ್ವೇ ಕೃಶಾಶ್ವಾಯ ಧೀಮತೇ ।
ದ್ವೇ ಚೈವಾಂಗಿರಸೇ ತದ್ವತ್ತಾಸಾಂ ವಕ್ಷ್ಯೇಽಥ ವಿಸ್ತರಮ್ ॥ ೬ ॥

ಮರುತ್ವತೀ ವಸುರ್ಯಾಮಿ ಲಂಬಾ ಭಾನುರರುಂಧತೀ ।
ಸಂಕಲ್ಪಾ ಚ ಮುಹೂರ್ತಾ ಚ ಸಾಧ್ಯಾ ವಿಶ್ವಾ ಚ ಭಾಮಿನೀ ॥ ೭ ॥

---

೩. ವೀರಣ ಎಂಬ ಪ್ರಜಾಪತಿಯ ಮಗಳಾದ ಮತ್ತು ಧರ್ಮಿಷ್ಠಳಾದ ಅಸಿಕ್ನಿ ಎಂಬುವಳಲ್ಲಿ ಸಹಸ್ರ ಪುತ್ರರನ್ನು ಸೃಜಿಸಿದನು.

೪. ನಾರದಮುನಿಯ ಮಾಯೆಯಿಂದ ಅಸಿಕ್ನೀ ದೇವಿಯಲ್ಲಿ ಹುಟ್ಟಿದ ಸಹಸ್ರಮಂದಿ ಪುತ್ರರು ನಾಶವಾಗಲು ಮತ್ತೆ ದಕ್ಷಪ್ರಜಾಪತಿಯು ವೀರಣನ ಪುತ್ರಿಯಾದ ಅಸಿಕ್ನಿಯಲ್ಲಿ ಅರವತ್ತುಮಂದಿ ಕನ್ಯೆಯರನ್ನು ಹೊಂದಿದನು.

೫. ಅವರಲ್ಲಿ ಹತ್ತುಮಂದಿಯನ್ನು ಧರ್ಮಪ್ರಜಾಪತಿಗೂ, ಹದಿಮೂರು ಮಂದಿಯನ್ನು ಕಶ್ಯಪಮುನಿಗೂ ಮತ್ತೆ ಇಪ್ಪತ್ತೇಳು ಮಂದಿಯನ್ನು ಚಂದ್ರನಿಗೂ ನಾಲ್ಕುಮಂದಿಯನ್ನು ಅರಿಷ್ಟನೇಮಿಗೂ ಪ್ರದಾನಮಾಡಿದನು.

೬. ಉಳಿದವರಲ್ಲಿ ಇಬ್ಬರನ್ನು ಬಹುಪುತ್ರ ಎಂಬುವನಿಗೂ, ಮತ್ತಿಬ್ಬರನ್ನು ಜ್ಞಾನಿಯಾದ ಕೃಶಾಶ್ವಮುನಿಗೂ, ಮಿಕ್ಕ ಇಬ್ಬರು ಕನ್ಯೆಯರನ್ನು ಅಂಗಿರೋಮುನಿಗೂ ಕೊಟ್ಟನು. ಅವರವರ ವಂಶವಿಸ್ತಾರವನ್ನು ಹೇಳುತ್ತೇನೆ.

೭. ಮರುತ್ವತೀ, ವಸು, ಯಾಮೀ, ಲಂಬಾ, ಭಾನು, ಅರುಂಧತೀ, ಸಂಕಲ್ಪಾ, ಮುಹೂರ್ತಾ, ಸಾಧ್ಯಾ ಮತ್ತು ವಿಶ್ವಾ ಎಂಬ ಭಾಮಿನಿಯರು ದಕ್ಷಬ್ರಹ್ಮನ ಮೊದಲನೆಯ ಹತ್ತುಮಂದಿ ಕನ್ಯೆಯರು.

ಧರ್ಮಪತ್ನ್ಯೋ ದಶ ತ್ವೇತಾಸ್ತಾಸಾಂ ಪುತ್ರಾನ್ನಿಬೋಧತ ।
ವಿಶ್ವೇ ದೇವಾಸ್ತು ವಿಶ್ವಾಯಾಂ ಸಾಧ್ಯಾ ಸಾಧ್ಯಾನಜೀಜನತ್ ॥ ೮ ॥

ಮರುತ್ವತ್ಯಾಂ ಮರುತ್ವಂತೋ ವಸ್ವಾಸ್ತು ವಸವಸ್ತಥಾ ।
ಭಾನೋಸ್ತು ಭಾನವಾಶ್ಚೈವ ಮುಹೂರ್ತಾಸ್ತು ಮುಹೂರ್ತಜಾಃ ॥ ೯ ॥

ಲಂಬಾಯಾಶ್ಚಾಥ ಘೋಷೋ ನೈ ನಾಗವೀಥೀ ತು ಯಾಮಿಜಾ ।
ಪೃಥಿವೀವಿಷಯಂ ಸರ್ವಮರುಂಧತ್ಯಾಮಜಾಯತ ॥ ೧೦ ॥

ಸಂಕಲ್ಪಾಯಾಸ್ತು ಸಂಕಲ್ಪೋ ಧರ್ಮಪುತ್ರಾ ದಶ ಸ್ಮೃತಾಃ ।
ಯೇ ತ್ವನೇಕವಸುಪ್ರಾಣಾ ದೇವಾ ಜ್ಯೋತಿಃಪುರೋಗಮಾಃ ॥ ೧೧ ॥

---

೮. ಈ ಹತ್ತುಮಂದಿಯೂ ಧರ್ಮಪ್ರಜಾಪತಿಯ ಪತ್ನಿಯರಾಗಿರುವರು. ಅವರ ಪುತ್ರರನ್ನು ಕೇಳಿರಿ. ವಿಶ್ವಾ ಎಂಬುವಳಲ್ಲಿ ವಿಶ್ವೇದೇವರು ಜನಿಸಿದರು. ಸಾಧ್ಯಾ ಎಂಬುವಳು ಸಾಧ್ಯದೇವತೆಗಳನ್ನು ಪ್ರಸವಿಸಿದಳು.

೯. ಮರುತ್ವತಿಯಲ್ಲಿ ಮರುತ್ವತ ಎಂಬ ದೇವತೆಗಳೂ ವಸುವಿನಲ್ಲಿ ವಸು ಎಂಬ ದೇವತೆಗಳೂ ಭಾನು ಎಂಬುವಳಲ್ಲಿ ಭಾನವ ಎಂಬ ದೇವತೆಗಳೂ ಮತ್ತು ಮುಹೂರ್ತಾ ಎಂಬುವಳಲ್ಲಿ ಮುಹೂರ್ತಗಳೂ ಪುತ್ರರಾಗಿ ಜನಿಸಿದರು.

೧೦. ಲಂಬಾ ಎಂಬುವಳಲ್ಲಿ ಘೋಷ ಎಂಬುವನೂ, ಯಾಮೀ ಎಂಬುವಳಲ್ಲಿ ನಾಗವೀಥಿಯೂ, ಅರುಂಧತಿಯಲ್ಲಿ ಪೃಥವೀಗೋಚರವಾದ ಸಮಸ್ತ ವಸ್ತುಜಾಲವೂ ಹುಟ್ಟಿದುವು.

೧೧. ಸಂಕಲ್ಪಾ ಎಂಬುವಳಿಂದ ಸಂಕಲ್ಪವು ಜನಿಸಿತು. ಧರ್ಮಪ್ರಜಾಪತಿಗೆ ಅನೇಕವಾದ ಐಶ್ವರ್ಯ ಮತ್ತು ಪ್ರಾಣಬಲವುಳ್ಳ ಜ್ಯೋತಿರ್ದೇವತೆ ಮುಂತಾದ ಹತ್ತುಮಂದಿ ಪುತ್ರರು ಜನಿಸಿದರೆಂದು ಸ್ಮರಿಸಲ್ಪಟ್ಟಿರುವರು.

ವಸವೋಽಷ್ಟೌ ಸಮಾಖ್ಯಾತಾಸ್ತೇಷಾಂ ವಕ್ಷ್ಯಾಮಿ ವಿಸ್ತರಮ್ ।
ಆಪೋ ಧ್ರುವಶ್ಚ ಸೋಮಶ್ಚ ಧರಶ್ಚೈವಾನಲೋಽನಿಲಃ ॥ ೧೨ ॥

ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟೌ ಪ್ರಕೀರ್ತಿತಾಃ ।
ಆಪಸ್ಯ ಪುತ್ರಾ ವೈತಂಡ್ಯಃ ಶ್ರಮಃ ಶಾಂತೋ ಧ್ವನಿಸ್ತಥಾ ॥ ೧೩ ॥

ಧ್ರುವಸ್ಯ ಪುತ್ರೋ ಭಗವಾನ್ ಕಾಲೋ ಲೋಕಪ್ರಕಾಲನಃ ।
ಸೋಮಸ್ಯ ಭಗವಾನ್ ವರ್ಚಾ ಧರಸ್ಯ ದ್ರವಿಣಃ ಸುತಃ ॥ ೧೪ ॥

ಮನೋಜವೋ ನಲಸ್ಯಾಸೀದವಿಜ್ಞಾತಗತಿಸ್ತಥಾ ।
ಕುಮಾರೋ ಹ್ಯನಿಲಸ್ಯಾಸೀತ್ಸೇನಾಪತಿರಿತಿ ಸ್ಮೃತಃ ॥ ೧೫ ॥

ದೇವಲೋ ಭಗವಾನ್ ಯೋಗೀ ಪ್ರತ್ಯೂಷಸ್ಯಾಭವತ್ಸುತಃ ।
ವಿಶ್ವಕರ್ಮಾ ಪ್ರಭಾಸಸ್ಯ ಶಿಲ್ಪಕರ್ತಾ ಪ್ರಜಾಪತಿಃ ॥ ೧೬ ॥

---

೧೨. ಮುಂದೆ ಅಷ್ಟವಸುಗಳೆಂದು ಪ್ರಸಿದ್ಧರಾಗಿರುವ ಪುತ್ರರ ವಿಸ್ತಾರ ಕ್ರಮವನ್ನು ವರ್ಣಿಸುತ್ತೇನೆ. ಆ ಅಷ್ಟವಸುಗಳಲ್ಲಿ ಆಪ, ಧ್ರುವ, ಸೋಮ, ಧರ, ಅನಲ ಮತ್ತು ಅನಿಲ ಎಂಬ ನಾಮಾಂಕಿತರು ಸೇರಿರುವರು.

೧೩. ಮತ್ತು ಪ್ರತ್ಯೂಷ, ಪ್ರಭಾಸ ಎಂಬ ಇಬ್ಬರು ಕುಮಾರರು ಸೇರಿ ಈ ಎಂಟುಮಂದಿಯು ಅಷ್ಟವಸುಗಳೆಂದು ಕೀರ್ತಿಸಲ್ಪಟ್ಟಿರುವರು. ಆ ಐವರಲ್ಲಿ ಆಪ ಎಂಬುವನಿಗೆ ವೈತಂಡ್ಯ-ಶ್ರಮ-ಶಾಂತ ಮತ್ತು ಧ್ವನಿ ಎಂಬ ಕುಮಾರರು ಜನಿಸಿದರು.

೧೪. ಧ್ರುವ ಎಂಬುವನಿಗೆ ಲೋಕವನ್ನು ಜೀರ್ಣಮಾಡುವ ಶೀಲವುಳ್ಳ ಪೂಜ್ಯನಾದ ಕಾಲ ಎಂಬುವನೂ, ಸೋಮನಿಗೆ ಪೂಜ್ಯನಾದ ವರ್ಚಾ ಎಂಬುವನೂ ಮತ್ತು ಧರನಿಗೆ ದ್ರವಿಣನೂ ಕುಮಾರರಾಗಿ ಜನಿಸಿದರು.

೧೫. ನಳನಿಗೆ ಮನೋಜವ ಮತ್ತು ಅವಿಜ್ಞಾತಗತಿ ಎಂಬ ಇಬ್ಬರು ಪುತ್ರರಿದ್ದರು. ಅನಿಲನಿಗೆ ಸೇನಾಪತಿ ಎಂದು ಸ್ಮರಿಸಲ್ಪಟ್ಟ ಕುಮಾರನಿದ್ದನು.

೧೬. ಪ್ರತ್ಯೂಷ ಎಂಬುವನಿಗೆ ಪೂಜ್ಯನಾದ ದೇವಲ ಎಂಬ ಯೋಗಿಯು ಪುತ್ರನಾಗಿ ಜನಿಸಿದನು ಮತ್ತು ಪ್ರಭಾಸನಿಗೆ ಶಿಲ್ಪಕಲಾಪ್ರವರ್ತಕನಾದ ವಿಶ್ವಕರ್ಮ ಪ್ರಜಾಪತಿಯು ಪುತ್ರನಾಗಿ ಹುಟ್ಟಿದನು.

ಅದಿತಿರ್ದಿತಿರ್ದನುಸ್ತದ್ವದರಿಷ್ಟಾ ಸುರಸಾ ತಥಾ ।
ಸುರಭಿರ್ವಿನತಾ ಚೈವ ತಾಮ್ರಾ ಕ್ರೋಧಾ ವಶಾ ತ್ವಿರಾ ॥ ೧೭ ॥

ಕದ್ರುರ್ಮುನಿಶ್ಚ ಧರ್ಮಜ್ಞಾ ತತ್ಪುತ್ರಾನ್ ವೈ ನಿಬೋಧತ ।
ಅಂಶೋ ಧಾತಾ ಭಗಸ್ತ್ವಷ್ಟಾ ಮಿತ್ರೋಽಥ ವರುಣೋಽರ್ಯಮಾ॥೧೮

ವಿವಸ್ವಾನ್ ಸವಿತಾ ಪೂಷಾ ಹ್ಯಂಶುಮಾನ್ ವಿಷ್ಣುರೇವ ಚ ।
ತುಷಿತಾ ನಾಮ ತೇ ಪೂರ್ವಂ ಚಾಕ್ಷುಷಸ್ಯಾಂತರೇ ಮನೋಃ ॥ ೧೯ ॥

ವೈವಸ್ವತೇಽಂತರೇ ಪ್ರೋಕ್ತಾ ಆದಿತ್ಯಾಶ್ಚಾದಿತೇಃ ಸುತಾಃ ।
ದಿತಿಃ ಪುತ್ರದ್ವಯಂ ಲೇಭೇ ಕಶ್ಯಪಾದ್ಬಲಗರ್ವಿತಮ್ ॥ ೨೦ ॥

ಹಿರಣ್ಯಕಶಿಪುಂ ಜ್ಯೇಷ್ಠಂ ಹಿರಣ್ಯಾಕ್ಷಂ ತಥಾನುಜಮ್ ।
ಹಿರಣ್ಯಕಶಿಪುರ್ದೈತ್ಯೋ ಮಹಾಬಲಪರಾಕ್ರಮಃ ॥ ೨೧ ॥

---

೧೭. ಅದಿತಿ- ದಿತಿ- ದನು- ಅರಿಷ್ಟಾ- ಸುರಸಾ- ಸುರಭಿ- ವಿನತಾ- ತಾಮ್ರಾ- ಕ್ರೋಧಾ- ವಶಾ ಮತ್ತು ಇರಾ ಎಂಬುವರು ಕಶ್ಯಪ ಪ್ರಜಾಪತಿಯ ಸಾಧ್ವೀಮಣಿಗಳಾಗಿದ್ದರು.

೧೮. ಧರ್ಮಜ್ಞರೇ! ಹಾಗೂ ಕದ್ರು-ಮುನಿ ಎಂಬುವರು ಸೇರಿ ಕಶ್ಯಪ ಮುನಿಯ ಪತ್ನಿಯರಲ್ಲಿ ಜನಿಸಿದ ಪುತ್ರರನ್ನು ಶ್ರವಣಮಾಡಿರಿ. ಅಂಶ-ಧಾತಾ-ಭಗ ತ್ವಷ್ಟಾ-ಮಿತ್ರ-ವರುಣ ಮತ್ತು ಅರ್ಯಮ-ಎಂಬುವರು ಅದಿತಿಯಲ್ಲಿ ಜನಿಸಿದ ಪ್ರಜೆಗಳಾಗಿರುವರು.

೧೯. ಮತ್ತು ವಿವಸ್ವಾನ್-ಸವಿತಾ-ಪೂಷಾ-ಅಂಶುಮಾನ್-ವಿಷ್ಣು-ಎಂಬುವರು ಸೇರಿ ಹನ್ನೆರಡು ಮಂದಿ ದೇವತೆಗಳು ಚಾಕ್ಷುಷಮನ್ವಂತರದ ಕಾಲದಲ್ಲಿ ತುಷಿತ ಎಂದು ಪ್ರಸಿದ್ಧರಾದ ದೇವತೆಗಳಾಗಿದ್ದರು.

೨೦. ಇವರು ಅದಿತಿಯ ಪುತ್ರರಾಗಿ ಜನಿಸಿ ವೈವಸ್ವತಮನ್ವಂತರದಲ್ಲಿ ಆದಿತ್ಯರೆಂದು ಹೇಳಲ್ಪಟ್ಟಿರುವರು. ದಿತಿ ಎಂಬುವಳು ಕಶ್ಯಪ ಮುನಿಯಿಂದ ಅಹಂಕಾರದಿಂದ ಮೆರೆಯುವ ಇಬ್ಬರು ಪುತ್ರರನ್ನು ಪ್ರಸವಿಸಿದಳು.

೨೧. ಆ ಇಬ್ಬರಲ್ಲಿ ಹಿರಣ್ಯಕಶಿಪುವು ಜೇಷ್ಠನೂ, ಹಿರಣ್ಯಾಕ್ಷನು ಕನಿಷ್ಠನೂ ಆಗಿದ್ದರು, ಮತ್ತು ಹಿರಣ್ಯಕಶಿಪು ಎಂಬ ದೈತ್ಯನು ಮಹಾಬಲ-ಪರಾಕ್ರಮಗಳಿಂದ ಕೂಡಿದ್ದನು.

ಆರಾಧ್ಯ ತಪಸಾ ದೇವಂ ಬ್ರಹ್ಮಾಣಂ ಪರಮೇಶ್ವರಮ್ ।
ದೃಷ್ಟ್ವಾ ಲೇಭೇ ವರಾನ್ ದಿವ್ಯಾಂಸ್ತುತ್ವಾಸೌ ವಿವಿಧೈಃ ಸ್ತವೈಃ ॥ ೨೨ ॥

ಅಥ ತಸ್ಯ ಬಲಾದ್ದೇವಾಃ ಸರ್ವ ಏವ ಮಹರ್ಷಯಃ ।
ಬಾಧಿತಾಸ್ತಾಡಿತಾ ಜಗ್ಮುರ್ದೇವದೇವಂ ಪಿತಾಮಹಮ್ ॥ ೨೩ ॥

ಶರಣ್ಯಂ ಶರಣಂ ದೇವಂ ಶಂಭುಂ ಸರ್ವಜಗನ್ಮಯಮ್ ।
ಬ್ರಹ್ಮಾಣಂ ಲೋಕಕರ್ತಾರಂ ತ್ರಾತಾರಂ ಪುರುಷಂ ಪರಮ್ ॥ ೨೪ ॥

ಕೂಟಸ್ಥಂ ಜಗತಾಮೇಕಂ ಪುರಾಣಂ ಪುರುಷೋತ್ತಮಮ್ ।
ಸ ಯಾಚಿತೋ ದೇವವರೈರ್ಮುನಿಭಿಶ್ಚ ಮುನೀಶ್ವರಾಃ ॥ ೨೫ ॥

---

೨೨. ಇವನು ತಪೋನಿಷ್ಠೆಯಿಂದ ಸರ್ವೇಶ್ವರನಾದ ಬ್ರಹ್ಮನನ್ನು ಸೇವಿಸಿ ಪ್ರಸನ್ನನಾದ ದೇವರನ್ನು ಸಾಕ್ಷಾತ್ಕರಿಸಿ ಅನೇಕ ವಿಧ ಸ್ತೋತ್ರಗಳಿಂದ ಸ್ತುತಿಸಿ ದಿವ್ಯವಾದ ವಿವಿಧ ವರಗಳನ್ನು ಹೊಂದಿದನು.

೨೩. ತರುವಾಯ ಆ ಅಸುರನಿಂದ ವಿಕ್ರಮದಿಂದ ಸಮಸ್ತ ದೇವತೆಗಳೂ, ಮಹರ್ಷಿಗಳೂ ಹೊಡೆಯಲ್ಪಟ್ಟು ಬಾಧಿಸಲ್ಪಟ್ಟವರಾಗಿ ದೇವೋತ್ತಮನಾದ ಬ್ರಹ್ಮ ದೇವನ ಸನ್ನಿಧಿಗೆ ತೆರಳಿದರು.

೨೪. ಸರ್ವರಕ್ಷಕನೂ, ಸುಖಕರನೂ, ಸರ್ವಜಗನ್ಮೂರ್ತಿಯೂ, ಲೋಕ ವಿಧಾತನೂ, ಶರಣದಾಯಕನೂ ಮತ್ತು ಪರಮಪುರುಷನೂ ಆದ ಬ್ರಹ್ಮದೇವನನ್ನು ಅವರು ಶರಣುಹೊಂದಿದರು.

೨೫. ಮುನೀಶ್ವರರೇ! ನಿರ್ವಿಕಾರನೂ, ಜಗತ್ತಿಗೆ ಅದ್ವಿತೀಯನಾದ ಪುರಾಣ ಪುರುಷನೂ, ಪುರುಷೋತ್ತಮನೂ ಆದ ಆ ಬ್ರಹ್ಮದೇವನು ಅಲ್ಲಿಗೆ ಹೋದ ಮುನಿಗಳಿಂದಲೂ, ದೇವತೆಗಳಿಂದಲೂ ಪ್ರಾರ್ಥಿಸಲ್ಪಟ್ಟನು.

ಸರ್ವದೇವಹಿತಾರ್ಥಾಯ ಜಗಾಮ ಕಮಲಾಸನಃ ।
ಸಂಸ್ತೂಯಮಾನಃ ಪ್ರಣತೈರ್ಮುನೀಂದ್ರೈರಮರೈರಪಿ　　॥ ೨೬ ॥

ಕ್ಷೀರೋದಸ್ಯೋತ್ತರಂ ಕೂಲಂ ಯತ್ರಾಸ್ತೇ ಹರಿರೀಶ್ವರಃ ।
ದೃಷ್ಟ್ವಾ ದೇವಂ ಜಗದ್ಯೋನಿಂ ವಿಷ್ಣುಂ ವಿಶ್ವಗುರುಂ ಶಿವಮ್　　॥ ೨೭ ॥

ವವಂದೇ ಚರಣೌ ಮೂರ್ಧ್ನಾ ಕೃತಾಂಜಲಿರಭಾಷತ ।
ಬ್ರಹ್ಮೋವಾಚ :—
ತ್ವಂ ಗತಿಃ ಸರ್ವಭೂತಾನಾಮನಂತೋಽಸ್ಯಖಿಲಾತ್ಮಕಃ　　॥ ೨೮ ॥

ವ್ಯಾಪೀ ಸರ್ವಾಮರವಪುರ್ಮಹಾಯೋಗೀ ಸನಾತನಃ ।
ತ್ವಮಾತ್ಮಾ ಸರ್ವಭೂತಾನಾಂ ಪ್ರಧಾನಪ್ರಕೃತಿಃ ಪರಾ　　॥ ೨೯ ॥

---

೨೬. ಆಗ ಕಮಲಾಸನನಾದ ಬ್ರಹ್ಮನು ವಂದಿಸುತ್ತಿದ್ದ ಮುನೀಂದ್ರರಿಂದಲೂ ಮತ್ತು ದೇವತೆಗಳಿಂದಲೂ ಸ್ತುತಿಸಲ್ಪಡುವವನಾಗಿ ಸಮಸ್ತ ದೇವತೆಗಳಿಗೆ ಹಿತವನ್ನುಂಟುಮಾಡಲು ಕ್ಷೀರಸಮುದ್ರಕ್ಕೆ ಹೋದನು.

೨೭. ಸರ್ವೇಶ್ವರನಾದ ಮಹಾವಿಷ್ಣುವು ಶಯನಮಾಡಿಕೊಂಡಿದ್ದ ಕ್ಷೀರ ಸಮುದ್ರದ ಉತ್ತರಭಾಗದ ತೀರಕ್ಕೆ ಹೋಗಿ ಅಲ್ಲಿ ಜಗತ್ಕಾರಣನೂ ಜಗದ್ಗುರುವೂ ಮತ್ತು ಮಂಗಳಕರನೂ ಆದ ಮಹಾವಿಷ್ಣುವನ್ನು ನೋಡಿದನು.

೨೮. ಹಾಗು ವಿಷ್ಣುವಿನ ಪಾದಕ್ಕೆ ತಲೆಬಾಗಿ ವಂದಿಸಿ ಅಂಜಲಿಯನ್ನು ಕಟ್ಟಿಕೊಂಡು ಹೇಳಿದನು. ಬ್ರಹ್ಮದೇವನು ಇಂತೆಂದನು :—ಸ್ವಾಮಿಯೇ ! ನೀನು ಸರ್ವಪ್ರಾಣಿಗಳಿಗೆ ಗತಿಯೂ, ಅಂತವಿಲ್ಲದವನೂ ಮತ್ತು ವಿಶ್ವರೂಪಿಯೂ ಆಗಿದ್ದೀ.

೨೯. ಸರ್ವದೇವತಾಮಯನೂ, ವ್ಯಾಪಕನೂ, ಮಹಾಯೋಗಿಯೂ, ಪುರಾಣನೂ, ಸರ್ವಭೂತಗಳಿಗೆ ಆತ್ಮಸ್ವರೂಪನೂ ಮತ್ತು ಪ್ರಧಾನಪುರುಷರೂಪನೂ ಆಗಿದ್ದೀ.

ವೈರಾಗ್ಯೈಶ್ವರ್ಯನಿರತೋ ವಾಗತೀತೋ ನಿರಂಜನಃ ।
ತ್ವಂ ಕರ್ತಾ ಚೈವ ಭರ್ತಾ ಚ ವಿಹಂತಾ ಚ ಸುರದ್ವಿಷಾಮ್ ॥ ೩೦ ॥

ತ್ರಾತುಮರ್ಹಸ್ಯನಂತೇಶ ತ್ರಾತಾಸಿ ಪರಮೇಶ್ವರಃ ।
ಇತ್ಥಂ ಸ ವಿಷ್ಣುರ್ಭಗವಾನ್ ಬ್ರಹ್ಮಣಾ ಸಂಪ್ರಬೋಧಿತಃ ॥ ೩೧ ॥

ಪ್ರೋವಾಚೋನ್ನಿದ್ರಪದ್ಮಾಕ್ಷಃ ಪೀತವಾಸಾಃ ಸುರಾನ್ ದ್ವಿಜಾಃ ।
ಕಿಮರ್ಥಂ ಸುಮಹಾವೀರ್ಯಾಃ ಸಪ್ರಜಾಪತಿಕಾಃ ಸುರಾಃ ॥ ೩೨ ॥

ಇಮಂ ದೇಶಮನುಪ್ರಾಪ್ತಾಃ ಕಿಂ ವಾ ಕಾರ್ಯಂ ಕರೋಮಿ ವಃ ।

ದೇವಾ ಊಚುಃ :—

ಹಿರಣ್ಯಕಶಿಪುರ್ನಾಮ ಬ್ರಹ್ಮಣೋ ವರದರ್ಪಿತಃ ॥ ೩೩ ॥

---

೩೦. ಹಾಗು ವೈರಾಗ್ಯ-ಐಶ್ವರ್ಯಗಳಲ್ಲಿ ನಿರತನೂ, ವಾಗೀಂದ್ರಿಯಾತೀತನೂ, ನಿರಂಜನನೂ, ದೇವಶತ್ರುಗಳ ನಾಶಕನೂ, ಸರ್ವಪ್ರಪಂಚಕ್ಕೆ ಕರ್ತನೂ ಮತ್ತು ಪೋಷಕನೂ ಆಗಿದ್ದೀ.

೩೧. ಅಂತವಿಲ್ಲದ ಪರಮೇಶ್ವರನೇ! ನೀನು ನಮ್ಮನ್ನು ರಕ್ಷಿಸಲು ಅರ್ಹನಾಗಿದ್ದೀ. ನೀನೇ ಸಮರ್ಥನಾದ ರಕ್ಷಕನಾಗಿದ್ದೀ. ಹೀಗೆಂದು ಭಗವಂತನಾದ ಮಹಾವಿಷ್ಣುವು ಬ್ರಹ್ಮದೇವನಿಂದ ಸ್ತುತಿಸಿ ಎಚ್ಚರಿಸಲ್ಪಟ್ಟನು.

೩೨. ದ್ವಿಜರೇ! ಅರಳಿದ ಕಮಲದಂತಿರುವ ನೇತ್ರವುಳ್ಳ, ಪೀತಾಂಬರ ಧಾರಿಯಾದ, ಮಹಾವಿಷ್ಣುವು ದೇವತೆಗಳನ್ನು ಕುರಿತು ಹೀಗೆಂದು ಹೇಳಿದನು :— ಬ್ರಹ್ಮದೇವನೇ ಮುಂತಾದ ಮಹಾವೀರ್ಯ ಸಂಪನ್ನರಾದ ದೇವತೆಗಳೇ! ನೀವು ಇಲ್ಲಿಗೆ ಏಕೆ ಬಂದಿರುವಿರಿ?

೩೩. ನೀವು ಇಷ್ಟುಮಂದಿ ಇಲ್ಲಿಗೆ ಬರಲು ಕಾರಣವೇನು? ನಿಮಗೆ ಯಾವ ಕಾರ್ಯವನ್ನು ಮಾಡಲಿ? ಆಗ ದೇವತೆಗಳು ಇಂತೆಂದರು :—ಹಿರಣ್ಯಕಶಿಪು ವೆಂಬ ಮಹಾಸುರನು ಬ್ರಹ್ಮದೇವನ ವರದಿಂದ ಅಹಂಕಾರಿಯಾಗಿರುವನು.

ಬಾಧತೇ ಭಗವನ್ ದೈತ್ಯೋ ದೇವಾನ್ ಸರ್ವಾನ್ ಸಹರ್ಷಿಭಿಃ ।
ಅವಧ್ಯಃ ಸರ್ವಭೂತಾನಾಂ ತ್ವಾಮೃತೇ ಪುರುಷೋತ್ತಮಮ್ ॥ ೩೪ ॥

ಹಂತುಮರ್ಹಸಿ ಸರ್ವೇಷಾಂ ತ್ರಾತಾಸಿ ತ್ವಂ ಜಗನ್ಮಯ ।
ಶ್ರುತ್ವಾ ತದ್ದೈವತೈರುಕ್ತಂ ಸ ವಿಷ್ಣುರ್ಲೋಕಭಾವನಃ ॥ ೩೫ ॥

ವಧಾಯ ದೈತ್ಯಮುಖ್ಯಸ್ಯ ಸೋಽಸೃಜತ್ಪುರುಷಂ ಸ್ವಯಮ್ ।
ಮೇರುಪರ್ವತವರ್ಷ್ಮಾಣಂ ಘೋರರೂಪಂ ಭಯಾನಕಮ್ ॥ ೩೬ ॥

ಶಂಖಚಕ್ರಗದಾಪಾಣಿಂ ತಂ ಪ್ರಾಹ ಗರುಡಧ್ವಜಃ ।
ಹತ್ವಾ ತಂ ದೈತ್ಯರಾಜಾನಂ ಹಿರಣ್ಯಕಶಿಪುಂ ಪುನಃ ॥ ೩೭ ॥

---

೩೪. ಸ್ವಾಮಿಯೇ! ಆ ವರದಿಂದ ಪುರುಷೋತ್ತಮನಾದ ನಿನ್ನನ್ನು ಹೊರತು ಸರ್ವ ಪ್ರಾಣಿಗಳಿಗೂ ಅವಧ್ಯನಾಗಿ ಸರ್ವದೇವತೆಗಳನ್ನು ಪೂಜ್ಯರಾದ ಮಹರ್ಷಿಗಳೊಡನೆ ಆ ದೈತ್ಯನು ಪೀಡಿಸುತ್ತಿರುವನು.

೩೫. ವಿಶ್ವರೂಪಿಯಾದ ಸ್ವಾಮಿಯೇ! ಆ ಅಸುರನನ್ನು ಕೊಂದು ನಮ್ಮೆಲ್ಲರನ್ನು ರಕ್ಷಿಸಲು ನೀನು ಅರ್ಹನಾಗಿದ್ದೀಯೆ, ಸರ್ವಲೋಕಗಳಿಗೆ ಕಾರಣನಾದ ಆ ಮಹಾ ವಿಷ್ಣುವು ದೇವತೆಗಳಿಂದ ಹೇಳಲ್ಪಟ್ಟ ಈ ವಚನವನ್ನು ಶ್ರವಣಮಾಡಿದನು.

೩೬. ಹಾಗು ಆ ಮಹಾವಿಷ್ಣುವು ದೈತ್ಯಶ್ರೇಷ್ಠನಾದ ಹಿರಣ್ಯಕಶಿಪುವಿನ ಸಂಹಾರಕ್ಕೋಸ್ಕರ ಮೇರುಪರ್ವತದಂತೆ ವಿಶಾಲದೇಹವುಳ್ಳ, ಘೋರರೂಪಿಯಾದ ಮತ್ತು ಭಯಂಕರನಾದ ಒಬ್ಬ ಪುರುಷನನ್ನು ಸೃಜಿಸಿದನು.

೩೭. ಮತ್ತು ಗರುಡಧ್ವಜದಿಂದ ಕೂಡಿದ ಮಹಾವಿಷ್ಣುವು ಹಸ್ತಗಳಲ್ಲಿ ಶಂಖ-ಚಕ್ರ-ಗದೆಗಳನ್ನು ಧರಿಸಿದ ಆ ಪುರುಷನನ್ನು ಕುರಿತು ಹೀಗೆ ಹೇಳಿದನು. ನೀನು ದೈತ್ಯರಾಜನಾದ ಆ ಹಿರಣ್ಯಕಶಿಪುವನ್ನು ಸಂಹರಿಸು.

ಇಮಂ ದೇಶಂ ಸಮಾಗಂತುಂ ಕ್ಷಿಪ್ರಮರ್ಹಸಿ ಪೌರುಷಾತ್ ।
ನಿಶಮ್ಯ ವೈಷ್ಣವಂ ವಾಕ್ಯಂ ಪ್ರಣಮ್ಯ ಪುರುಷೋತ್ತಮಮ್ ॥ ೩೮ ॥

ಮಹಾಪುರುಷಮವ್ಯಕ್ತಂ ಯಯೌ ದೈತ್ಯಮಹಾಪುರಮ್ ।
ವಿಮುಂಚನ್ ಭೈರವಂ ನಾದಂ ಶಂಖಚಕ್ರಗದಾಧರಃ ॥ ೩೯ ॥

ಆರುಹ್ಯ ಗರುಡಂ ದೇವೋ ಮಹಾಮೇರುರಿವಾಪರಃ ।
ಆಕರ್ಣ್ಯ ದೈತ್ಯಪ್ರವರಾ ಮಹಾಮೇಘಾರವೋಪಮಮ್ ॥ ೪೦ ॥

ಸಮಂ ಚ ಚಕ್ರಿರೇ ನಾದಂ ತಥಾ ದೈತ್ಯಪತೇರ್ಭಯಾತ್ ॥

**ಅಸುರಾ ಊಚುಃ :—**

ಕಶ್ಚಿದಾಗಚ್ಛತಿ ಮಹಾನ್ ಪುರುಷೋ ದೇವನೋದಿತಃ ॥ ೪೧ ॥

---

೩೮. ಮತ್ತು ಮಹಾಪೌರುಷದಿಂದ ವೇಗವಾಗಿ ಈ ಸ್ಥಳಕ್ಕೆ ಹಿಂತಿರುಗಿ ಬರಲು ಅರ್ಹನಾಗಿದ್ದೀ, ಹೀಗೆಂಬ ಮಹಾವಿಷ್ಣುವಿನ ಮಾತನ್ನು ಕೇಳಿ ಆ ಪುರುಷನು ಪುರುಷೋತ್ತಮನನ್ನು ವಂದಿಸಿದನು.

೩೯. ಮಹಾಪುರುಷನೂ ಇಂದ್ರಿಯಾಗೋಚರನೂ ಆದ ವಿಷ್ಣುವನ್ನು ವಂದಿಸಿ ಶಂಖ-ಚಕ್ರ-ಗದೆಗಳನ್ನು ಧರಿಸಿದ ಆ ಮಹಾಪುರುಷನು ಘೋರವಾದ ಸಿಂಹ ನಾದವನ್ನು ಮಾಡುತ್ತಾ ದೈತ್ಯನ ಮಹಾನಗರಕ್ಕೆ ಹೋದನು.

೪೦. ಮತ್ತೊಂದು ಮಹಾಪರ್ವತದಂತೆ ಅತಿಕಾಯನಾದ ಗರುಡವಾಹನ ವನ್ನು ಏರಿ ತೆರಳಿದ ಆ ಪುರುಷನ ಗುಡುಗಿನಂತೆ ಗಂಭೀರವಾದ ಸಿಂಹನಾದವನ್ನು ಅಲ್ಲಿದ್ದ ದೈತ್ಯೇಂದ್ರರು ಕೇಳಿದರು.

೪೧. ಮತ್ತು ಅದರಂತೆ ತಾವು ಭಯದಿಂದ ಮಹತ್ತಾದ ನಾದವನ್ನು ಮಾಡಿದರು. ಅಸುರರು ಹೀಗೆಂದು ಹೇಳಿದರು :— ಯಾರೋ ಒಬ್ಬ ಮಹಾಪುರುಷನು ದೇವತೆಗಳಿಂದ ಪ್ರೇರೇಪಿಸಲ್ಪಟ್ಟು ಇಲ್ಲಿಗೆ ಬರುತ್ತಿರುವನು.

ವಿಮುಂಚನ್ ಭೈರವಂ ನಾದಂ ತಂ ಜಾನೀಮೋ ಜನಾರ್ದನಮ್ ।
ತತಃ ಸಹಾಸುರವರೈರ್ಹಿರಣ್ಯಕಶಿಪುಃ ಸ್ವಯಮ್ ॥ ೪೨ ॥

ಸನ್ನದ್ಧೈಃ ಸಾಯುಧೈಃ ಪುತ್ರೈಃ ಸಪ್ರಹ್ಲಾದೈಸ್ತಥಾ ಯಯೌ ।
ದೃಷ್ಟ್ವಾ ತಂ ಗರುಡಾರೂಢಂ ಸೂರ್ಯಕೋಟಿಸಮಪ್ರಭಮ್ ॥ ೪೩ ॥

ಪುರುಷಂ ಪರ್ವತಾಕಾರಂ ನಾರಾಯಣಮಿವಾಪರಮ್ ।
ದುದ್ರುವುಃ ಕೇಚಿದನ್ಯೋನ್ಯಮೂಚುಃ ಸಂಭ್ರಾಂತಲೋಚನಾಃ ॥ ೪೪ ॥

ಅಯಂ ಸ ದೇವೋ ದೇವಾನಾಂ ಗೋಪ್ತಾ ನಾರಾಯಣೋ ರಿಪುಃ ।
ಅಸ್ಮಾಕಮವ್ಯಯೋ ನೂನಂ ತತ್ಸುತೋ ವಾ ಸಮಾಗತಃ ॥ ೪೫ ॥

ಇತ್ಯುಕ್ತ್ವಾ ಶಸ್ತ್ರವರ್ಷಾಣಿ ಸಸೃಜುಃ ಪುರುಷಾಯ ತೇ ।
ಸ ತಾನಿ ಚಾಕ್ಷತೋ ದೇವೋ ನಾಶಯಾಮಾಸ ಲೀಲಯಾ ॥ ೪೬ ॥

---

೪೨. ಭಯಂಕರವಾಗಿ ಗರ್ಜನ ಮಾಡುತ್ತಿದ್ದ ಆ ಪುರುಷನನ್ನು ಜನಾರ್ದನಸ್ವಾಮಿಯೆಂದು ತಿಳಿಯುತ್ತೇವೆ, ತರುವಾಯ ಹಿರಣ್ಯಕಶಿಪು ರಾಕ್ಷಸನು ಅನೇಕ ಶ್ರೇಷ್ಠ ರಾಕ್ಷಸರೊಂದಿಗೆ ತಾನು ಯುದ್ಧಸಿದ್ಧನಾದನು.

೪೩. ಮತ್ತು ಯುದ್ಧಸಿದ್ಧರೂ, ಆಯುಧಧಾರಿಗಳೂ ಆದ ಪ್ರಹ್ಲಾದ ಮುಂತಾದ ಪುತ್ರರೊಡನೆ ಪ್ರಯಾಣಮಾಡಿ ಕೋಟಿ ಸೂರ್ಯರಿಗೆ ಸಮಾನವಾದ ತೇಜಸ್ಸುಳ್ಳ, ಗರುಡಾರೂಢನಾದ ಆ ಪುರುಷನನ್ನು ನೋಡಿದನು.

೪೪. ಮತ್ತೊಬ್ಬ ಮಹಾವಿಷ್ಣುವೋ ಎಂಬಂತೆ ಪರ್ವತಾಕಾರನಾಗಿ ಬಂದ ಆ ಪುರುಷನನ್ನು ನೋಡಿ ಕೆಲವರು ಭಯದಿಂದ ಓಡಿಹೋದರು. ಮತ್ತೆ ಕೆಲವರು ಭಯದಿಂದ ಕಂಗೆಟ್ಟ ನೇತ್ರವುಳ್ಳವರಾಗಿ ಹೀಗೆ ಮಾತನಾಡಿಕೊಂಡರು.

೪೫. ದೇವತೆಗಳಿಗೆ ರಕ್ಷಕನೂ ನಮಗೆ ಶತ್ರುವೂ ಮತ್ತು ಶಾಶ್ವತನೂ ಆದ ಆ ಮಹಾವಿಷ್ಣುವು ಅಥವಾ ಅವನಂತಿರುವ ಅವನ ಪುತ್ರನು ಇಲ್ಲಿಗೆ ಬಂದಿರುವನು.

೪೬. ಹೀಗೆಂದು ಹೇಳಿ ಅವರು ಆ ಮಹಾಪುರುಷನ ಮೇಲೆ ಆಯುಧಗಳ ಮಳೆಯನ್ನು ಸುರಿಸಿದರು. ಆ ಪುರುಷನು ಸ್ವಲ್ಪವೂ ಪೀಡೆಯಿಲ್ಲದವನಾಗಿ ಆಯುಧಗಳನ್ನು ಅನಾಯಾಸವಾಗಿ ನಾಶಪಡಿಸಿದನು.

ಹಿರಣ್ಯಕಶಿಪೋಃ ಪುತ್ರಾಶ್ಚತ್ವಾರಃ ಪ್ರಥಿತೌಜಸಃ ।
ಪುತ್ರಂ ನಾರಾಯಣೋದ್ಭೂತಂ ಯುಯುಧುರ್ಮೇಘನಿಸ್ವನಾಃ ॥೪೭ ॥

ಪ್ರಹ್ರಾದಶ್ಚಾನುಹ್ರಾದಶ್ಚ ಸಂಹ್ರಾದೋ ಹ್ರಾದ ಏವ ಚ ।
ಪ್ರಹ್ರಾದಃ ಪ್ರಾಹಿಣೋದ್ಬ್ರಾಹ್ಮಮನುಹ್ರಾದೋಽಥ ವೈಷ್ಣವಮ್ ॥೪೮

ಸಂಹ್ರಾದಶ್ಚಾಪಿ ಕೌಮಾರಮಾಗ್ನೇಯಂ ಹ್ರಾದ ಏವ ಚ ।
ತಾನಿ ತಂ ಪುರುಷಂ ಪ್ರಾಪ್ಯ ಚತ್ವಾರ್ಯಸ್ತ್ರಾಣಿ ವೈಷ್ಣವಮ್ ॥ ೪೯ ॥

ನ ಶೇಕುಶ್ಚಾಲಿತುಂ ವಿಷ್ಣುಂ ವಾಸುದೇವಂ ಯಥಾತಥಮ್ ।
ಅಥಾಸೌ ಚತುರಃ ಪುತ್ರಾನ್ ಮಹಾಬಾಹುರ್ಮಹಾಬಲಃ ॥ ೫೦ ॥

---

೪೭. ಪ್ರಸಿದ್ಧವಾದ ವಿಕ್ರಮವುಳ್ಳ ಹಿರಣ್ಯಕಶಿಪುವಿನ ಪುತ್ರರು ನಾಲ್ಕು ಮಂದಿಯು ಮೇಘದಂತೆ ಗಂಭೀರವಾದ ಧ್ವನಿಯುಳ್ಳವರಾಗಿ ಮಹಾವಿಷ್ಣುವಿನ ಪುತ್ರನಾದ ಕರಾಳಪುರುಷನೊಡನೆ ಯುದ್ಧಮಾಡಿದರು.

೪೮. ಹಿರಣ್ಯಕಶಿಪುವಿಗೆ ಪ್ರಹ್ರಾದ, ಅನುಹ್ರಾದ, ಸಂಹ್ರಾದ, ಮತ್ತು ಹ್ರಾದ ಎಂದು ನಾಲ್ಕು ಮಂದಿ ಪುತ್ರರಿದ್ದರು. ಅವರಲ್ಲಿ ಪ್ರಹ್ರಾದನು ಬ್ರಹ್ಮಾಸ್ತ್ರವನ್ನೂ, ಅನುಹ್ರಾದನು ವೈಷ್ಣವಾಸ್ತ್ರವನ್ನೂ ಪ್ರಯೋಗಿಸಿದರು.

೪೯. ಹಾಗೆ ಸಂಹ್ರಾದನು ಕೌಮಾರಾಸ್ತ್ರವನ್ನೂ, ಹ್ರಾದನು ಆಗ್ನೇಯಾಸ್ತ್ರವನ್ನೂ ಪ್ರಯೋಗಿಸಿದರು. ಆ ನಾಲ್ಕು ಅಸ್ತ್ರಗಳು ಆ ವೈಷ್ಣವ ಪುರುಷನನ್ನು ಸಂಧಿಸಿದುವು.

೫೦. ಆದರೆ ವಾಸುದೇವನಾದ ಮಹಾವಿಷ್ಣುವಿನಂತಿರುವ ಆ ಪುರುಷನನ್ನು ಅಸ್ತ್ರಗಳು ಚಲನಮಾಡಿಸಲು ಶಕ್ತವಾಗಲಿಲ್ಲ. ಅನಂತರದಲ್ಲಿ ಮಹಾಬಲಿಷ್ಠನೂ ಮಹಾಬಾಹುವುಳ್ಳವನೂ ಆದ ಆ ಮಹಾಪುರುಷನು ನಾಲ್ಕುಮಂದಿ ಪುತ್ರರನ್ನು ಹಿಡಿದೆತ್ತಿದನು.

ಪ್ರಗೃಹ್ಯ ಪಾದೇಷು ಕರೈಶ್ಚಿಕ್ಷೇಪ ಚ ನನಾದ ಚ ।
ವಿಮುಕ್ತೇಷ್ವಥ ಪುತ್ರೇಷು ಹಿರಣ್ಯಕಶಿಪುಃ ಸ್ವಯಮ್ ॥ ೫೧ ॥

ಪಾದೇನ ತಾಡಯಾಮಾಸ ವೇಗೇನೋರಸಿ ತಂ ಬಲೀ ।
ಸ ತೇನ ಪೀಡಿತೋಽತ್ಯರ್ಥಂ ಗರುಡೇನ ಸಹಾನುಗಃ ॥ ೫೨ ॥

ಅದೃಶ್ಯಃ ಪ್ರಯಯೌ ತೂರ್ಣಂ ಯತ್ರ ನಾರಾಯಣಃ ಪ್ರಭುಃ ॥
ಗತ್ವಾ ವಿಜ್ಞಾಪಯಾಮಾಸ ಪ್ರವೃತ್ತಮಖಿಲಂ ತದಾ ॥ ೫೩ ॥

ಸಂಚಿಂತ್ಯ ಮನಸಾ ದೇವಃ ಸರ್ವಜ್ಞಾನಮಯೋಽಮಲಃ ।
ನರಸ್ಯಾರ್ಧತನುಂ ಕೃತ್ವಾ ಸಿಹ್ಮಸ್ಯಾರ್ಧತನುಂ ತಥಾ ॥ ೫೪ ॥

---

೫೧. ಕಾಲಿನಲ್ಲಿ ಹಿಡಿದೆತ್ತಿ ಕೈಗಳಿಂದ ದೂರ ಒಗೆದು ಆ ಮಹಾಪುರುಷನು ಸಿಹ್ಮನಾದ ಮಾಡಿದನು. ಹೀಗೆ ಆ ಪುತ್ರರು ಬಿಡಲ್ಪಡಲು ಹಿರಣ್ಯಕಶಿಪುವು ತಾನೇ ಆ ಪುರುಷನ ಸಮೀಪಕ್ಕೆ ಬಂದನು.

೫೨. ಮತ್ತು ಬಲಿಷ್ಠನಾದ ಅಸುರನು ವೇಗವಾಗಿ ಬಂದು ತನ್ನ ಕಾಲಿನಿಂದ ಆ ಅಸುರನ ಎದೆಗೆ ಹೊಡೆದನು. ಆಗ ಗರುಡನೇ ಮುಂತಾದ ತನ್ನ ಪರಿವಾರದಿಂದ ಕೂಡಿದ ಆ ಮಹಾಪುರುಷನು ಅಸುರನ ಪಾದಪ್ರಹಾರದಿಂದ ಹೆಚ್ಚಾಗಿ ಪೀಡಿಸಲ್ಪಟ್ಟವನಾದನು.

೫೩. ಮತ್ತು ಅಲ್ಲಿಯೇ ಅದೃಶ್ಯನಾಗಿ ಪ್ರಭುವಾದ ಶ್ರೀಮನ್ನಾರಾಯಣ ಸನ್ನಿಧಿಗೆ ವೇಗವಾಗಿ ಹೋಗಿ ಅದುವರೆಗೆ ನಡೆದ ಸಂಪೂರ್ಣ ಸಮಾಚಾರವನ್ನು ವಿಜ್ಞಾಪಿಸಿಕೊಂಡನು.

೫೪. ಸರ್ವಜ್ಞಾನ ಪೂರ್ಣನಾದ ಮತ್ತು ನಿರ್ಮಲನಾದ ಆ ನಾರಾಯಣ ಸ್ವಾಮಿಯು ಎಲ್ಲವನ್ನೂ ಮನಸ್ಸಿನಿಂದ ಯೋಚಿಸಿ ಮನುಷ್ಯನಂತೆ ಅರ್ಧದೇಹ, ಸಿಹ್ಮದಂತೆ ಮತ್ತೊಂದು ಅರ್ಧದೇಹವುಳ್ಳ ಆಕಾರವನ್ನು ಧರಿಸಿದನು.

ನೃಸಿಹ್ಮವಪುರವ್ಯಕ್ತೋ ಹಿರಣ್ಯಕಶಿಪೋಃ ಪುರೇ ।
ಆವಿರ್ಬಭೂವ ಸಹಸಾ ಮೋಹಯನ್ ದೈತ್ಯದಾನವಾನ್ ॥ ೩೫ ॥

ದಂಷ್ಟ್ರಾಕರಾಲೋ ಯೋಗಾತ್ಮಾ ಯುಗಾಂತದಹನೋಪಮಃ ।
ಸಮಾರುಹ್ಯಾತ್ಮನಃ ಶಕ್ತಿಂ ಸರ್ವಸಂಹಾರಕಾರಿಕಾಮ್ ॥ ೩೬ ॥

ಭಾತಿ ನಾರಾಯಣೋಽನಂತೋ ಯಥಾ ಮಾಧ್ಯಂದಿನೇ ರವಿಃ ।
ದೃಷ್ಟ್ವಾ ನೃಸಿಹ್ಮಂ ಪುರುಷಂ ಪ್ರಹ್ರಾದಂ ಜ್ಯೇಷ್ಠಪುತ್ರಕಮ್ ॥ ೩೭ ॥

ವಧಾಯ ಪ್ರೇಷಯಾಮಾಸ ನರಸಿಹ್ಮಸ್ಯ ಸೋಽಸುರಃ ।
ಇಮಂ ನೃಸಿಹ್ಮಂ ಪುರುಷಂ ಪೂರ್ವಸ್ಮಾದೂನಶಕ್ತಿಕಮ್ ॥ ೩೮ ॥

---

೩೫. ಹೀಗೆ ಇಂದ್ರಿಯಾವೇದ್ಯನಾದ ಸ್ವಾಮಿಯು ನರಸಿಹ್ಮರೂಪವನ್ನು ಧರಿಸಿ ದೈತ್ಯದಾನವರನ್ನು ಮೋಹಗೊಳಿಸುತ್ತಾ ಕೂಡಲೇ ಹಿರಣ್ಯಕಶಿಪುವಿನ ನಗರದಲ್ಲಿ ಆವಿರ್ಭವಿಸಿದನು.

೩೬. ಆ ನರಸಿಹ್ಮಮೂರ್ತಿಯು ಕೋರೆಹಲ್ಲುಗಳಿಂದ ಭಯಂಕರನೂ, ಯೋಗಸ್ವರೂಪಿಯೂ, ಪ್ರಳಯಕಾಲದ ಅಗ್ನಿಯಂತೆ ಉಗ್ರರೂಪಿಯೂ ಆಗಿ ಸರ್ವಸಂಹಾರಕವಾದ ತನ್ನ ಶಕ್ತಿಯಿಂದ ಪೂರ್ಣನಾಗಿ ಬಂದನು.

೩೭. ಆಗ ಅಪರಿಚ್ಛಿನ್ನನಾದ ನಾರಾಯಣನು ನಡುಹಗಲಿನ ಸೂರ್ಯನಂತೆ ಜ್ವಲಿಸುತ್ತಿದ್ದನು. ಆಗ ಆ ನರಸಿಹ್ಮಸ್ವಾಮಿಯೊಡನೆ ಯುದ್ಧಮಾಡಲು ಅಸುರನು ತನ್ನ ಜ್ಯೇಷ್ಠಪುತ್ರನಾದ ಪ್ರಹ್ಲಾದನನ್ನು ಪ್ರೇರಿಸಿದನು.

೩೮. ಹಿರಣ್ಯಕಶಿಪು ರಾಕ್ಷಸನಿಂದ ಮೊದಲಿನ ರೂಪಕ್ಕಿಂತ ಹೆಚ್ಚಾದ ಶಕ್ತಿಯುಳ್ಳ ನರಸಿಹ್ಮಾವತಾರಿಯಾದ ಪುರುಷನನ್ನು ಸಂಹರಿಸಲು ಪ್ರಹ್ಲಾದನೆಂಬ ಪುತ್ರನು ಪ್ರೇರೇಪಿಸಲ್ಪಟ್ಟನು.

ಸಹೈವ ಶೇಷಸುಜ್ಜೈಃ ಸರ್ವೈರ್ನಾಶಯಾಶು ಮಯೇರಿತಃ ।
ಸ ತನ್ನಿಯೋಗಾದಸುರಃ ಪ್ರಹ್ರಾದೋ ವಿಷ್ಣುಮವ್ಯಯಮ್ ॥ ೫೯ ॥

ಯುಯುಧೇ ಸರ್ವಯತ್ನೇನ ನರಸಿಹ್ಮೇನ ನಿರ್ಜಿತಃ ।
ತತಃ ಸಂಮೋಹಿತೋ ದೈತ್ಯೋ ಹಿರಣ್ಯಾಕ್ಷಸ್ತದಾನುಜಃ ॥ ೬೦ ॥

ಧ್ಯಾತ್ವಾ ಪಶುಪತೇರಸ್ತ್ರಂ ಸಸರ್ಜ ಚ ನನಾದ ಚ ।
ತಸ್ಯ ದೇವಾಧಿದೇವಸ್ಯ ವಿಷ್ಣೋರಮಿತತೇಜಸಃ ॥ ೬೧ ॥

ನ ಹಾನಿಮಕರೋದಸ್ತ್ರಂ ತಥಾ ದೇವಸ್ಯ ಶೂಲಿನಃ ।
ದೃಷ್ಟ್ವಾ ಪರಾಹತಂ ತ್ವಸ್ತ್ರಂ ಪ್ರಹ್ರಾದೋ ಭಾಗ್ಯಗೌರವಾತ್ ॥ ೬೨ ॥

---

೫೯. ನನ್ನ ಆಜ್ಞೆಯಂತೆ ಎಲ್ಲ ಅನುಜರೊಂದಿಗೆ ಹೋಗಿ ನರಸಿಹ್ಮನನ್ನು ಸಂಹರಿಸೆಂದು ಜನಕನಿಂದ ಪ್ರೇರೇಪಿಸಲ್ಪಟ್ಟ ಆ ಪ್ರಹ್ರಾದಾಸುರನು ಶಾಶ್ವತನಾದ ಮಹಾವಿಷ್ಣುವಿನೊಡನೆ ಯುದ್ಧಕ್ಕೆ ಹೋದನು.

೬೦. ಮತ್ತು ಸರ್ವ ಪ್ರಯತ್ನಗಳಿಂದ ಯುದ್ಧಮಾಡಿದರೂ ನರಸಿಹ್ಮಸ್ವಾಮಿಯಿಂದ ಅಪಜಯಹೊಂದಿದನು. ತರುವಾಯ ಆ ಹಿರಣ್ಯಕಶಿಪುವಿನ ಅನುಜನಾದ ಹಿರಣ್ಯಾಕ್ಷ ದಾನವನು ಮೋಹಕ್ಕೆ ವಶನಾದನು.

೬೧. ಆದುದರಿಂದ ದೇವಾಧಿದೇವನೂ, ಅಪಾರ ಮಹಿಮೆಯುಳ್ಳವನೂ ಆದ ಮಹಾವಿಷ್ಣುವಿನ ಮೇಲೆ ಪಾಶುಪತಾಸ್ತ್ರವನ್ನು ಧ್ಯಾನಮಾಡಿ ಪ್ರಯೋಗಿಸಿದನು. ಮತ್ತು ಸಿಹ್ಮನಾದಮಾಡಿದನು.

೬೨. ಆ ಪಾಶುಪತಾಸ್ತ್ರವು ಶೂಲಧಾರಿಯಾದ ಈಶ್ವರನಿಗೆ ಹೇಗೋ ಹಾಗೆ ಮಹಾವಿಷ್ಣುವಿಗೆ ಸ್ವಲ್ಪವೂ ಕೂಡ ಕೇಡನ್ನುಂಟುಮಾಡಲಿಲ್ಲ. ಆಗ ಪ್ರಹ್ರಾದನು ತನ್ನ ಮಹಾಭಾಗ್ಯವಶದಿಂದ ಪಾಶುಪತಾಸ್ತ್ರವು ಭಂಗಹೊಂದಿರುವುದನ್ನು ಕಂಡನು.

ಮೇನೇ ಸರ್ವಾತ್ಮಕಂ ದೇವಂ ವಾಸುದೇವಂ ಸನಾತನಮ್ ।
ಸಂತ್ಯಜ್ಯ ಸರ್ವಶಸ್ತ್ರಾ ಸತ್ವಯುಕ್ತೇನ ಚೇತಸಾ ॥ ೬೩ ॥

ನನಾಮ ಶಿರಸಾ ದೇವಂ ಯೋಗಿನಾಂ ಹೃದಯೇಶಯಮ್ ।
ಸ್ತುತ್ವಾ ನಾರಾಯಣಂ ಸ್ತೋತ್ರೈಃ ಋಗ್ಯಜುಃಸಾಮಸಂಭವೈಃ ॥ ೬೪ ॥

ನಿವಾರ್ಯ ಪಿತರಂ ಭ್ರಾತೄನ್ ಹಿರಣ್ಯಾಕ್ಷಂ ತದಾಬ್ರವೀತ್ ।
ಅಯಂ ನಾರಾಯಣೋಽನಂತಃ ಶಾಶ್ವತೋ ಭಗವಾನಜಃ ॥ ೬೫ ॥

ಪುರಾಣಃ ಪುರುಷೋ ದೇವೋ ಮಹಾಯೋಗೀ ಜಗನ್ಮಯಃ ।
ಅಯಂ ಧಾತಾ ವಿಧಾತಾ ಚ ಸ್ವಯಂಜ್ಯೋತಿರ್ನಿರಂಜನಃ ॥ ೬೬ ॥

---

೬೩. ಮತ್ತು ಆ ನರಸಿಹ್ಮಮೂರ್ತಿಯನ್ನು ಸರ್ವಾತ್ಮಕನೂ, ಸನಾತನನೂ ಆದ ವಾಸುದೇವನೆಂದು ಅರಿತು ಸಾತ್ವಿಕಭಜನೆಯಿಂದ ಕೂಡಿದ ಮಾನಸದಿಂದ ಕೂಡಿ ಸರ್ವಾಸ್ತ್ರಗಳನ್ನೂ ತ್ಯಜಿಸಿದನು.

೬೪. ಮತ್ತು ಸಮಸ್ತ ಯೋಗಿಗಳ ಹೃದಯಗುಹೆಯಲ್ಲಿ ವಾಸಮಾಡುವ ನಾರಾಯಣದೇವನನ್ನು ಶಿರಸ್ಸಿನಿಂದ ವಂದಿಸಿ ಋಗ್ವೇದ-ಯಜುರ್ವೇದ-ಸಾಮವೇದ ಗಳಲ್ಲಿ ಸಂಭವಿಸಿದ ಅನೇಕ ಸ್ತೋತ್ರಗಳಿಂದ ಸ್ತುತಿಮಾಡಿದನು.

೬೫. ಮತ್ತು ತನ್ನ ತಂದೆಯನ್ನೂ, ಭ್ರಾತೃವರ್ಗವನ್ನೂ ಯುದ್ಧದಿಂದ ನಿಲ್ಲಿಸಿ ಹಿರಣ್ಯಾಕ್ಷನನ್ನು ಕುರಿತು ಹೀಗೆಂದು ಹೇಳಿದನು:- ಇವನು ಜನ್ಮವಿಲ್ಲದವನೂ, ಷಡ್ಗುಣೈಶ್ವರ್ಯಸಂಪನ್ನನೂ, ಶಾಶ್ವತನೂ ಮತ್ತು ಅಂತವಿಲ್ಲದವನೂ ಆದ ಶ್ರೀಮನ್ನಾರಾಯಣಸ್ವಾಮಿಯು.

೬೬. ಇವನು ಪುರಾಣ ಪುರುಷನೂ, ಮಹಾಯೋಗಿಯೂ, ವಿಶ್ವರೂಪನೂ, ಸೃಷ್ಟಿಕರ್ತನೂ, ಪೋಷಕನೂ, ಸ್ವಯಂಪ್ರಕಾಶನೂ ಮತ್ತು ನಿರ್ದೋಷಿಯೂ ಆದ ದೇವೋತ್ತಮನಾಗಿರುವನು.

ಪ್ರಧಾನಂ ಪುರುಷಂ ತತ್ತ್ವಂ ಮೂಲಪ್ರಕೃತಿರವ್ಯಯಾ ।
ಈಶ್ವರಃ ಸರ್ವಭೂತಾನಾಮಂತರ್ಯಾಮೀ ಗುಣಾತಿಗಃ ॥ ೬೭ ॥

ಗಚ್ಛಧ್ವಮೇನಂ ಶರಣಂ ವಿಷ್ಣುಮವ್ಯಕ್ತಮವ್ಯಯಮ್ ।
ಏವಮುಕ್ತೇ ಸುದುರ್ಬುದ್ಧಿರ್ಹಿರಣ್ಯಕಶಿಪುಃ ಸ್ವಯಮ್ ॥ ೬೮ ॥

ಪ್ರೋವಾಚ ಪುತ್ರಮತ್ಯರ್ಥಂ ಮೋಹಿತೋ ವಿಷ್ಣುಮಾಯಯಾ ।
ಅಯಂ ಸರ್ವಾತ್ಮನಾ ವಧ್ಯೋ ನೃಸಿಂಹೋಽಲ್ಪಪರಾಕ್ರಮಃ ॥ ೬೯ ॥

ಸಮಾಗತೋಽಸ್ಮದ್ಭವನಮಿದಾನೀಂ ಕಾಲಚೋದಿತಃ ।
ವಿಹಸ್ಯ ಪಿತರಂ ಪುತ್ರೋ ವಚಃ ಪ್ರಾಹ ಮಹಾಮತಿಃ ॥ ೭೦ ॥

---

೬೭. ಈ ಸ್ವಾಮಿಯು ಪ್ರಧಾನ-ಪುರುಷ ಎಂಬ ತತ್ತ್ವಸ್ವರೂಪನೂ, ಅವ್ಯಯವಾದ ಮೂಲಪ್ರಕೃತಿರೂಪನೂ, ಸಮಸ್ತ ಪ್ರಾಣಿಗಳ ಅಂತರ್ಯಾಮಿಯೂ, ಈಶ್ವರನೂ ಮತ್ತು ಗುಣತ್ರಯಾತೀತನೂ ಆಗಿರುವನು.

೬೮. ಇಂದ್ರಿಯಾಗೋಚರನೂ, ಶಾಶ್ವತನೂ ಆದ ಮಹಾವಿಷ್ಣುವನ್ನು ನೀವೆಲ್ಲರೂ ಶರಣುಹೊಂದಿರಿ. ಹೀಗೆಂದು ಪ್ರಹ್ಲಾದನಿಂದ ಹೇಳಲ್ಪಡಲಾಗಿ ಅತ್ಯಂತ ದುರ್ಬುದ್ಧಿಯಿಂದ ಕೂಡಿದ ಹಿರಣ್ಯಕಶಿಪುವು ಮಾತನಾಡಿದನು.

೬೯. ವಿಷ್ಣುವಿನ ಮಹಾಮಾಯೆಯಿಂದ ಅತಿಯಾಗಿ ಮೋಹಿಸಲ್ಪಟ್ಟವನಾಗಿ ಪುತ್ರನಿಗೆ ಹೀಗೆಂದು ಹೇಳಿದನು :— ಸ್ವಲ್ಪವಾದ ವಿಕ್ರಮವುಳ್ಳ ಈ ನರಸಿಂಹಮೂರ್ತಿಯು ಸಮಸ್ತ ರೀತಿಯಿಂದಲೂ ವಧಾರ್ಹನಾಗಿರುವನು.

೭೦. ಈ ನರಸಿಂಹಮೂರ್ತಿಯು ಮೃತ್ಯುವಿನಿಂದ ಪ್ರೇರೇಪಿಸಲ್ಪಟ್ಟು ಈಗ ನಮ್ಮ ಮನೆಗೆ ಬಂದಿರುವನು. ಹೀಗೆಂದು ಹೇಳಿದ ತಂದೆಯನ್ನು ಕುರಿತು ಮಹಾ ವಿವೇಕಿಯಾದ ಪುತ್ರನು ಈ ವಚನವನ್ನು ಹೇಳಿದನು.

ಮಾ ನಿಂದಸ್ವೈನಮೀಶಾನಂ ಭೂತಾನಾಮೇಕಮವ್ಯಯಮ್ ।
ಕಥಂ ದೇವೋ ಮಹಾದೇವಃ ಶಾಶ್ವತಃ ಕಾಲವರ್ಜಿತಃ ॥ ೭೧ ॥

ಕಾಲೇನ ಹನ್ಯತೇ ವಿಷ್ಣುಃ ಕಾಲಾತ್ಮಾ ಕಾಲರೂಪಧೃಕ್ ।
ತತಃ ಸುವರ್ಣಕಶಿಪುರ್ದುರಾತ್ಮಾ ಕಾಲಚೋದಿತಃ ॥ ೭೨ ॥

ನಿವಾರಿತೋಽಪಿ ಪುತ್ರೇಣ ಯುಯುಧೇ ಹರಿಮವ್ಯಯಮ್ ।
ಸಂರಕ್ತನಯನೋಽನಂತೋ ಹಿರಣ್ಯನಯನಾಗ್ರಜಮ್ ॥ ೭೩ ॥

ನಖೈರ್ವಿದಾರಯಾಮಾಸ ಪ್ರಹ್ರಾದಸ್ಯೈವ ಪಶ್ಯತಃ ।
ಹತೇ ಹಿರಣ್ಯಕಶಿಪೌ ಹಿರಣ್ಯಾಕ್ಷೋ ಮಹಾಬಲಃ ॥ ೭೪ ॥

---

೭೧. ಸಮಸ್ತ ಪ್ರಾಣಿಗಳಿಗೆ ಏಕಾತ್ಮರೂಪಿಯೂ, ಅವ್ಯಯನೂ ಮತ್ತು ಸರ್ವೇಶ್ವರನೂ ಆದ ಈ ಸ್ವಾಮಿಯನ್ನು ನಿಂದಿಸಬೇಡ. ಮೃತ್ಯುವರ್ಜಿತನೂ, ಶಾಶ್ವತನೂ ಆದ ಈ ದೇವೋತ್ತಮನು ಮೃತ್ಯುವಿನಿಂದ ಪ್ರೇರೇಪಿಸಲ್ಪಡುವುದೆಂತು ?

೭೨. ಆ ಮಹಾದೇವನು ಕಾಲಸ್ವರೂಪಿಯೂ, ಕಾಲಕ್ಕೆ ಆತ್ಮಭೂತನೂ ಆಗಿರುವುದರಿಂದ ಕಾಲದಿಂದ ಸಂಹರಿಸಲ್ಪಡುವುದು ಹೇಗೆ ? ತರುವಾಯ ದುರಾತ್ಮನಾದ ಹಿರಣ್ಯಕಶಿಪುವು ತನ್ನ ಕಾಲಪ್ರೇರಣೆಗೆ ವಶನಾದನು.

೭೩ ಆದ್ದರಿಂದ ಪುತ್ರನಿಂದ ನಿವಾರಿಸಲ್ಪಟ್ಟರೂ ಅದನ್ನು ಧಿಕ್ಕರಿಸಿ ಅವ್ಯಯನಾದ ಶ್ರೀಮನ್ನಾರಾಯಣನೊಡನೆ ಯುದ್ಧಮಾಡಿದನು. ಆಗ ಕೆಂಪಾದ ನೇತ್ರವುಳ್ಳ ಅನಂತಸ್ವಾಮಿಯು ಹಿರಣ್ಯಾಕ್ಷನ ಅಗ್ರಜನನ್ನು ಹಿಡಿದುಕೊಂಡನು.

೭೪. ಮತ್ತು ಪ್ರಹ್ರಾದನು ನೋಡುತ್ತಿರುವ ಹಾಗೆ ಉಗುರುಗಳಿಂದ ಹಿರಣ್ಯಕಶಿಪುವಿನ ಎದೆಯನ್ನು ಬಗೆದನು. ಹೀಗೆ ಹಿರಣ್ಯಕಶಿಪುವು ಸಂಹರಿಸಲ್ಪಡಲು ಮಹಾಬಲಿಷ್ಠನಾದ ಹಿರಣ್ಯಾಕ್ಷನು ಪಲಾಯನಮಾಡಿದನು.

ವಿಸೃಜ್ಯ ಪುತ್ರಂ ಪ್ರಹ್ರಾದಂ ದುದ್ರುವೇ ಭಯವಿಹ್ವಲಃ ।
ಅನುಹ್ರಾದಾದಯಃ ಪುತ್ರಾ ಅನ್ಯೇ ಚ ಶತಶೋಽಸುರಾಃ ॥ ೭೫ ॥

ನೃಸಿಹ್ಮದೇಹಸಂಭೂತೈಃ ಸಿಹ್ಮೈರ್ನೀತಾ ಯಮಕ್ಷಯಮ್ ।
ತತಃ ಸಂಹೃತ್ಯ ತದ್ರೂಪಂ ಹರಿರ್ನಾರಾಯಣಃ ಪ್ರಭುಃ ॥ ೭೬ ॥

ಸ್ವಮೇವ ಪರಮಂ ರೂಪಂ ಯಯೌ ನಾರಾಯಣಾಹ್ವಯಮ್ ।
ಗತೇ ನಾರಾಯಣೇ ದೈತ್ಯಃ ಪ್ರಹ್ರಾದೋಽಸುರಸತ್ತಮಃ ॥ ೭೭ ॥

ಅಭಿಷೇಕೇಣ ಯುಕ್ತೇನ ಹಿರಣ್ಯಾಕ್ಷಮಯೋಜಯತ್ ।
ಸ ಬಾಧಯಾಮಾಸ ಸುರಾನ್ ರಣೇ ಜಿತ್ವಾ ಮುನೀನಪಿ ॥ ೭೮ ॥

---

೭೫. ಆ ಹಿರಣ್ಯಾಕ್ಷನು ಭಯದಿಂದ ಪೀಡಿಸಲ್ಪಟ್ಟು ಪ್ರಹ್ಲಾದ ಪುತ್ರನನ್ನು ಅಲ್ಲಿಗೆ ಬಿಟ್ಟು ಪಲಾಯನಮಾಡಿದನು. ಅನುಹ್ರಾದ ಮುಂತಾದ ಪುತ್ರರೂ ಮಿಕ ನೂರಾರು ಮಂದಿ ಅಸುರರೂ ಯುದ್ಧದಲ್ಲಿ ಮರಣಹೊಂದಿದರು.

೭೬ ಆ ಮಿಕ್ಕ ರಾಕ್ಷಸರು ನರಸಿಹ್ಮಸ್ವಾಮಿಯ ದೇಹದಿಂದ ಆವಿರ್ಭವಿಸಿದ ಅನೇಕ ಸಿಹ್ಮವ್ಯಕ್ತಿಗಳಿಂದ ಮರಣವನ್ನು ಹೊಂದಿದರು. ಆಗ ಸರ್ವ ಪಾಪಭಂಜಕನೂ, ಸರ್ವ ಸಮರ್ಥನೂ ಆದ ನಾರಾಯಣನು ಆ ನರಸಿಹ್ಮರೂಪವನ್ನು ಬಿಟ್ಟನು.

೭೭. ಮತ್ತು ನಾರಾಯಣ ಎಂಬ ಸಂಜ್ಞಾಂಕಿತವಾದ ತನ್ನ ಪರಮಾರ್ಥ ರೂಪವನ್ನು ಸ್ವೀಕರಿಸಿದನು. ಹೀಗೆ ಶ್ರೀಮನ್ನಾರಾಯಣನು ಅಂತರ್ಧಾನ ಹೊಂದಲು ರಾಕ್ಷಸಶ್ರೇಷ್ಠನಾದ ಪ್ರಹ್ಲಾದನು ರಾಜ್ಯಭಾರಕ್ರಮವನ್ನು ಏರ್ಪಡಿಸಿದನು.

೭೮. ಮತ್ತು ಯುಕ್ತರೂಪವಾದ ಪಟ್ಟಾಭಿಷೇಕ ವಿಧಾನದಿಂದ ಹಿರಣ್ಯಾಕ್ಷನನ್ನು ರಾಜನನ್ನಾಗಿ ಮಾಡಿದನು. ಆ ಹಿರಣ್ಯಾಕ್ಷನು ದೇವತೆಗಳನ್ನೂ, ಮುನಿಜನರನ್ನೂ ಯುದ್ಧದಲ್ಲಿ ಗೆದ್ದು ಪೀಡಿಸಿದನು.

ಲಬ್ಧ್ವಾಂಧಕಂ ಮಹಾಪುತ್ರಂ ತಪಸಾರಾಧ್ಯ ಶಂಕರಮ್ ।
ದೇವಾನ್ ಜಿತ್ವಾ ಸದೇವೇಂದ್ರಾನ್ ಕ್ಷುಬ್ಧ್ವಾ ಚ ಧರಣೀಮಿಮಾಮ್ ॥

ನೀತ್ವಾ ರಸಾತಲಂ ಚಕ್ರೇ ವೇದಾನ್ ವೈ ನಿಷ್ಪ್ರಭಾಂಸ್ತಥಾ ।
ತತಃ ಸಬ್ರಹ್ಮಕಾ ದೇವಾಃ ಪರಿಮ್ಲಾನಮುಖಶ್ರಿಯಃ ॥ ೮೦ ॥

ಗತ್ವಾ ವಿಜ್ಞಾಪಯಾಮಾಸುರ್ವಿಷ್ಣವೇ ಹರಿಮಂದಿರಮ್ ।
ಸ ಚಿಂತಯಿತ್ವಾ ವಿಶ್ವಾತ್ಮಾ ತದ್ವಧೋಪಾಯಮವ್ಯಯಃ ॥ ೮೧ ॥

ಸರ್ವದೇವಮಯಂ ಶುಭ್ರಂ ವಾರಾಹಂ ಚ ಪುರಾ ದಧೇ ।
ಗತ್ವಾ ಹಿರಣ್ಯನಯನಂ ಹತ್ವಾ ತಂ ಪುರುಷೋತ್ತಮಃ ॥ ೮೨ ॥

---

೭೯. ಮತ್ತು ತಪಸ್ಸಿನಿಂದ ಈಶ್ವರನನ್ನು ಆರಾಧಿಸಿ ಅಂಧಕಾಸುರನೆಂಬ ಪುತ್ರನನ್ನು ಹೊಂದಿ ದೇವೇಂದ್ರನೇ ಮುಂತಾದ ನಿಖಿಲದೇವತೆಗಳನ್ನು ಗೆದ್ದು ಸಮಸ್ತ ಭೂಮಿಯನ್ನು ಕ್ಷೋಭೆಮಾಡಿದನು.

೮೦. ಮತ್ತು ಸಮಸ್ತ ವೇದಗಳನ್ನು ಪಾತಾಳಕ್ಕೆ ತೆಗೆದುಕೊಂಡುಹೋಗಿ ನಿಸ್ತೇಜಸಗಳನ್ನಾಗಿ ಮಾಡಿದನು. ಅದರಿಂದ ಬ್ರಹ್ಮಾದಿ ಸಮಸ್ತ ದೇವತೆಗಳೂ ಬಾಡಿದ ಮುಖಶೋಭೆಯುಳ್ಳವರಾದರು.

೮೧. ಮತ್ತು ವಿಷ್ಣುವಿನ ಆಲಯಕ್ಕೆ ಹೋಗಿ ವಿಷ್ಣುವಿಗೆ ಈ ವೃತ್ತಾಂತವನ್ನು ತಿಳಿಸಿದರು. ಆಗ ಅವ್ಯಯನೂ, ವಿಶ್ವರೂಪಿಯೂ ಆದ ಆ ಮಹಾವಿಷ್ಣುವು ಹಿರಣ್ಯಾಕ್ಷನ ಸಂಹಾರೋಪಾಯವನ್ನು ಚಿಂತಿಸಿದನು.

೮೨. ಮತ್ತು ಪುರುಷೋತ್ತಮನಾದ ಮಹಾವಿಷ್ಣುವು ಪೂರ್ವದಲ್ಲಿ ಸಮಸ್ತ ದೇವತಾರೂಪವೂ, ಪವಿತ್ರವೂ ಆದ ವರಾಹರೂಪವನ್ನು ಧರಿಸಿ ಆ ಹಿರಣ್ಯಾಕ್ಷಾಸುರನನ್ನು ವಧಿಸಿದನು.

ದಂಷ್ಟ್ರಯೋದ್ಧಾರಯಾಮಾಸ ಕಲ್ಪಾದೌ ಧರಣೀಮಿಮಾಮ್ ।
ತ್ಯಕ್ತ್ವಾ ವಾರಾಹಸಂಸ್ಥಾನಂ ಸಂಸ್ಥಾಪ್ಯೈವಂ ಸುರದ್ವಿಷಃ ॥ ೮೩ ॥

ಸ್ವಾಮೇವ ಪ್ರಕೃತಿಂ ದಿವ್ಯಾಂ ಯಯೌ ವಿಷ್ಣುಃ ಪರಂ ಪದಮ್ ।
ತಸ್ಮಿನ್ ಹತೇಽಮರರಿಪೌ ಪ್ರಹ್ಲಾದೋ ವಿಷ್ಣುತತ್ಪರಃ ॥ ೮೪ ॥

ಅಪಾಲಯತ್ ಸ್ವಕಂ ರಾಜ್ಯಂ ಭಾವಂ ತ್ಯಕ್ತ್ವಾ ತದಾಸುರಮ್ ।
ಯಜತೇ ವಿಧಿವದ್ದೇವಾನ್ ವಿಷ್ಣೋರಾರಾಧನೇ ರತಃ ॥ ೮೫ ॥

ನಿಸ್ಸಪತ್ನಂ ತದಾ ರಾಜ್ಯಂ ತಸ್ಯಾಸೀದ್ವಿಷ್ಣುವೈಭವಾತ್ ।
ತತಃ ಕದಾಚಿದಸುರೋ ಬ್ರಾಹ್ಮಣಂ ಗೃಹಮಾಗತಮ್ ॥ ೮೬ ॥

---

೮೩. ಮತ್ತು ಕಲ್ಪಾದಿಯಲ್ಲಿ ಈ ಕ್ರಮದಿಂದ ದೇವಶತ್ರುಗಳನ್ನು ನಿಗ್ರಹಿಸಿ ಸಮುದ್ರದಲ್ಲಿ ಮುಳುಗಿದ ಭೂಮಿಯನ್ನು ಕೋರೆಹಲ್ಲಿನಿಂದ ಮೇಲಕ್ಕೆತ್ತಿ ಕಡೆಯಲ್ಲಿ ತನ್ನ ವರಾಹಸ್ವರೂಪವನ್ನು ಬಿಟ್ಟನು.

೮೪. ಮತ್ತು ಮಹಾವಿಷ್ಣುವು ತನ್ನ ನಿಜರೂಪವನ್ನು ಧರಿಸಿ ತನ್ನ ಪರಮ ಸ್ಥಾನಕ್ಕೆ ಹೊರಟುಹೋದನು, ಹೀಗೆ ದೇವತೆಗಳ ಶತ್ರುವಾದ ಆ ಹಿರಣ್ಯಾಕ್ಷಾಸುರನ ಸಂಹಾರವಾಗಲು ಪ್ರಹ್ಲಾದನು ಮಹಾ ಮಿಷ್ಣುಭಕ್ತನಾದನು.

೮೫. ಮತ್ತು ಜನ್ಮಸಿದ್ಧವಾದ ಅಸುರಸಂಪತ್ತಿನ ಭಾವವನ್ನು ಬಿಟ್ಟು ತನ್ನ ರಾಜ್ಯವನ್ನು ಪಾಲಿಸುತ್ತಾ ಮಹಾವಿಷ್ಣುವಿನ ಆರಾಧನದಲ್ಲಿ ನಿರತನಾಗಿ ಯಥಾವಿಧಿ ಯಾಗಿ ದೇವತೆಗಳನ್ನು ಪೂಜಿಸಿದನು.

೮೬. ಆಗ ವಿಷ್ಣುವಿನ ವೈಭವದಿಂದ ಆ ಪ್ರಹ್ಲಾದನ ರಾಜ್ಯವು ನಿಷ್ಕಂಟಕ ವಾಯಿತು. ಆಗ ಒಂದು ಸಮಯದಲ್ಲಿ ಒಬ್ಬ ಬ್ರಾಹ್ಮಣೋತ್ತಮನು ಆ ಪ್ರಹ್ಲಾದಾ ಸುರನ ಮನೆಗೆ ಬಂದನು.

ನ ಚ ಸಂಭಾಷಯಾಮಾಸ ದೇವಾನಾಂ ಚೈವ ಮಾಯಯಾ ।
ಸ ತೇನ ತಾಪಸೋಽತ್ಯರ್ಥಂ ಮೋಹಿತೇನಾವಮಾನಿತಃ ॥ ೮೭ ॥

ಶಶಾಪಾಸುರರಾಜಾನಂ ಕ್ರೋಧಸಂರಕ್ತಲೋಚನಃ ।
ಯತ್ತದ್ಬಲಂ ಸಮಾಶ್ರಿತ್ಯ ಬ್ರಾಹ್ಮಣಾನವಮನ್ಯಸೇ ॥ ೮೮ ॥

ಸಾ ಶಕ್ತಿರ್ವೈಷ್ಣವೀ ದಿವ್ಯಾ ವಿನಾಶಂ ತೇ ಗಮಿಷ್ಯತಿ ।
ಇತ್ಯುಕ್ತ್ವಾ ಪ್ರಯಯೌ ತೂರ್ಣಂ ಪ್ರಹ್ಲಾದಸ್ಯ ಗೃಹಾದ್ದ್ವಿಜಃ ॥ ೮೯ ॥

ಮುಮೋಹ ರಾಜ್ಯಸಂಯುಕ್ತಃ ಸೋಽಪಿ ಶಾಪಬಲಾತ್ತತಃ ।
ಬಾಧಯಾಮಾಸ ವಿಪ್ರೇಂದ್ರಾನ್ ನ ವಿವೇದ ಜನಾರ್ದನಮ್ ॥ ೯೦ ॥

---

೮೭. ಆದರೆ ದೇವತೆಗಳ ಮಾಯೆಯಿಂದ ಮೋಹಗೊಂಡವನಾಗಿ ಆ ಪ್ರಹ್ಲಾದಾಸುರನು ಆ ಬ್ರಾಹ್ಮಣನೊಡನೆ ಸಂಭಾಷಣೆ ಮಾಡಲಿಲ್ಲ. ಹೀಗೆ ಮಾಯೆಯಿಂದ ಮೋಹ ಹೊಂದಿದ ಅಸುರನಿಂದ ಆ ತಪಸ್ವಿ ಬ್ರಾಹ್ಮಣನು ಹೆಚ್ಚಾಗಿ ಅವಮಾನಿಸಲ್ಪಟ್ಟನು.

೮೮. ಮತ್ತು ಆ ತಪಸ್ವಿಯು ಕೋಪದಿಂದ ಕೆಂಪಾದ ನೇತ್ರವುಳ್ಳವನಾಗಿ ಅಸುರರಾಜನನ್ನು ಹೀಗೆಂದು ಶಪಿಸಿದನು. ಅಸುರನೇ ! ಉತ್ತಮವಾದ ವೈಷ್ಣವ ಶಕ್ತಿಯನ್ನು ಅವಲಂಬಿಸಿ ಬ್ರಾಹ್ಮಣರನ್ನು ಧಿಕ್ಕರಿಸುತ್ತಿರುವೆಯಲ್ಲವೇ ?

೮೯. ಅಂತಹ ದಿವ್ಯವಾದ ವೈಷ್ಣವಶಕ್ತಿಯು ನಿನಗೆ ನಾಶವನ್ನುಂಟು ಮಾಡುವುದು. ಹೀಗೆಂದು ಆ ತಪಸ್ವಿಬ್ರಾಹ್ಮಣನು ಹೇಳಿ ಪ್ರಹ್ಲಾದನ ಮನೆಯಿಂದ ಶೀಘ್ರವಾಗಿ ಪ್ರಯಾಣಮಾಡಿದನು.

೯೦. ತರುವಾಯ ರಾಜ್ಯಾಧಿಕಾರದಿಂದ ಕೂಡಿದ ಆ ಪ್ರಹ್ಲಾದನು ಶಾಪ ಮಹಿಮೆಯಿಂದ ಮೋಹಗೊಂಡನು, ಮತ್ತು ಜನಾರ್ದನಸ್ವಾಮಿಯನ್ನು ಲಕ್ಷಿಸದೆ ಬ್ರಾಹ್ಮಣೋತ್ತಮರನ್ನು ಪೀಡಿಸಿದನು.

ಪಿತುರ್ವಧಮನುಸ್ಮೃತ್ಯ ಕ್ರೋಧಂ ಚಕ್ರೇ ಹರಿಂ ಪ್ರತಿ ।
ತಯೋಃ ಸಮಭವದ್ಯುದ್ಧಂ ಸುಘೋರಂ ರೋಮಹರ್ಷಣಮ್ ॥ ೯೧॥

ನಾರಾಯಣಸ್ಯ ದೇವಸ್ಯ ಪ್ರಹ್ರಾದಸ್ಯಾಮರದ್ವಿಷಃ ।
ಕೃತ್ವಾ ಸ ಸುಮಹದ್ಯುದ್ಧಂ ವಿಷ್ಣುನಾ ತೇನ ನಿರ್ಜಿತಃ ॥ ೯೨ ॥

ಪೂರ್ವಸಂಸ್ಕಾರಮಾಹಾತ್ಮ್ಯಾತ್ಪರಸ್ಮಿನ್ ಪುರುಷೇ ಹರೌ ।
ಸಂಜಾತಂ ತಸ್ಯ ವಿಜ್ಞಾನಂ ಶರಣ್ಯಂ ಶರಣಂ ಯಯೌ ॥ ೯೩ ॥

ತತಃ ಪ್ರಭೃತಿ ದೈತ್ಯೇಂದ್ರೋ ಹ್ಯನನ್ಯಾಂ ಭಕ್ತಿಮುದ್ವಹನ್ ।
ನಾರಾಯಣೇ ಮಹಾಯೋಗಮವಾಪ ಪುರುಷೋತ್ತಮೇ ॥ ೯೪ ॥

---

೯೧. ಮತ್ತು ತನ್ನ ಜನಕನಿಗೆ ಹರಿಯಿಂದ ಉಂಟಾದ ವಧವನ್ನು ಸ್ಮರಿಸಿ ಹರಿಯ ವಿಷಯದಲ್ಲಿ ಕೋಪವನ್ನು ಮಾಡಿದನು. ಹೀಗಾಗಿ ಅವರಿಬ್ಬರಿಗೆ ರೋಮಾಂಚನವನ್ನುಂಟುಮಾಡುವ ಘೋರಸಂಗ್ರಾಮವು ಜರುಗಿತು.

೯೨. ಶ್ರೀಮನ್ನಾರಾಯಣಸ್ವಾಮಿಗೂ ದೇವಕಂಟಕನಾದ ಪ್ರಹ್ರಾದನಿಗೂ ಮಹತ್ತಾದ ಯುದ್ಧವು ನಡೆದು ಆ ಯುದ್ಧದಲ್ಲಿ ವಿಷ್ಣುವಿನಿಂದ ಪ್ರಹ್ರಾದನು ಪರಾಜಯಹೊಂದಿದನು.

೯೩. ಆಗ ಪೂರ್ವಜನ್ಮದ ಸಂಸ್ಕಾರಮಹಿಮೆಯಿಂದ ಪರಮಪುರುಷನಾದ ಶ್ರೀಮನ್ನಾರಾಯಣನಲ್ಲಿ ಪ್ರಹ್ರಾದನಿಗೆ ತತ್ತ್ವಜ್ಞಾನವು ಉಂಟಾಗಿ ಅವನು ಸರ್ವ ರಕ್ಷಕನಾದ ಹರಿಯನ್ನು ಶರಣುಹೊಂದಿದನು.

೯೪. ಆ ಮೊದಲುಗೊಂಡು ದೈತ್ಯರಾಜನಾದ ಪ್ರಹ್ರಾದನು ಪುರುಷೋತ್ತಮ ನಾದ ಶ್ರೀಮನ್ನಾರಾಯಣನಲ್ಲಿ ಅಸಾಧಾರಣವಾದ ಭಕ್ತಿಯನ್ನಿಟ್ಟು ಮಹತ್ತಾದ ಧ್ಯಾನಯೋಗವನ್ನು ಹೊಂದಿದನು.

ಹಿರಣ್ಯಕಶಿಪೋಃ ಪುತ್ರೇ ಯೋಗಸಂಸಕ್ತಚೇತಸಿ ।
ಅವಾಪ ತನ್ಮಹದ್ರಾಜ್ಯಮಂಧಕೋಽಸುರಪುಂಗವಃ ॥ ೯೫ ॥

ಹಿರಣ್ಯನೇತ್ರತನಯಃ ಶಂಭೋರ್ದೇಹಸಮುದ್ಭವಃ ।
ಮಂದರಸ್ಥಾಮುಮಾಂ ದೇವೀಂ ಚಕಮೇ ಪರ್ವತಾತ್ಮಜಾಮ್ ॥ ೯೬ ॥

ಪುರಾ ದಾರುವನೇ ಪುಣ್ಯೇ ಮುನಯೋ ಗೃಹಮೇಧಿನಃ ।
ಈಶ್ವರಾರಾಧನಾರ್ಥಾಯ ತಪಶ್ಚೇರುಃ ಸಹಸ್ರಶಃ ॥ ೯೭ ॥

ತತಃ ಕದಾಚಿನ್ಮಹತೀ ಕಾಲಯೋಗೇನ ದುಸ್ತರಾ ।
ಅನಾವೃಷ್ಟಿರತೀವೋಗ್ರಾ ಹ್ಯಾಸೀದ್ಭೂತವಿನಾಶಿನೀ ॥ ೯೮ ॥

---

೯೫. ಹೀಗೆ ಹಿರಣ್ಯಕಶಿಪುವಿನ ಪುತ್ರನಾದ ಪ್ರಹ್ಲಾದನು ಯೋಗಾಭ್ಯಾಸದಲ್ಲಿ ಲೀನವಾದ ಮಾನಸವುಳ್ಳವನಾಗಲು ಅಸುರಶ್ರೇಷ್ಠನಾದ ಅಂಧಕಾಸುರನು ಆ ಮಹಾ ರಾಜ್ಯಭಾರವನ್ನು ಹೊಂದಿದನು.

೯೬. ಶಂಭುವಿನ ದೇಹದಿಂದ ಜನ್ಮವೆತ್ತಿರುವ ಹಿರಣ್ಯಾಕ್ಷನ ಪುತ್ರನಾದ ಅಂಧಕಾಸುರನು ಮಂದರಾದ್ರಿಯಲ್ಲಿ ವಾಸಮಾಡುವ ಪರ್ವತಪುತ್ರಿಯಾದ ಉಮಾ ದೇವಿಯನ್ನು ಕಾಮಿಸಿದನು.

೯೭. ಪೂರ್ವಕಾಲದಲ್ಲಿ ಪವಿತ್ರವಾದ ದಾರುವನದಲ್ಲಿ ಗೃಹಸ್ಥಾಶ್ರಮಿಗಳಾದ ಸಾವಿರಾರು ಮಂದಿ ಮಹರ್ಷಿಗಳು ಮಹೇಶ್ವರನ ಆರಾಧನೆಗೋಸ್ಕರ ತಪಸ್ಸನ್ನಾಚರಿಸಿದರು.

೯೮. ತರುವಾಯ ಒಂದು ವೇಳೆ ಕಾಲಮಹಿಮೆಯಿಂದ ಅತ್ಯಂತ ದುಸ್ತರವೂ, ಪ್ರಾಣಿಗಳನ್ನು ಸಂಹರಿಸುವುದೂ ಮತ್ತು ಉಗ್ರವೂ ಆದ ಮಹಾ ಅನಾವೃಷ್ಟಿಯು ಉಂಟಾಯಿತು.

ಸಮೇತ್ಯ ಸರ್ವೇ ಮುನಯೋ ಗೌತಮಂ ತಪಸಾಂ ನಿಧಿಮ್ ।
ಅಯಾಚಂತ ಕ್ಷುಧಾವಿಷ್ಟಾ ಆಹಾರಂ ಪ್ರಾಣಧಾರಣಮ್ ॥ ೯೯ ॥

ಸ ತೇಭ್ಯಃ ಪ್ರದದಾವನ್ನಂ ಮೃಷ್ಟಂ ಬಹುತರಂ ಬುಧಃ ।
ಸರ್ವೇ ಬುಭುಜಿರೇ ವಿಪ್ರಾ ನಿರ್ವಿಶಂಕೇನ ಚೇತಸಾ ॥ ೧೦೦ ॥

ಗತೇ ಚ ದ್ವಾದಶೇ ವರ್ಷೇ ಕಲ್ಪಾಂತ ಇವ ಶಂಕರೀ ।
ಬಭೂವ ವೃಷ್ಟಿರ್ಮಹತೀ ಯಥಾಪೂರ್ವಮಭೂಜ್ಜಗತ್ ॥ ೧೦೧ ॥

ತತಃ ಸರ್ವೇ ಮುನಿವರಾಃ ಸಮಾಮಂತ್ರ್ಯ ಪರಸ್ಪರಮ್ ।
ಮಹರ್ಷಿಂ ಗೌತಮಂ ಪ್ರೋಚುರ್ಗಚ್ಛಾಮ ಇತಿ ವೇಗತಃ ॥ ೧೦೨ ॥

ನಿವಾರಯಾಮಾಸ ಚ ತಾನ್ ಕಂಚಿತ್ಕಾಲಂ ಯಥಾಸುಖಮ್ ।
ಉಷಿತ್ವಾ ಮದ್ಗೃಹೇऽವಶ್ಯಂ ಗಚ್ಛಧ್ವಮಿತಿ ಪಂಡಿತಾಃ ॥ ೧೦೩ ॥

---

೯೯. ಆಗ ಸಮಸ್ತ ಮಹರ್ಷಿಗಳು ಗುಂಪುಕೂಡಿ ಹಸಿವಿನಿಂದ ಪೀಡಿತರಾಗಿ ತಪೋನಿಧಿಯಾದ ಗೌತಮಮುನಿಯನ್ನು ಕುರಿತು ಪ್ರಾಣಧಾರಕವಾದ ಆಹಾರವನ್ನು ಬೇಡಿದರು.

೧೦೦. ಆಗ ಜ್ಞಾನಿಯಾದ ಆ ಗೌತಮಮುನಿಯು ಅವರಿಗೆ ಹೆಚ್ಚಾದ ಮೃಷ್ಟಾನ್ನವನ್ನು ದಾನಮಾಡಿದನು. ಆ ಎಲ್ಲ ಬ್ರಹ್ಮರ್ಷಿಗಳು ನಿಶ್ಶಂಕೆಯಾದ ಮನಸ್ಸಿನಿಂದ ಭೋಜನಮಾಡಿದರು.

೧೦೧. ಹಾಗೆ ಹನ್ನೆರಡು ಸಂವತ್ಸರಗಳು ಕಳೆಯಲು ಪ್ರಳಯಕಾಲದಲ್ಲಿ ಮಹಾವೃಷ್ಟಿಯು ಸಂಭವಿಸುವಂತೆ ಅದ್ಭುತವೂ ಸುಖಕರವೂ ಆದ ವೃಷ್ಟಿಯು ಸುರಿದು ಸಮಸ್ತ ಪ್ರಪಂಚವು ಪೂರ್ವದಂತೆ ಸ್ವಸ್ಥತೆಯನ್ನು ಹೊಂದಿತು.

೧೦೨. ಅನಂತರ ಸಮಸ್ತ ಮುನಿಶ್ರೇಷ್ಠರೂ ಅಲ್ಲಿಂದ ಬೇಗ ಹೋಗಬೇಕೆಂದು ಅನ್ಯೋನ್ಯವಾಗಿ ಆಲೋಚಿಸಿ ಗೌತಮಮಹರ್ಷಿಯನ್ನು ಕೇಳಿಕೊಂಡರು.

೧೦೩. ಆಗ ಗೌತಮಮುನಿಯು ಅವರನ್ನು ಕುರಿತು ಜ್ಞಾನಿಗಳೇ! ನನ್ನ ಮನೆಯಲ್ಲಿ ಕೆಲವು ಕಾಲ ಅವಶ್ಯವಾಗಿ ಸುಖವಾಗಿ ವಾಸಮಾಡಿ, ಮುಂದೆ ಇಷ್ಟಾನುಸಾರ ಹೋಗಿರಿ, ಹೀಗೆಂದು ನಿವಾರಿಸಿದನು.

ತತೋ ಮಾಯಾಮಯೀಂ ಸೃಷ್ಟ್ವಾ ಕೃಷ್ಣಾಂ ಗಾಂ ಸರ್ವ ಏವ ತೇ ।
ಸಮೀಪಂ ಪ್ರಾಪಯಾಮಾಸುರ್ಗೌತಮಸ್ಯ ಮಹಾತ್ಮನಃ ॥ ೧೦೪ ॥

ಸೋಽನುವೀಕ್ಷ್ಯ ಕೃಪಾವಿಷ್ಟಸ್ತಸ್ಯಾಃ ಸಂರಕ್ಷಣೋತ್ಸುಕಃ ।
ಗೋಷ್ಠೇ ತಾಂ ಬಂಧಯಾಮಾಸ ಸ್ಪೃಷ್ಟಮಾತ್ರಾ ಮಮಾರ ಸಾ॥೧೦೫॥

ಸ ಶೋಕೇನಾಭಿಸಂತಪ್ತಃ ಕಾರ್ಯಾಕಾರ್ಯಂ ಮಹಾಮುನಿಃ ।
ನ ಪಶ್ಯತಿ ಸ್ಮ ಸಹಸಾ ತಮೃಷಿಂ ಮುನಯೋಽಬ್ರುವನ್ ॥ ೧೦೬ ॥

ಗೋವಧ್ಯೇಯಂ ದ್ವಿಜಶ್ರೇಷ್ಠ ಯಾವತ್ತವ ಶರೀರಗಾ ।
ತಾವತ್ತೇಽನ್ನಂ ನ ಭೋಕ್ತವ್ಯಂ ಗಚ್ಛಾಮೋ ವಯಮೇವ ಹಿ ॥೧೦೭॥

ತೇನಾತೋಽನುಮತಾಃ ಸಂತೋ ದೇವದಾರುವನಂ ಶುಭಮ್ ।
ಜಗ್ಮುಃ ಪಾಪವಶಂ ನೀತ್ವಾ ತಪಶ್ಚರ್ತುಂ ಯಥಾ ಪುರಾ ॥ ೧೦೮ ॥

---

೧೦೪. ಆಗ ಆ ಮುನಿಜನರೆಲ್ಲರೂ ಒಂದು ಕೃಷ್ಣವರ್ಣದ ಗೋವನ್ನು ಮಾಯೆಯಿಂದ ಸೃಷ್ಟಿಸಿ ಆ ಮಹಾತ್ಮನಾದ ಗೌತಮಮುನಿಯ ಸಮೀಪಕ್ಕೆ ತಂದರು.

೧೦೫. ಆ ಗೌತಮಮುನಿಯು ಅದನ್ನು ನೋಡಿ ಕರುಣೆಯುಳ್ಳವನಾಗಿ ಆ ಗೋವನ್ನು ರಕ್ಷಿಸುವುದರಲ್ಲಿ ಕುತೂಹಲವುಳ್ಳವನಾಗಿ ಅದನ್ನು ಗೋಶಾಲೆಯಲ್ಲಿ ಕಟ್ಟಿಸಿದನು. ಆಗ ಆ ಹಸುವು ಮುಟ್ಟಿದ ಕೂಡಲೇ ಸತ್ತುಹೋಯಿತು.

೧೦೬. ಆಗ ಆ ಮಹಾಮುನಿಯು ಶೋಕದಿಂದ ಪೀಡಿತನಾಗಿ ಕೂಡಲೇ ಯಾವುದೊಂದು ಕಾರ್ಯಾಕಾರ್ಯಗಳನ್ನೂ ನೆನೆಸಲು ಶಕ್ತನಾಗಲಿಲ್ಲ. ಆಗ ಮುನಿಗಳು ಗೌತಮಮುನಿಗೆ ಹೀಗೆಂದು ಹೇಳಿದರು.

೧೦೭. ಬ್ರಾಹ್ಮಣಶ್ರೇಷ್ಠನೇ ! ಈ ಗೋಹತ್ಯೆಯು ಎಷ್ಟುಕಾಲದವರೆಗೆ ನಿನ್ನ ಶರೀರದಲ್ಲಿ ಅಂಟಿಕೊಂಡಿರುವುದೋ, ಅದುವರೆಗೆ ನಿನ್ನ ಅನ್ನವನ್ನು ನಾವು-ಭುಂಜಿಸಲಾಗದು. ಆದ್ದರಿಂದ ನಾವು ಇಲ್ಲಿಂದ ಹೊರಡುತ್ತೇವೆ.

೧೦೮. ಹೀಗೆ ಗೌತಮಮುನಿಯಿಂದ ಸಮ್ಮತಿಸಲ್ಪಟ್ಟ ಆ ಮಹರ್ಷಿಗಳು ಮಂಗಳವಾದ ದೇವದಾರುವನಕ್ಕೆ ಪಾಪಸಂಪರ್ಕವನ್ನುಂಟುಮಾಡಿ ಮೊದಲಿನಂತೆ ತಪಸ್ಸನ್ನು ಮಾಡಲು ಹೊರಟುಹೋದರು.

ಸ ತೇಷಾಂ ಮಾಯಯಾ ಜಾತಾಂ ಗೋವಧ್ಯಾಂ ಗೌತಮೋ ಮುನಿಃ ।
ಕೇನಾಪಿ ಹೇತುನಾ ಜ್ಞಾತ್ವಾ ಶಶಾಪಾತೀವ ಕೋಪತಃ ॥ ೧೦೯ ॥

ಭವಿಷ್ಯಂತಿ ತ್ರಯೀಬಾಹ್ಯಾ ಮಹಾಪಾತಕಿಭಿಃ ಸಮಾಃ ।
ಬಭೂವುಸ್ತೇ ತಥಾ ಶಾಪಾಜ್ಜಾಯಮಾನಾಃ ಪುನಃ ಪುನಃ ॥ ೧೧೦ ॥

ಸರ್ವೇ ಸಂಪ್ರಾಪ್ಯ ದೇವೇಶಂ ಶಂಕರಂ ವಿಷ್ಣುಮವ್ಯಯಮ್ ।
ಅಸ್ತುವನ್ ಲೌಕಿಕೈಃ ಸ್ತೋತ್ರೈರುಚ್ಛಿಷ್ಟಾ ಇವ ಸರ್ವಗೌ ॥ ೧೧೧ ॥

ದೇವದೇವೌ ಮಹಾದೇವೌ ಭಕ್ತಾನಾಮಾರ್ತಿನಾಶಿನೌ ।
ಕಾಮವೃತ್ತ್ಯಾ ಮಹಾಯೋಗೌ ಪಾಪಾನ್ನಸ್ತ್ರಾತುಮರ್ಹತಃ ॥ ೧೧೨ ॥

ತದಾ ಪಾರ್ಶ್ವಸ್ಥಿತಂ ವಿಷ್ಣುಂ ಸಂಪ್ರೇಕ್ಷ್ಯ ವೃಷಭಧ್ವಜಃ ।
ಕಿಮೇತೇಷಾಂ ಭವೇತ್ಕಾರ್ಯಂ ಪ್ರಾಹ ಪುಣ್ಯೈಷಿಣಾಮಿತಿ ॥ ೧೧೩ ॥

---

೧೦೯. ಆ ಗೌತಮಮುನಿಯು ಯಾವುದೋ ಒಂದು ಕಾರಣದಿಂದ ಆ ಗೋಹತ್ಯೆಯು ಮಾಯೆಯಿಂದ ಸಂಭವಿಸಿದ್ದೆಂದು ತಿಳಿದು ಬಹಳ ಕೋಪದಿಂದ ಅವರನ್ನು ಶಪಿಸಿದನು.

೧೧೦. ವಿಪ್ರರೇ! ನೀವೆಲ್ಲರೂ ವೇದಾಭ್ಯಾಸಬಾಹ್ಯರಾಗಿ ಮಹಾ ಪಾತಕಿಗಳಿಗೆ ಸಮಾನರಾಗುವಿರಿ, ಹೀಗೆಂಬ ಶಾಪಗ್ರಸ್ತರಾಗಿ ಮತ್ತೆ ಜನಿಸಿದರು.

೧೧೧. ಅವರೆಲ್ಲರೂ ದೇವತಾಪ್ರಭುವಾದ ಶಂಕರನನ್ನು ಮತ್ತು ಶಾಶ್ವತನಾದ ವಿಷ್ಣುವನ್ನು ಹೊಂದಿ ಉಚ್ಛಿಷ್ಟದಂತಿರುವ ಲೌಕಿಕಸ್ತೋತ್ರವಾಕ್ಯಗಳಿಂದ ಸರ್ವವ್ಯಾಪಕರಾದ ಹರಿ-ಹರರನ್ನು ಸ್ತೋತ್ರಮಾಡಿದರು.

೧೧೨. ದೇವತೆಗಳಗೆಲ್ಲ ದೇವರೆ! ದೇವೋತ್ತಮರೇ! ಭಕ್ತರ ಸಂಕಟವನ್ನು ನಾಶಮಾಡುವವರೇ! ಮತ್ತು ಸ್ವೇಚ್ಛಾವಶದಿಂದ ಮಹಾ ಯೋಗಾಭ್ಯಾಸನಿರತರೇ! ನಮ್ಮನ್ನು ಈ ಪಾಪದಿಂದ ರಕ್ಷಿಸಲು ಅರ್ಹರಾಗಿದ್ದೀರಿ.

೧೧೩. ಆಗ ವೃಷಭಧ್ವಜದಿಂದ ಕೂಡಿದ ಪರಮೇಶ್ವರನು ಪಕ್ಕದಲ್ಲಿರುವ ಮಹಾವಿಷ್ಣುವನ್ನು ನೋಡಿ ಪುಣ್ಯವನ್ನು ಅಪೇಕ್ಷಿಸುವ ಈ ವಿಪ್ರರಿಗೆ ಕರ್ತವ್ಯವಾದ ಸುಕೃತವು ಏನಿದೆ? ಎಂದು ಕೇಳಿದನು.

ತತಃ ಸ ಭಗವಾನ್ ವಿಷ್ಣುಃ ಶರಣ್ಯೋ ಭಕ್ತವತ್ಸಲಃ ।
ಗೋಪತಿಂ ಪ್ರಾಹ ವಿಪ್ರೇಂದ್ರಾನಾಲೋಕ್ಯ ಪ್ರಣತಾನ್ ಹರಿಃ ॥ ೧೧೪ ॥

ನ ವೇದಬಾಹ್ಯೇ ಪುರುಷೇ ಪುಣ್ಯಲೇಶೋಽಪಿ ಶಂಕರ ।
ಸಂಗಚ್ಛತೇ ಮಹಾದೇವ ಧರ್ಮೋ ವೇದಾದ್ವಿನಿರ್ಬಭೌ ॥ ೧೧೫ ॥

ತಥಾಪಿ ಭಕ್ತವಾತ್ಸಲ್ಯಾದ್ರಕ್ಷಿತವ್ಯಾ ಮಹೇಶ್ವರ ।
ಅಸ್ಮಾಭಿಃ ಸರ್ವ ಏವೈತೇ ಗಂತಾರೋ ನರಕಾನಪಿ ॥ ೧೧೬ ॥

ತಸ್ಮಾದ್ಧಿ ವೇದಬಾಹ್ಯಾನಾಂ ರಕ್ಷಣಾರ್ಥಾಯ ಪಾಪಿನಾಮ್ ।
ವಿಮೋಹನಾಯ ಶಾಸ್ತ್ರಾಣಿ ಕರಿಷ್ಯಾಮೋ ವೃಷಧ್ವಜ ॥ ೧೧೭ ॥

---

೧೧೪. ಆಗ ಭಕ್ತವತ್ಸಲನೂ, ಸರ್ವರಕ್ಷಕನೂ, ವ್ಯಾಪಕನೂ, ಷಡ್ಗುಣೈಶ್ವರ್ಯಸಂಪನ್ನನೂ ಆದ ಆ ಮಹಾವಿಷ್ಣುವು ನಮಸ್ಕಾರಮಾಡಿದ ಬ್ರಾಹ್ಮಣೋತ್ತಮರನ್ನು ನೋಡುತ್ತಾ ನಂದಿಗೆ ಒಡೆಯನಾದ ಈಶ್ವರನನ್ನು ಕುರಿತು ಹೇಳಿದನು.

೧೧೫. ಮಹಾದೇವನಾದ ಶಂಕರನೇ! ವೇದಬಾಹ್ಯನಾದ ಪುರುಷನಲ್ಲಿ ಪುಣ್ಯದ ಲವ ಮಾತ್ರವು ಕೂಡ ಅವಕಾಶಹೊಂದುವುದಿಲ್ಲ. ಧರ್ಮವೆಂಬುದು ವೇದದಮೂಲಕವಾಗಿ ಹುಟ್ಟಿ ಬಂದಿದೆ.

೧೧೬. ಮಹೇಶ್ವರನೇ! ಹಾಗಿದ್ದರೂ ನರಕಕ್ಕೆ ಹೋಗಿ ಬೀಳುವ ಈ ಎಲ್ಲ ಮುನಿಜನರೂ ಭಕ್ತರಲ್ಲಿರುವ ವಾತ್ಸಲ್ಯವಶದಿಂದ ನಮ್ಮಿಂದ ರಕ್ಷಿಸಲ್ಪಡಬೇಕಾಗಿರುವರು.

೧೧೭. ವೃಷಭಧ್ವಜವುಳ್ಳ ಮಹೇಶ್ವರನೇ! ಆ ಕಾರಣದಿಂದ ವೇದಬಾಹ್ಯರಾದ ಪಾಪಿಜನರನ್ನು ರಕ್ಷಿಸುವುದಕ್ಕೋಸ್ಕರಲೂ ಮತ್ತು ಅವರಿಗೆ ಮೋಹಾತಿರೇಕವುಂಟಾಗಲೋಸ್ಕರಲೂ ಅನೇಕ ಶಾಸ್ತ್ರಗಳನ್ನು ಮಾಡೋಣ.

ಏವಂ ಸಂಬೋಧಿತೋ ರುದ್ರೋ ಮಾಧವೇನ ಮುರಾರಿಣಾ ।
ಚಕಾರ ಮೋಹಶಾಸ್ತ್ರಾಣಿ ಕೇಶವೋಽಪಿ ಶಿವೇರಿತಃ ॥ ೧೧೮ ॥

ಕಾಪಾಲಂ ನಾಕುಲಂ ವಾಮಂ ಭೈರವಂ ಪೂರ್ವಪಶ್ಚಿಮಮ್ ।
ಪಾಂಚರಾತ್ರಂ ಪಾಶುಪತಂ ತಥಾನ್ಯಾನಿ ಸಹಸ್ರಶಃ ॥ ೧೧೯ ॥

ಸೃಷ್ಟ್ವಾ ತಾನಾಹ ನಿರ್ವೇದಾಃ ಕುರ್ವಾಣಾಃ ಶಾಸ್ತ್ರಚೋದಿತಮ್ ।
ಪತಂತೋ ನರಕೇ ಘೋರೇ ಬಹೂನ್ ಕಲ್ಪಾನ್ ಪುನಃ ಪುನಃ ॥೧೨೦॥

ಜಾಯಂತೋ ಮಾನುಷೇ ಲೋಕೇ ಕ್ಷೀಣಪಾಪಚಯಾಸ್ತತಃ ।
ಈಶ್ವರಾರಾಧನಬಲಾದ್ಗಚ್ಛಧ್ವಂ ಸುಕೃತಾಂ ಗತಿಮ್ ॥ ೧೨೧ ॥

---

೧೧೮. ಹೀಗೆಂದು ಮುರಾಸುರಸಂಹಾರಿಯಾದ ಮಾಧವನಿಂದ ಬೋಧಿಸಲ್ಪಟ್ಟ ರುದ್ರನೂ, ರುದ್ರನಿಂದ ಬೋಧಿಸಲ್ಪಟ್ಟ ಮಾಧವನೂ ಮೋಹನಶಾಸ್ತ್ರಗಳನ್ನು ಬರೆದರು.

೧೧೯. ಅವರು ಮಾಡಿದ ಮೋಹನಶಾಸ್ತ್ರಗಳಲ್ಲಿ ಕಾಪಾಲ, ನಾಕುಲ, ವಾಮ, ಭೈರವ, ಪೂರ್ವ-ಪಶ್ಚಿಮ ಪಾಂಚರಾತ್ರ, ಪಾಶುಪತ ಮತ್ತು ಇತರ ಸಹಸ್ರಾರು ಶಾಸ್ತ್ರಗಳು ಸೇರಿರುತ್ತವೆ.

೧೨೦. ಹೀಗೆ ಶಾಸ್ತ್ರಗಳನ್ನು ರಚಿಸಿ ಆ ಹರಿ-ಹರರು ಅವರನ್ನು ಕುರಿತು ಹೀಗೆಂದರು :—ವೇದಬಾಹ್ಯರೇ ! ನೀವು ಈ ಶಾಸ್ತ್ರವಿಹಿತವಾದ ಕರ್ಮವನ್ನು ಆಚರಿಸುತ್ತಾ ಅನೇಕ ಕಲ್ಪಗಳವರೆಗೆ ಮತ್ತೆ ಮತ್ತೆ ಘೋರ ನರಕದಲ್ಲಿ ಬೀಳುತ್ತಲಿರುವಿರಿ.

೧೨೧. ಹಾಗೆ ಪಾಪಪುಂಜವನ್ನು ಕಳೆದುಕೊಂಡು ಒಂದುವೇಳೆ ಮನುಷ್ಯಲೋಕದಲ್ಲಿ ಹುಟ್ಟಿದವರಾಗಿ ಈಶ್ವರಾರಾಧನೆಯ ಮಹಿಮೆಯಿಂದ ಸುಕೃತದ ಗತಿಯನ್ನು ಹೊಂದುವಿರಿ.

ವರ್ತಧ್ವಂ ಮತ್ಪ್ರಸಾದೇನ ನಾನ್ಯಥಾ ನಿಷ್ಕೃತಿರ್ಹಿ ವಃ ।
ಏವಮೀಶ್ವರವಿಷ್ಣುಭ್ಯಾಂ ಚೋದಿತಾಸ್ತೇ ಮಹರ್ಷಯಃ ॥ ೧೨೨ ॥

ಆದೇಶಂ ಪ್ರತ್ಯಪದ್ಯಂತ ಶಿವಸ್ಯಾಸುರವಿದ್ವಿಷಃ ।
ಚಕ್ರುಸ್ತೇಽನ್ಯಾನಿ ಶಾಸ್ತ್ರಾಣಿ ತತ್ರ ರತಾಃ ಪುನಃ ॥ ೧೨೩ ॥

ಶಿಷ್ಯಾನಧ್ಯಾಪಯಾಮಾಸುರ್ದರ್ಶಯಿತ್ವಾ ಫಲಾನಿ ಚ ।
ಮೋಹಾಪಸದನಂ ಲೋಕೇಮವತೀರ್ಯ ಮಹಿತಲೇ ॥ ೧೨೪ ॥

ಚಕಾರ ಶಂಕರೋ ಭಿಕ್ಷಾಂ ಹಿತಾಯೈಷಾಂ ದ್ವಿಜೈಃ ಸಹ ।
ಕಪಾಲಮಾಲಾಭರಣಃ ಪ್ರೇತಭಸ್ಮಾವಗುಂಠಿತಃ ॥ ೧೨೫ ॥

---

೧೨೨. ಹೀಗೆ ನೀವು ನಮ್ಮ ಅನುಗ್ರಹಕ್ಕೆ ಪಾತ್ರರಾಗಿರಿ. ನಿಮಗೆ ಬೇರೊಂದು ಪ್ರಾಯಶ್ಚಿತ್ತವಿಲ್ಲ. ಹೀಗೆಂದು ಆ ಮಹರ್ಷಿಗಳು ಈಶ್ವರ ಮತ್ತು ವಿಷ್ಣುವಿನಿಂದ ಪ್ರೇರೇಪಿಸಲ್ಪಟ್ಟರು.

೧೨೩. ಮತ್ತು ಅಸುರದ್ವೇಷಿಯಾದ ಶಂಕರನ ಆದೇಶವನ್ನು ಹೊಂದಿ ಆಯಾಯ ಮತದಲ್ಲಿ ನಿರತರಾಗಿ ಅನೇಕ ಅವೈದಿಕಶಾಸ್ತ್ರಗಳನ್ನು ರಚಿಸಿದರು.

೧೨೪. ಮತ್ತು ಆಯಾಯ ಮತಾಚರಣೆಯ ಫಲಗಳನ್ನು ತೋರಿಸುತ್ತಾ ಅನೇಕ ಶಿಷ್ಯರಿಗೆ ಆ ಶಾಸ್ತ್ರಗಳನ್ನು ಅಧ್ಯಯನಮಾಡಿಸಿದರು. ಆಗ ಶಂಕರನು ಅವರ ಮೋಹವನ್ನು ಹೋಗಲಾಡಿಸಲು ಈ ಲೋಕಕ್ಕೆ ಅವತರಿಸಿ ಬಂದನು.

೧೨೫ ಮತ್ತು ಕಪಾಲಗಳ ಮಾಲಿಕೆಯನ್ನು ಆಭರಣದಂತೆ ಧರಿಸಿ ಪ್ರೇತಗಳ ಚಿತಾಭಸ್ಮವನ್ನು ಲೇಪಿಸಿಕೊಂಡು ಶಂಕರನು ಈ ಬ್ರಾಹ್ಮಣರ ಹಿತಕ್ಕೋಸ್ಕರ ಇವರೊಡನೆ ಭಿಕ್ಷೆಯನ್ನು ಬೇಡಿದನು.

ವಿಮೋಹಯಂಲ್ಲೋಕಮಿಮಂ ಜಟಾಮಂಡಲಮಂಡಿತಃ ।
ನಿಕ್ಷಿಪ್ಯ ಪಾರ್ವತೀಂ ದೇವೀಂ ವಿಷ್ಣಾವಮಿತತೇಜಸಿ ॥ ೧೨೬ ॥

ನಿಯೋಜ್ಯ ಭಗವಾನ್ ರುದ್ರೋ ಭೈರವಂ ದುಷ್ಟನಿಗ್ರಹೇ ।
ದತ್ವಾ ನಾರಾಯಣೇ ದೇವ್ಯಾನಂದನಂ ಕುಲನಂದನಮ್ ॥ ೧೨೭ ॥

ಸಂಸ್ಥಾಪ್ಯ ತತ್ರ ಚ ಗಣಾನ್ ದೇವಾನಿಂದ್ರಪುರೋಗಮಾನ್ ।
ಪ್ರಸ್ಥಿತೇ ಚ ಮಹಾದೇವೇ ವಿಷ್ಣುರ್ವಿಶ್ವತನುಃ ಸ್ವಯಮ್ ॥ ೧೨೮ ॥

ಸ್ತ್ರೀರೂಪಧಾರೀ ನಿಯತಂ ಸೇವತೇ ಸ್ಮ ಮಹೇಶ್ವರೀಮ್ ।
ಬ್ರಹ್ಮಾ ಹುತಾಶನಃ ಶಕ್ರೋ ಯಮೋಽನ್ಯೇ ಸುರಪುಂಗವಾಃ ॥ ೧೨೯ ॥

---

೧೨೬. ಶಂಕರನು ಪಾರ್ವತೀದೇವಿಯನ್ನು ಅಪಾರವಾದ ಮಹಿಮೆಯುಳ್ಳ ಮಹಾವಿಷ್ಣುವಿನಲ್ಲಿ ಇರಿಸಿ ತಾನು ಜಟಾಮಂಡಲದಿಂದ ಭೂಷಿಸಲ್ಪಟ್ಟವನಾಗಿ ಈ ಲೋಕವನ್ನು ಮೋಹಗೊಳಿಸುತ್ತಾ ಭಿಕ್ಷೆಬೇಡಿದನು.

೧೨೭. ರುದ್ರನು ದುಷ್ಟರನ್ನು ನಿಗ್ರಹಿಸಲು ಭೈರವಮೂರ್ತಿಯನ್ನು ಆಜ್ಞಾಪಿಸಿ ಕುಲವನ್ನು ಸಂತೋಷಪಡಿಸುವ ಪುತ್ರನನ್ನೂ, ಪಾರ್ವತೀದೇವಿಯನ್ನೂ ಶ್ರೀಮನ್ನಾರಾಯಣನ ಅಧೀನದಲ್ಲಿಟ್ಟು ಭಿಕ್ಷೆಗೆ ತಿರುಗಿದನು.

೧೨೮. ಮತ್ತು ಇಂದ್ರನೇ ಮುಂತಾದ ದೇವತೆಗಳನ್ನೂ, ಪ್ರಮಥಗಣಗಳನ್ನೂ ಮಹಾವಿಷ್ಣುವಿನ ಅಧೀನದಲ್ಲಿರಿಸಿ ಆ ದೇವೋತ್ತಮನಾದ ಶಂಕರನು ಹೊರಕ್ಕೆ ಹೊರಡಲು ವಿಶ್ವರೂಪಿಯಾದ ಮಹಾವಿಷ್ಣುವು ಅವರನ್ನು ಪಾಲಿಸಿದನು.

೧೨೯. ಆಗ ವಿಷ್ಣುವು ಸ್ತ್ರೀರೂಪವನ್ನು ಧರಿಸಿದವನಾಗಿ ಮಹೇಶ್ವರಿಯಾದ ಪಾರ್ವತೀದೇವಿಯನ್ನು ತಪ್ಪದೆ ಸೇವಿಸಿದನು. ಹಾಗೆ ಬ್ರಹ್ಮ-ಅಗ್ನಿ-ಇಂದ್ರ-ಯಮ ಇನ್ನೂ ಅನೇಕ ಶ್ರೇಷ್ಠದೇವತೆಗಳು ಮಹಾದೇವಿಯನ್ನು ಸೇವಿಸಿದರು.

ಸಿಷೇವಿರೇ ಮಹಾದೇವೀಂ ಸ್ತ್ರೀರೂಪಂ ಶೋಭನಂ ಗತಾಃ ।
ನಂದೀಶ್ವರಶ್ಚ ಭಗವಾನ್ ಶಂಭೋರತ್ಯಂತವಲ್ಲಭಃ ॥ ೧೩೦ ॥

ದ್ವಾರದೇಶೇ ಗಣಾಧ್ಯಕ್ಷೋ ಯಥಾಪೂರ್ವಮತಿಷ್ಠತ ।
ಏತಸ್ಮಿನ್ನಂತರೇ ದೈತ್ಯೋ ಹ್ಯಂಧಕೋ ನಾಮ ದುರ್ಮತಿಃ ॥ ೧೩೧ ॥

ಆಹರ್ತುಕಾಮೋ ಗಿರಿಜಾಮಾಜಗಾಮಾಥ ಮಂದರಮ್ ।
ಸಂಪ್ರಾಪ್ತಮಂಧಕಂ ದೃಷ್ಟ್ವಾ ಶಂಕರಃ ಕಾಲಭೈರವಃ ॥ ೧೩೨ ॥

ನ್ಯಷೇಧಯದಮೇಯಾತ್ಮಾ ಕಾಲರೂಪಧರೋ ಹರಃ ।
ತಯೋಃ ಸಮಭವದ್ಯುದ್ಧಂ ಸುಘೋರಂ ರೋಮಹರ್ಷಣಮ್ ॥ ೧೩೩ ॥

---

೧೩೦. ಸಮಸ್ತ ದೇವತೆಗಳೂ ಸುಂದರವಾದ ಸ್ತ್ರೀರೂಪವನ್ನು ಧರಿಸಿದವರಾಗಿ ಮಹಾದೇವಿಯನ್ನು ಸೇವಿಸಿದರು. ಆಗ ಪರಮಶಿವನಿಗೆ ಅತ್ಯಂತ ಪ್ರಿಯನಾದ, ಪೂಜ್ಯನಾದ ನಂದಿಕೇಶ್ವರನು ತನ್ನ ಕೈಂಕರ್ಯವನ್ನು ಸಾಧಿಸಿದನು.

೧೩೧. ಆ ನಂದೀಶ್ವರನು ಸಮಸ್ತ ಜನಗಣಗಳಿಗೆ ಅಧ್ಯಕ್ಷನಾಗಿ ಮೊದಲಿನಂತೆ ದ್ವಾರಭೂಮಿಯಲ್ಲಿ ನಿಂತಿದ್ದನು. ಈ ಸಮಯದಲ್ಲಿ ಅಂಧಕಾಸುರನೆಂಬ ನಾಮಾಂಕಿತನಾದ, ಅವಿವೇಕಿಯಾದ ದೈತ್ಯನು ಪಾರ್ವತೀದೇವಿಯನ್ನು ಮೋಹಿಸಿದನು.

೧೩೨. ಮತ್ತು ಪಾರ್ವತೀದೇವಿಯನ್ನು ಅಪಹರಿಸುವ ಇಷ್ಟವುಳ್ಳವನಾಗಿ ಅಂಧಕಾಸುರನು ಮಂದರಪರ್ವತಕ್ಕೆ ಬಂದನು. ಆಗ ಅಂತಕಾಂತಕನಾದ ಶಂಕರನು ಅಂಧಕಾಸುರನು ಬಂದಿರುವುದನ್ನು ನೋಡಿದನು.

೧೩೩. ಮತ್ತು ಗಣನಾತೀತವಾದ ವೈಭವವುಳ್ಳ ಈಶ್ವರನು ಮೃತ್ಯುರೂಪವನ್ನು ಧರಿಸಿ ಅಸುರನನ್ನು ತಡೆಗಟ್ಟಿದನು. ಆಗ ಅವರಿಬ್ಬರಿಗೆ ರೋಮಾಂಚಜನಕವಾದ ಘೋರಸಂಗವು ಪ್ರಾಪ್ತವಾಯಿತು.

ಶೂಲೇನೋರಸಿ ತಂ ದೈತ್ಯಮಾಜಘಾನ ವೃಷಧ್ವಜಃ ।
ತತಃ ಸಹಸ್ರಶೋ ದೈತ್ಯಾಃ ಸಹಸ್ರಾಂಧಕಸಂಜ್ಞಿತಾಃ ॥ ೧೩೪ ॥

ನಂದೀಶ್ವರಾದಯೋ ದೈತ್ಯೈರಂಧಕೈರಭಿನಿರ್ಜಿತಾಃ ।
ಘಂಟಾಕರ್ಣೋ ಮೇಘನಾಧಶ್ಚಂಡೇಶಶ್ಚಂಡತಾಪನಃ ॥ ೧೩೫ ॥

ವಿನಾಯಕೋ ಮೇಘವಾಹಃ ಸೋಮನಂದೀ ಚ ವೈದ್ಯುತಃ ।
ಸರ್ವೇಽಂಧಕಂ ದೈತ್ಯವರಂ ಸಂಪ್ರಾಪ್ಯಾತಿಬಲಾನ್ವಿತಾಃ ॥ ೧೩೬ ॥

ಯುಯುಧುಃ ಶೂಲಶಕ್ತ್ಯೃಷ್ಟಿಗಿರಿಕೂಟಪರಶ್ವಥೈಃ ।
ಭ್ರಾಮಯಿತ್ವಾ ತು ಹಸ್ತಾಭ್ಯಾಂ ಗೃಹೀತ್ವಾ ಚರಣದ್ವಯೇ ॥ ೧೩೭ ॥

---

೧೩೪. ಆಗ ವೃಷಭಧ್ವಜದಿಂದ ಅಂಕಿತನಾದ ಶಿವನು ಆ ದೈತ್ಯರ ಎದೆಯಲ್ಲಿ ತ್ರಿಶೂಲದಿಂದ ಹೊಡೆದನು. ಆಗ ಅಂಧಕಾಸುರನಿಂದ ಸಂಹರಿಸಲ್ಪಟ್ಟ ಅಂಧಕ ಎಂಬ ಸಂಜ್ಞಾಂಕಿತರಾದ ಸಾವಿರಾರು ಮಂದಿ ಅಸುರರು ಸಂಭವಿಸಿದರು.

೧೩೫. ಆ ಅಂಧಕಾಸುರರಿಂದ ಘಂಟಾಕರ್ಣ – ಮೇಘನಾದ – ಚಂಡೇಶ– ಚಂಡತಾಪನ ಮತ್ತು ನಂದೀಶ್ವರ ಮುಂತಾದ ಮಹಾ ಗಣಗಳು ಭಯಗೊಳಿಸಲ್ಪಟ್ಟರು.

೧೩೬. ಮತ್ತು ವಿನಾಯಕ - ಮೇಘವಾಹ - ಸೋಮ - ನಂದೀ - ವೈದ್ಯುತ ಮುಂತಾದ ಅತ್ಯಂತ ವಿಕ್ರಮದಿಂದ ಕೂಡಿದ ಸಮಸ್ತ ಪ್ರಮಥಗಣಗಳು ಯುದ್ಧ ಮಾಡಲು ದೈತ್ಯೇಂದ್ರನಾದ ಅಂಧಕಾಸುರನ ಬಳಿಗೆ ಬಂದುವು.

೧೩೭. ಮತ್ತು ಶೂಲ – ಶಕ್ತಿ – ಋಷ್ಟಿ – ಪರ್ವತಶಿಖರ ಮತ್ತು ಪರಶು ಮುಂತಾದ ವಿವಿಧಾಯುಧಗಳಿಂದ ಯುದ್ಧ ಮಾಡಿದರು. ಆದರೆ ದೈತ್ಯೇಂದ್ರನು ಆ ಗಣಗಳನ್ನು ತನ್ನ ಕೈಗಳಿಂದ ಕಾಲಿನಲ್ಲಿ ಹಿಡಿದೆತ್ತಿ ಸುತ್ತಿಸಿದನು.

ದೈತ್ಯೇಂದ್ರೇಣಾತಿಬಲಿನಾ ಕ್ಷಿಪ್ತಾಸ್ತೇ ಶತಯೋಜನಮ್ ।
ತತೋಽಂಧಕನಿಸೃಷ್ಟಾ ಯೇ ಶತಶೋಽಥ ಸಹಸ್ರಶಃ ॥ ೧೩೮ ॥

ಕಾಲಸೂರ್ಯಪ್ರತೀಕಾಶಾ ಭೈರವಂ ಚಾಭಿದುದ್ರುವುಃ ।
ಹಾಹೇತಿ ಶಬ್ದಃ ಸುಮಹಾನ್ ಬಭೂವಾತಿಭಯಂಕರಃ ॥ ೧೩೯ ॥

ಯುಯುಧೇ ಭೈರವೋ ದೇವಃ ಶೂಲಮಾದಾಯ ಭೈರವಮ್ ।
ದೃಷ್ಟ್ವಾಂಧಕಾನಾಂ ಸುಬಲಂ ದುರ್ಜಯಂ ನಿರ್ಜಿತೋ ಹರಃ ॥ ೧೪೦ ॥

ಜಗಾಮ ಶರಣಂ ದೇವಂ ವಾಸುದೇವಮಜಂ ವಿಭುಮ್ ।
ಸೋಽಸೃಜದ್ಭಗವಾನ್ ವಿಷ್ಣುರ್ದೇವೀನಾಂ ಶತಮುತ್ತಮಮ್ ॥೧೪೧॥

---

೧೩೮. ಹಾಗು ಅತಿ ಬಲಿಷ್ಠನಾದ ದೈತ್ಯೇಂದ್ರನಿಂದ ಆ ಗಣಗಳು ನೂರಾರು ಯೋಜನದೂರ ಎಸೆಯಲ್ಪಟ್ಟರು. ಹೀಗೆ ಅಂಧಕಾಸುರನಿಂದ ಎಸೆಯಲ್ಪಟ್ಟ ಶತ-ಸಹಸ್ರ ಮುಂತಾದ ಅಧಿಕ ಸಂಖ್ಯೆಯ ಗಣಗಳು ಪಲಾಯನಮಾಡಿದರು

೧೩೯. ಕಲ್ಪಾಂತಕಾಲದ ಸೂರ್ಯನಂತೊಪ್ಪುವ ಆ ಗಣಗಳು ಭೈರವ ಮೂರ್ತಿಯ ಬಳಿಗೆ ಧಾವಿಸಿದರು. ಆಗ ಅತ್ಯಂತ ಭಯಂಕರವಾದ, ಹಾಹಾ ಎಂಬ ಘೋರ ಶಬ್ದವು ಉಂಟಾಯಿತು.

೧೪೦. ಆಗ ಆ ಭೈರವಸ್ವಾಮಿಯು ಭಯಂಕರವಾದ ತ್ರಿಶೂಲಾಯುಧವನ್ನು ಧರಿಸಿ ಯುದ್ಧಮಾಡಿದನು. ಆದರೆ ಜಯಿಸಲಾಗದ ಆ ಅಂಧಕಾಸುರ ಸೈನ್ಯವನ್ನು ನೋಡಿ ಮಹೇಶ್ವರನು ಅಪಜಯಹೊಂದಿದನು.

೧೪೧. ಹೀಗೆ ಅಪಜಯವನ್ನು ಹೊಂದಿದ ಶಿವನು ನಿರ್ವಿಕಾರನೂ, ವ್ಯಾಪಕನೂ ಆದ ವಾಸುದೇವಮೂರ್ತಿಯನ್ನು ಶರಣುಹೊಂದಿದನು. ಆಗ ಭಗವಂತನಾದ ಆ ವಾಸುದೇವನು ನೂರಾರು ಮಂದಿ ಶ್ರೇಷ್ಠರಾದ ದೇವೀಮೂರ್ತಿಗಳನ್ನು ಸೃಷ್ಟಿಸಿದನು.

ದೇವೀಪಾರ್ಶ್ವಸ್ಥಿತೋ ದೇವೋ ವಿನಾಶಾಯ ಸುರದ್ವಿಷಾಮ್ ।
ತದಾಂಧಕಸಹಸ್ರಂ ತು ದೇವೀಭಿರ್ಯಮಸಾದನಮ್ ॥ ೧೪೨ ॥

ನೀತಂ ಕೇಶವಮಾಹಾತ್ಮ್ಯಲ್ಲೀಲಯೈವ ರಣಾಜಿರೇ ।
ದೃಷ್ಟ್ವಾ ಪರಾಹತಂ ಸೈನ್ಯಮಂಧಕೋಽಪಿ ಮಹಾಸುರಃ ॥ ೧೪೩ ॥

ಪರಾಙ್ಮುಖೋ ರಣಾತ್ತಸ್ಮಾತ್ ಪಲಾಯತ ಮಹಾಜವಃ ।
ತತಃ ಕ್ರೀಡಾಂ ಮಹಾದೇವಃ ಕೃತ್ವಾ ದ್ವಾದಶವಾರ್ಷಿಕೀಮ್॥ ೧೪೪ ॥

ಹಿತಾಯ ಭಕ್ತಲೋಕಾನಾಮಾಜಗಾಮಾಥ ಮಂದರಮ್ ।
ಸಂಪ್ರಾಪ್ತಮೀಶ್ವರಂ ಜ್ಞಾತ್ವಾ ಸರ್ವ ಏವ ಗಣೇಶ್ವರಾಃ ॥ ೧೪೫ ॥

ಸಮಾಗಮ್ಯೋಪತಿಷ್ಠಂತ ಭಾನುಮಂತಮಿವ ದ್ವಿಜಾಃ ।
ಪ್ರವಿಶ್ಯ ಭವನಂ ಪುಣ್ಯಮಯುಕ್ತಾನಾಂ ದುರಾಸದಮ್ ॥ ೧೪೬ ॥

---

೧೪೨. ಮಹಾವಿಷ್ಣುವು ದೇವಕಂಟಕರಾದ ಅಸುರರ ನಿಗ್ರಹಕ್ಕೆ ಮಹಾದೇವಿಯ ಪಕ್ಕದಲ್ಲಿ ಸೃಷ್ಟಿಸಲ್ಪಟ್ಟ ನೂರಾರು ಮಂದಿ ದೇವಿಯರಿಂದ ಅನೇಕ ಅಂಧಕಾಸುರ ಸೈನ್ಯವು ಯಮಲೋಕಕ್ಕೆ ಕಳುಹಿಸಲ್ಪಟ್ಟಿತು.

೧೪೩. ಹೀಗೆ ರಣರಂಗದಲ್ಲಿ ಕೇಶವನ ಮಹಿಮೆಯಿಂದ ಲೀಲೆಯಿಂದಲೇ ತನ್ನ ಸೈನ್ಯವು ಭಂಗಹೊಂದಿರುವುದನ್ನು ಅಸುರಶ್ರೇಷ್ಠನಾದ ಅಂಧಕನು ನೋಡಿದನು.

೧೪೪. ಮತ್ತು ತಾನು ಪರಾಙ್ಮುಖನಾಗಿ ಮಹಾವೇಗದಿಂದ ಆ ರಣರಂಗದಿಂದ ಹಿಂದಕ್ಕೆ ಓಡಿಹೋದನು. ಹೀಗೆ ಮಹಾದೇವನು ಹನ್ನೆರಡು ವರ್ಷಗಳ ಪರ್ಯಂತ ಒಂದು ಮಹಾಕ್ರೀಡೆಯನ್ನು ನಟಿಸಿದನು.

೧೪೫. ಸಮಸ್ತ ಭಕ್ತ ಜನರ ಹಿತಕ್ಕೆ ಈ ಲೀಲೆಯನ್ನು ತೋರಿಸಿ ಪರಮೇಶ್ವರನು ಮಂದರಪರ್ವತಕ್ಕೆ ಬಂದನು. ಹೀಗೆ ಈಶ್ವರನು ಅಲ್ಲಿಗೆ ಬಂದಿರುವುದನ್ನು ಅಲ್ಲಿದ್ದ ಸಮಸ್ತ ಗಣಾಧಿಪತಿಗಳು ತಿಳಿದರು.

೧೪೬. ಮತ್ತು ದ್ವಿಜರು ಸೂರ್ಯನನ್ನು ಉಪಸ್ಥಾನಮಾಡುವಂತೆ ಶಂಕರನ ಬಳಿಗೆ ಬಂದು ಸೇವಿಸಿದರು. ಶಂಕರನು ಯೋಗಿಗಳಲ್ಲದವರಿಗೆ ಲಭಿಸಲು ಅಶಕ್ಯವಾದ, ಪವಿತ್ರವಾದ ತನ್ನ ಆಲಯವನ್ನು ಪ್ರವೇಶಿಸಿದನು.

ದದರ್ಶ ನಂದಿನಂ ದೇವಂ ಭೈರವಂ ಕೇಶವಂ ಶಿವಃ ।
ಪ್ರಣಾಮಪ್ರವಣಂ ದೇವಂ ಸೋऽನುಗೃಹ್ಯಾಥ ನಂದಿನಮ್ ॥ ೧೪೭ ॥

ಪ್ರೀತ್ಯೈನಂ ಪೂರ್ವಮೀಶಾನಃ ಕೇಶವಂ ಪರಿಷಸ್ವಜೇ ।
ದೃಷ್ಟ್ವಾ ದೇವೋ ಮಹಾದೇವೀಂ ಪ್ರೀತಿವಿಸ್ಫಾರಿತೇಕ್ಷಣಾಮ್ ॥೧೪೮॥

ಪ್ರಣತಃ ಶಿರಸಾ ತಸ್ಯಾಃ ಪಾದಯೋರೀಶ್ವರಸ್ಯ ಚ ।
ನ್ಯವೇದಯಜ್ಜಯಂ ತಸ್ಮೈ ಶಂಕರಾಯಾಥ ಶಂಕರಃ ॥ ೧೪೯ ॥

ಭೈರವೋ ವಿಷ್ಣುಮಾಹಾತ್ಮ್ಯಂ ಪ್ರತೀತಃ ಪಾರ್ಶ್ವಗೋऽಭವತ್ ।
ಶ್ರುತ್ವಾ ತಂ ವಿಜಯಂ ಶಂಭುರ್ವಿಕ್ರಮಂ ಕೇಶವಸ್ಯ ಚ ॥ ೧೫೦ ॥

---

೧೪೭. ಮತ್ತು ಅಲ್ಲಿ ಶಿವನು ನಂದಿಕೇಶ್ವರನನ್ನೂ, ಭೈರವಮೂರ್ತಿಯನ್ನೂ, ವಿಷ್ಣುವನ್ನೂ ನೋಡಿದನು. ಮತ್ತು ತನ್ನನ್ನು ನಮಸ್ಕರಿಸುವುದರಲ್ಲಿ ತತ್ಪರನಾದ ಭಕ್ತನಾದ ನಂದಿಕೇಶ್ವರನನ್ನು ಅನುಗ್ರಹಿಸದನು.

೧೪೮. ಆಗ ಸರ್ವೇಶ್ವರನು ಮಹಾವಿಷ್ಣುವನ್ನು ಪ್ರೀತಿಯಿಂದ ಮೊದಲು ಆಲಿಂಗಿಸಿಕೊಂಡನು. ತರುವಾಯ ಪ್ರೇಮದಿಂದ ಅರಳಿದ ನೇತ್ರವುಳ್ಳ ಮಹಾದೇವಿಯನ್ನು ಸಂದರ್ಶಿಸಿದನು.

೧೪೯. ಮತ್ತು ಭೈರವಮೂರ್ತಿಯು ಪಾರ್ವತೀ ಮತ್ತು ಪರಮೇಶ್ವರರ ಪಾದಗಳನ್ನು ಶಿರಸ್ಸಿನಿಂದ ವಂದಿಸಿದವನಾಗಿ ಶಂಕರನಿಗೆ ತಾನು ಗಳಿಸಿದ ಅಸುರ ವಿಜಯವನ್ನು ವಿಜ್ಞಾಪಿಸಿಕೊಂಡನು.

೧೫೦. ಹೀಗೆ ಭೈರವಮೂರ್ತಿಯಾದ ಹರನು ವಿಷ್ಣುವಿನ ಮಾಹಾತ್ಮ್ಯೆಯನ್ನು ನಂಬಿದವನಾಗಿ ಪಾರ್ಶ್ವದಲ್ಲಿ ಬಂದು ನಿಂತನು. ಆಗ ಶಂಭುವು ಆ ಅಸುರ ವಿಜಯವನ್ನೂ ಮಹಾವಿಷ್ಣುವಿನ ವಿಕ್ರಮವನ್ನೂ ಶ್ರವಣಮಾಡಿದನು.

ಸಮಾಸ್ತೇ ಭಗವಾನೀಶೋ ದೇವ್ಯಾ ಸಹ ವರಾಸನೇ ।
ತತೋ ದೇವಗಣಾಃ ಸರ್ವೇ ಮರೀಚಿಪ್ರಮುಖಾ ದ್ವಿಜಾಃ　॥ ೧೫೧ ॥

ಆಜಗ್ಮುರ್ಮಂದರಂ ದ್ರಷ್ಟುಂ ದೇವದೇವಂ ತ್ರಿಲೋಚನಮ್ ।
ಯೇನ ತದ್ನಿಜಿತಂ ಪೂರ್ವಂ ದೇವೀನಾಂ ಶತಮುತ್ತಮಮ್　॥ ೧೫೨ ॥

ಸಮಾಗತಂ ದೈತ್ಯಸೈನ್ಯಮೀಶದರ್ಶನಕಾಂಕ್ಷಯಾ ।
ದೃಷ್ಟ್ವಾ ವರಾಸನಾಸೀನಂ ದೇವ್ಯಾ ಚಂದ್ರವಿಭೂಷಣಮ್　॥ ೧೫೩ ॥

ಪ್ರಣೇಮುರಾದರಾದ್ದೇವ್ಯೋ ಗಾಯಂತಿ ಸ್ಮಾತಿಲಾಲಸಾಃ ।
ಪ್ರಣೇಮುರ್ಗಿರಿಜಾಂ ದೇವೀಂ ವಾಮಪಾರ್ಶ್ವೇ ಪಿನಾಕಿನಃ　॥ ೧೫೪ ॥

---

೧೫೧. ಮತ್ತು ಭಗವಂತನಾದ ಸರ್ವೇಶ್ವರನು ಪಾರ್ವತೀದೇವಿಯೊಡನೆ ಶ್ರೇಷ್ಠವಾದ ಆಸನದಲ್ಲಿ ಕುಳಿತನು. ಆಗ ಸಮಸ್ತ ದೇವವರ್ಗವು ಮತ್ತು ಮರೀಚಿ ಮುಂತಾದ ಬ್ರಾಹ್ಮಣೋತ್ತಮರು ಪರಮೇಶ್ವರನ ದರ್ಶನವನ್ನು ಬಯಸಿದರು.

೧೫೨. ಅವರೆಲ್ಲರೂ ಮೂರು ನೇತ್ರಗಳಿಂದ ಶೋಭಿಸುವ, ದೇವದೇವನಾದ ಶಿವನನ್ನು ನೋಡಲು ಮಂದರಪರ್ವತಕ್ಕೆ ಬಂದರು. ಹಿಂದೆ ಅಸುರರನ್ನು ನಿಗ್ರಹಿಸಲು ನೂರಾರು ಮಂದಿ ದೇವೀವರ್ಗವು ಸೃಷ್ಟಿಸಲ್ಪಟ್ಟಿತ್ತು.

೧೫೩. ಆ ದೈತ್ಯಸೈನ್ಯವನ್ನು ಸಂಹರಿಸಿ ಈಶ್ವರನ ದರ್ಶನವನ್ನು ಪಡೆಯ ಬೇಕೆಂಬ ಆಕಾಂಕ್ಷೆಯಿಂದ ಬಂದಿದ್ದ ಆ ದೇವಿಯರ ಗುಂಪು ಪಾರ್ವತೀದೇವಿಯ ಯೊಡನೆ ಉತ್ತಮಾಸನದಲ್ಲಿ ಕುಳಿತಿರುವ, ಶಿರದಲ್ಲಿ ಚಂದ್ರಕಲೆಯನ್ನು ಧರಿಸಿರುವ ಈಶ್ವರನನ್ನು ಸಂದರ್ಶಿಸಿತು.

೧೫೪. ಮತ್ತು ಆ ದೇವಿಯರು ಅತ್ಯಂತ ಲಾಲಸೆಯುಳ್ಳವರಾಗಿ ಈಶ್ವರನನ್ನು ನಮಸ್ಕರಿಸಿ ಹಾಗೆ ಪಿನಾಕಾಯುಧವನ್ನು ಧರಿಸಿದ ಶಿವನ ವಾಮಪಾರ್ಶ್ವದಲ್ಲಿ ಕುಳಿತಿದ್ದ ಗಿರಿಜಾದೇವಿಯನ್ನು ಗಾನಮಾಡುತ್ತಾ ನಮಸ್ಕರಿಸಿದರು.

ದೇವಾಸನಗತಾಂ ದೇವೀಂ ನಾರಾಯಣಮನೋಮಯೀಮ್ ।
ದೃಷ್ಟ್ವಾ ಸಿಂಹಾಸನಾಸೀನಂ ದೇವ್ಯೋ ನಾರಾಯಣಂ ತಥಾ ॥ ೧೫೫ ॥

ಪ್ರಣಮ್ಯ ದೇವಮೀಶಾನಾಂ ಪೃಷ್ಟವತ್ಯೋ ವರಾಂಗನಾಃ ।

ಕನ್ಯಾ ಊಚುಃ :—

ಕಸ್ತ್ವಂ ವಿಭ್ರಾಜಸೇ ಕಾನ್ತ್ಯಾ ಕೇಯಂ ಬಾಲಾ ರವಿಪ್ರಭಾ ॥ ೧೫೬ ॥

ಕೋಽನ್ವಯಂ ಭಾತಿ ವಪುಷಾ ಪಂಕಜಾಯತಲೋಚನಃ ।
ನಿಶಮ್ಯ ತಾಸಾಂ ವಚನಂ ವೃಷೇಂದ್ರವರವಾಹನಃ ॥ ೧೫೭ ॥

ವ್ಯಾಜಹಾರ ಮಹಾಯೋಗೀ ಭೂತಾಧಿಪತಿರವ್ಯಯಃ ।
ಅಯಂ ನಾರಾಯಣೋ ಗೌರೀ ಜಗನ್ಮಾತಾ ಸನಾತನಃ ॥ ೧೫೮ ॥

---

೧೫೫. ನಾರಾಯಣನ ಮನೋಮಯಸ್ವರೂಪಳೂ, ಶಿವನ ಆಸನದಲ್ಲಿ ಕುಳಿತಿರುವವಳೂ ಆದ ದೇವಿಯನ್ನೂ, ಸಿಂಹಾಸನದಲ್ಲಿ ಕುಳಿತಿದ್ದ ನಾರಾಯಣನನ್ನೂ ಆ ದೇವಿಯರು ಸಾಕ್ಷಾತ್ಕರಿಸಿದರು.

೧೫೬. ಮತ್ತು ಉತ್ತಮಾಂಗನೆಯರು ಸರ್ವೇಶ್ವರನಾದ ಶಂಕರನನ್ನು ನಮಸ್ಕರಿಸಿ ಕೇಳಿಕೊಂಡರು. ಕನ್ಯೆಯರು ಹೀಗೆಂದು ಪ್ರಶ್ನಿಸಿದರು :—ಕಾಂತಿಯಿಂದ ಈ ರೀತಿಯಾಗಿ ಥಳಥಳಿಸುತ್ತಿರುವ ನೀನು ಯಾರು ? ಮತ್ತು ಸೂರ್ಯನಂತೆ ಪ್ರಭಾವತಿಯಾದ ಈ ಬಾಲಕಿಯು ಯಾರು ?

೧೫೭. ಹಾಗು ಕಮಲದಂತೆ ದೀರ್ಘವಾದ ನೇತ್ರವುಳ್ಳವನಾಗಿ ಸುಂದರವಾದ ದೇಹದಿಂದ ಪ್ರಕಾಶಿಸುತ್ತಿರುವ ಈ ಪುರುಷನು ಯಾರು ? ಶ್ರೇಷ್ಠವಾದ ನಂದೀಶ್ವರನೆಂಬ ವಾಹನವುಳ್ಳ ಶಿವನು ದೇವಿಯರ ಈ ಪಶ್ನಾವಳಿಯನ್ನು ಕೇಳಿದನು.

೧೫೮. ಮತ್ತು ಮಹಾಯೋಗಿಯೂ, ಸರ್ವಭೂತಾಧಿಪತಿಯೂ, ಶಾಶ್ವತನೂ ಆದ ಶಂಕರನು ಹೀಗೆಂದು ಉತ್ತರ ಹೇಳಿದನು :— ಇವನು ಸನಾತನನಾದ ಶ್ರೀಮನ್ನಾರಾಯಣಸ್ವಾಮಿಯು. ಈಕೆಯು ಜಗನ್ಮಾತೆಯಾದ ಗೌರಿಯು.

ವಿಭಜ್ಯ ಸಂಸ್ಥಿತೋ ದೇವಃ ಸ್ವಾತ್ಮಾನಂ ಬಹುಧೇಶ್ವರಃ ।
ನ ಮೇ ವಿದುಃ ಪರಂ ತತ್ತ್ವಂ ದೇವಾಶ್ಚ ನ ಮಹರ್ಷಯಃ ॥ ೧೫೯ ॥

ಏಕೋಽಯಂ ವೇದ ವಿಶ್ವಾತ್ಮಾ ಭವಾನೀ ವಿಷ್ಣುರೇವ ಚ ।
ಅಹಂ ಹಿ ನಿಸ್ಪೃಹಃ ಶಾಂತಃ ಕೇವಲೋ ನಿಷ್ಪರಿಗ್ರಹಃ ॥ ೧೬೦ ॥

ಮಾಮೇವ ಕೇಶವಂ ಪ್ರಾಹುರ್ಲಕ್ಷ್ಮೀಂ ದೇವೀಮಥಾಂಬಿಕಾಮ್ ।
ಏಷ ಧಾತಾ ವಿಧಾತಾ ಚ ಕಾರಣಂ ಕಾರ್ಯಮೇವ ಚ ॥ ೧೬೧ ॥

ಕರ್ತಾ ಕಾರಯಿತಾ ವಿಷ್ಣುರ್ಭುಕ್ತಿಮುಕ್ತಿಫಲಪ್ರದಃ ।
ಭೋಕ್ತಾ ಪುಮಾನಪ್ರಮೇಯಃ ಸಂಹರ್ತಾ ಕಾಲರೂಪಧೃಕ್ ॥ ೧೬೨ ॥

---

೧೫೯ ಪರಮೇಶ್ವರಸ್ವಾಮಿಯು ತನ್ನ ಸ್ವರೂಪವನ್ನು ಅನೇಕ ರೂಪವಾಗಿ ವಿಂಗಡಿಸಿ ಬಹುರೂಪನಾಗಿರುವನು. ನನ್ನ ಮತ್ತು ದೇವಿಯ ಪರಮಾರ್ಥತತ್ತ್ವವನ್ನು ಮಹರ್ಷಿಗಳು ತಿಳಿಯಲಾರರು.

೧೬೦. ವಿಶ್ವರೂಪಿಯಾದ ನಾನು ಅಥವಾ ಈ ಪಾರ್ವತೀದೇವಿಯು ಅಥವಾ ವಿಷ್ಣುವು ಪರಮತತ್ತ್ವವನ್ನು ಅರಿತಿರವೆವು. ನಾನು ನಿಸ್ಪೃಹನೂ, ಶಾಂತನೂ ಅದ್ವಿತೀಯನೂ ಮತ್ತು ಸಮಸ್ತ ಪರಿಗ್ರಹವರ್ಜಿತನೂ ಆಗಿರುವೆನು.

೧೬೧. ನನ್ನನ್ನೇ ಕೇಶವನೆಂದೂ, ಲಕ್ಷ್ಮೀದೇವಿ ಅಥವಾ ಅಂಬಿಕೆಯೆಂದೂ ಕರೆಯುತ್ತಾರೆ. ಈ ನಾನು ಸರ್ವಜಗನ್ನಿರ್ಮಾತನೂ, ಸರ್ವಪಾಲಕನೂ ಮತ್ತು ನಿಖಿಲ ಕಾರ್ಯ-ಕಾರಣಸ್ವರೂಪಿಯೂ ಆಗಿರುವೆನು.

೧೬೨. ಸರ್ವಕರ್ಮವನ್ನು ಮಾಡುವವನೂ, ಮಾಡಿಸುವವನೂ, ವ್ಯಾಪಕನೂ, ಭೋಗ-ಮೋಕ್ಷಫಲಗಳನ್ನು ಕೊಡುವವನೂ, ಭೋಕ್ತೃ ಪುರುಷ ಸ್ವರೂಪನೂ, ಅಪರಿಚ್ಛಿನ್ನನೂ, ಸರ್ವಸಂಹಾರಕನೂ ಮತ್ತು ಕಾಲರೂಪವನ್ನು ಧರಿಸಿದವನೂ ಆಗಿರುವೆನು.

ಸ್ರಷ್ಟಾ ಪಾತಾ ವಾಸುದೇವೋ ವಿಶ್ವಾತ್ಮಾ ವಿಶ್ವತೋಮುಖಃ ।
ಕೂಟಸ್ಥೋ ಹ್ಯಕ್ಷರೋ ವ್ಯಾಪೀ ಯೋಗೀ ನಾರಾಯಣೋಽವ್ಯಯಃ ॥

ತಾರಕಃ ಪುರುಷೋ ಹ್ಯಾತ್ಮಾ ಕೇವಲಃ ಪರಮಂ ಪದಮ್ ।
ಸೈಷಾ ಮಾಹೇಶ್ವರೀ ಗೌರೀ ಮಮ ಶಕ್ತಿರ್ನಿರಂಜನಾ ॥ ೧೬೪ ॥

ಶಾಂತಾ ಸತ್ಯಾ ಸದಾನಂದಾ ಪರಂ ಪದಮಿತಿ ಶ್ರುತಿಃ ।
ಅಸ್ಯಾಃ ಸರ್ವಮಿದಂ ಜಾತಮತ್ರೈವ ಲಯಮೇಷ್ಯತಿ ॥ ೧೬೫ ॥

ಏಷೈವ ಸರ್ವಭೂತಾನಾಂ ಗತೀನಾಮುತ್ತಮಾ ಗತಿಃ ।
ತಯಾಹಂ ಸಂಗತೋ ದೇವ್ಯಾ ಕೇವಲೋ ನಿಷ್ಕಲಃ ಪರಃ ॥ ೧೬೬ ॥

---

೧೬೩. ಮತ್ತು ನೀನು ಸೃಷ್ಟಿಕರ್ತನೂ, ರಕ್ಷಕನೂ, ವಾಸುದೇವನೂ ವಿಶ್ವಾತ್ಮನೂ, ಸರ್ವತೋಮುಖನೂ, ನಿರ್ವಿಕಾರನೂ, ಅಕ್ಷರನೂ, ವ್ಯಾಪಕನೂ, ಮಹಾಯೋಗಿಯೂ ಮತ್ತು ಶಾಶ್ವತನೂ ಆದ ನಾರಾಯಣಮೂರ್ತಿಯಾಗಿರುತ್ತೀ.

೧೬೪. ಹಾಗು ಸಂಸಾರತಾರಕನಾದ ಪುರುಷನೂ, ಪರಮಪದ ಸ್ವರೂಪನೂ, ಆತ್ಮಸ್ವರೂಪನೂ ಮತ್ತು ಅದ್ವಿತೀಯನೂ ಆಗಿದ್ದೀ. ಮಹೇಶ್ವರನಾದ ನನ್ನ ಈ ಭಾರ್ಯೆಯಾದ, ನಿರ್ದುಷ್ಟಳಾದ ಗೌರಿಯು ನನ್ನ ಶಕ್ತಿರೂಪಿಣಿಯಾಗಿರುವಳು.

೧೬೫. ಈ ಮಾಹೇಶ್ವರ ಶಕ್ತಿಯು ಶಾಂತವೂ, ಸತ್ಯವೂ, ಸದಾನಂದ ಸ್ವರೂಪವೂ, ಆದ ಪರಮಪದವೆಂದು ಶ್ರುತಿಯು ವರ್ಣಿಸುತ್ತಿದೆ. ಸಮಸ್ತ ಪ್ರಪಂಚವು ಈ ಶಕ್ತಿಯಿಂದ ಹುಟ್ಟಿ ಶಕ್ತಿಯಲ್ಲಿಯೇ ಲಯಹೊಂದುವುದು.

೧೬೬. ಈ ಶಕ್ತಿಯು ಸರ್ವಭೂತಗಳಿಗೆ ಪ್ರಾಪ್ಯವಾದ ಗತಿಗಳಲ್ಲಿ ಉತ್ತಮಗತಿ ರೂಪಳಾಗಿರುವಳು. ಆ ಶಕ್ತಿದೇವಿಯಿಂದ ನಿರವಯವನೂ, ಅದ್ವಿತೀಯನೂ ಮತ್ತು ಪರಮಪುರುಷನೂ ಆದ ನಾನು ಸಂಗತನಾಗಿರುವೆನು.

ಪಶ್ಯಾಮ್ಯಶೇಷಮೇವಾಹಂ ಪರಮಾತ್ಮಾನಮವ್ಯಯಮ್ ।
ತಸ್ಮಾದನಾದಿಮದ್ವೈತಂ ವಿಷ್ಣುಮಾತ್ಮಾನಮೀಶ್ವರಮ್ ॥ ೧೬೭ ॥

ಏಕಮೇವ ವಿಜಾನೀಥ ತತೋ ಯಾಸ್ಯಥ ನಿರ್ವೃತಿಮ್ ।
ಮನ್ಯಂತೇ ವಿಷ್ಣುಮವ್ಯಕ್ತಮಾತ್ಮಾನಂ ಶ್ರದ್ಧಯಾನ್ವಿತಾಃ ॥ ೧೬೮ ॥

ಯೇ ಭಿನ್ನದೃಷ್ಟ್ಯಾ ಚೇಶಾನಂ ಪೂಜಯಂತೋ ನ ಮೇ ಪ್ರಿಯಾಃ
ದ್ವಿಷಂತಿ ಯೇ ಜಗತ್ಸೂತಿಂ ಮೋಹಿತಾ ರೌರವಾದಿಷು ॥ ೧೬೯ ॥

ಪಚ್ಯಮಾನಾ ನ ಮುಚ್ಯಂತೇ ಕಲ್ಪಕೋಟಿಶತೈರಪಿ ।
ತಸ್ಮಾದಶೇಷಭೂತಾನಾಂ ರಕ್ಷಕೋ ವಿಷ್ಣುರವ್ಯಯಃ ॥ ೧೭೦ ॥

---

೧೬೭. ಆ ಶಕ್ತಿವಶದಿಂದ ನಾನು ಸಂಪೂರ್ಣನಾದ ಮತ್ತು ಅವ್ಯಯನಾದ ಪರಮಾತ್ಮಸ್ವರೂಪವನ್ನು ಸಾಕ್ಷಾತ್ಕರಿಸುತ್ತೇನೆ. ಆದುದರಿಂದ ಅನಾದಿಯೂ, ಅದ್ವಿತೀಯನೂ ಆದ ವಿಷ್ಣು ಮತ್ತು ಈಶ್ವರನನ್ನು ಏಕಾತ್ಮನನ್ನಾಗಿ ತಿಳಿಯಿರಿ.

೧೬೮. ಹೀಗೆ ಹರಿ-ಹರರ ಐಕ್ಯವನ್ನು ತಿಳಿಯುವುದರಿಂದ ನೀವು ಮೋಕ್ಷ ಸುಖವನ್ನು ಹೊಂದುತ್ತೀರಿ. ಕೆಲವರು ಶ್ರದ್ಧೆಯಿಂದ ಕೂಡಿ ಅವ್ಯಕ್ತನಾದ ವಿಷ್ಣು ವನ್ನು ಆತ್ಮನನ್ನಾಗಿ ತಿಳಿಯುವರು.

೧೬೯. ಆದರೆ ಅವರು ಹರಿ-ಹರರನ್ನು ಭಿನ್ನದೃಷ್ಟಿಯಿಂದ ಪೂಜಿಸುವವರಾ ದುದರಿಂದ ಅವರು ನನಗೆ ಪ್ರಿಯರಲ್ಲ, ಮತ್ತು ಜಗತ್ಕಾರಣನಾದ ಪರಮಾತ್ಮನನ್ನು ಬುದ್ಧಿಮೋಹದಿಂದ ದ್ವೇಷಿಸುವ ಮಾನವರು ರೌರವಾದಿ ನರಕದಲ್ಲಿ ಬೀಳುವರು.

೧೭೦. ಮತ್ತು ನೂರಾರುಕೋಟಿ ಕಲ್ಪಕಾಲದವರೆಗೆ ನರಕಯಾತನೆಯಿಂದ ಬೆಂದವರಾದರೂ ಮುಕ್ತಿಯನ್ನು ಹೊಂದುವುದಿಲ್ಲ. ಆದ್ದರಿಂದ ಸರ್ವಪ್ರಾಣಿಗಳಿಗೆ ಅವ್ಯಯನಾದ ಮಹಾವಿಷ್ಣುವು ರಕ್ಷಕನಾಗಿರುವನು.

ಯಥಾವದಿಹ ವಿಜ್ಞಾಯ ಧ್ಯೇಯಃ ಸರ್ವಾಪದಿ ಪ್ರಭುಃ।
ಶ್ರುತ್ವಾ ಭಗವತೋ ವಾಕ್ಯಂ ದೇವಾಃ ಸರ್ವೇ ಗಣೇಶ್ವರಾಃ ॥ ೧೭೧ ॥

ನೇಮುರ್ನಾರಾಯಣಂ ದೇವಂ ದೇವೀಂ ಚ ಹಿಮಶೈಲಜಾಮ್ ।
ಪ್ರಾರ್ಥಯಾಮಾಸುರೀಶಾನೇ ಭಕ್ತಿಂ ಭಕ್ತಜನಪ್ರಿಯೇ ॥ ೧೭೨ ॥

ಭವಾನೀಪಾದಯುಗಲೇ ನಾರಾಯಣಪದಾಂಬುಜೇ ।
ತತೋ ನಾರಾಯಣಂ ದೇವಂ ಗಣೇಶಾ ಮಾತರೋऽಪಿ ಚ ॥ ೧೭೩ ॥

ನ ಪಶ್ಯಂತಿ ಜಗತ್ಸೂತಿಂ ತದದ್ಭುತಮಿವಾಭವತ್ ।
ತದಂತರೇ ಮಹಾದೈತ್ಯೋ ಹ್ಯಂಧಕೋ ಮನ್ಮಥಾಂಧಕಃ ॥ ೧೭೪ ॥

---

೧೭೧. ಎಲ್ಲಾ ಆಪತ್ತುಗಳಲ್ಲಿ ಪ್ರಭುವಾದ ಆ ಮಹಾವಿಷ್ಣುವು ಯಥಾವತ್ತಾಗಿ ತಿಳಿದು ಧ್ಯಾನಿಸಲ್ಪಡಬೇಕು. ಹೀಗೆಂಬ ಭಗವಂತನ ವಾಕ್ಯವನ್ನು ಸಮಸ್ತ ದೇವತೆಗಳೂ ಮತ್ತು ಗಣೇಶ್ವರರೂ ಕೇಳಿದರು.

೧೭೨. ಮತ್ತು ನಾರಾಯಣನನ್ನೂ, ಮಹೇಶ್ವರನನ್ನೂ, ಪರ್ವತರಾಜನ ಮಗಳಾದ ಪಾರ್ವತೀದೇವಿಯನ್ನೂ ನಮಸ್ಕರಿಸಿ ಭಕ್ತಜನರಲ್ಲಿ ಪ್ರಿಯನಾದ ಮಹೇಶ್ವರನಲ್ಲಿ ಅಚಲವಾದ ಭಕ್ತಿಯನ್ನು ಪ್ರಾರ್ಥಿಸಿದರು.

೧೭೩. ಹಾಗು ಪಾರ್ವತೀದೇವಿಯ ಪಾದಕಮಲದಲ್ಲಿಯೂ, ಶ್ರೀಮನ್ನಾರಾಯಣನ ಪಾದಾಂಬುಜದಲ್ಲಿಯೂ ಭಕ್ತಿಯನ್ನು ಪ್ರಾರ್ಥಿಸಿದರು. ತರುವಾಯ ಗಣೇಶ್ವರರೂ, ಮಾತೃದೇವತೆಗಳೂ ಅಲ್ಲಿ ನಾರಾಯಣನನ್ನು ಕಾಣಲಿಲ್ಲ.

೧೭೪. ಹಾಗೆ ಜಗತ್ಕಾರಣನಾದ ನಾರಾಯಣನು ಅಲ್ಲಿ ಕಾಣಿಸದಿರುವುದು ಅದ್ಭುತದಂತಾಯಿತು. ಆ ಸಮಯದಲ್ಲಿ ಮನ್ಮಥಾವೇಶದಿಂದ ಅವಿವೇಕಿಯಾದ ಅಂಧಕಾಸುರನೆಂಬ ಮಹಾದೈತ್ಯನು ಅಲ್ಲಿಗೆ ಬಂದನು.

ಮೋಹಿತೋ ಗಿರಿಜಾಂ ದೇವೀಮಾಹರ್ತುಂ ಗಿರಿಮಾಯಯೌ ।
ಅಥಾನಂತವಪುಃ ಶ್ರೀಮಾನ್ ಯೋಗೀ ನಾರಾಯಣೋಽಮಲಃ ।
ತತ್ರೈವಾವಿರಭೂದ್ದೈತ್ಯೈರ್ಯುದ್ಧಾಯ ಪುರುಷೋತ್ತಮಃ ॥ ೧೭೫ ॥

ಕೃತ್ವಾಥ ಪಾರ್ಶ್ವೇ ಭಗವಂತಮೀಶೋ
ಯುದ್ಧಾಯ ವಿಷ್ಣುಂ ಗಣದೇವಮುಖ್ಯೈಃ ।
ಶಿಲಾದಪುತ್ರೇಣ ಚ ಮಾತೃಕಾಭಿಃ
ಸ ಕಾಲರುದ್ರೋಽಪಿ ಜಗಾಮ ದೇವಃ ॥ ೧೭೬ ॥

ತ್ರಿಶೂಲಮಾದಾಯ ಕೃಶಾನುಕಲ್ಪಂ
ಸ ದೇವದೇವಃ ಪ್ರಯಯೌ ಪುರಸ್ತಾತ್ ।
ತಮನ್ವಯುಸ್ತೇ ಗಣರಾಜವರ್ಯಾ ।
ಜಗಾಮ ದೇವೋಽಪಿ ಸಹಸ್ರಬಾಹುಃ ॥ ೧೭೭ ॥

---

೧೭೫. ಆ ಅಂಧಕಾಸುರನು ಮೋಹವಶನಾಗಿ ಪಾರ್ವತೀದೇವಿಯನ್ನು ಅಪಹರಿಸಲು ಆ ಪರ್ವತಕ್ಕೆ ಬಂದನು. ಆಗ ಅನಂತವಾದ ವಿಗ್ರಹವುಳ್ಳವನೂ, ಯೋಗಿಯೂ, ನಿರ್ಮಲನೂ ಮತ್ತು ಪುರುಷೋತ್ತಮನೂ ಆದ ಶ್ರೀಮನ್ನಾರಾಯಣನು ದೈತ್ಯರ ಸಂಗಡ ಯುದ್ಧಮಾಡಲು ಆ ಸ್ಥಳದಲ್ಲಿ ಆವಿರ್ಭವಿಸಿದನು.

೧೭೬. ಹಾಗೆ ಬಂದ ಭಗವಂತನಾದ ಮಹಾವಿಷ್ಣುವನ್ನು ತನ್ನ ಪಾರ್ಶ್ವದಲ್ಲಿ ಇರಿಸಿ ಮಹೇಶ್ವರನು ಕಾಲರುದ್ರರೂಪಿಯಾಗಿ ಮುಖ್ಯರಾದ ಗಣದೇವತೆಗಳು, ನಂದಿಕೇಶ್ವರ ಮತ್ತು ಮಾತೃದೇವಿಯರೊಡನೆ ಯುದ್ಧಕ್ಕೆ ಬಂದನು.

೧೭೭. ದೇವೋತ್ತಮನಾದ ಪರಮಶಿವನು ಅಗ್ನಿಯಂತೆ ಜ್ವಲಿಸುವ ತ್ರಿಶೂಲವನ್ನು ಧರಿಸಿ ಮುಂಭಾಗದಲ್ಲಿ ಪ್ರಯಾಣಮಾಡಿದನು. ಸಹಸ್ರಭುಜನಾದ ವಿಷ್ಣುವೂ ಮುಖ್ಯರಾದ ಗಣರಾಜರೂ ಅವನನ್ನು ಹಿಂಬಾಲಿಸಿ ನಡೆದರು.

ರರಾಜ ಮಧ್ಯೇ ಭಗವಾನ್ ಸುರಾಣಾಂ ।
ವಿವಾಹನೋ ವಾರಿಜಪರ್ಣವರ್ಣಃ ।
ತದಾ ಸುಮೇರೋಃ ಶಿಖರಾಧಿರೂಢ-
ಸ್ತ್ರಿಲೋಕದೃಷ್ಟಿರ್ಭಗವಾನಿವಾರ್ಕಃ ॥ ೧೭೮ ॥

ಜಯನ್ನನಾದಿರ್ಭಗವಾನನಮೇಯೋ ।
ಹರಃ ಸಹಸ್ರಾಕೃತಿರಾವಿರಾಸೀತ್ ।
ತ್ರಿಶೂಲಪಾಣಿರ್ಗಗನೇ ಸುಘೋಷಃ
ಪಪಾತ ದೇವೋಪರಿ ಪುಷ್ಪವೃಷ್ಟಿಃ ॥ ೧೭೯ ॥

ಸಮಾಗತಂ ವೀಕ್ಷ್ಯ ಗಣೇಶರಾಜಂ
ಸಮಾವೃತಂ ದೈತ್ಯರಿಪುಂ ಗಣೇಶೈಃ ।
ಯುಯೋಧ ಶಕ್ರೇಣ ಸಮಾತೃಕಾಭಿ-
ರ್ಗಣೈರಶೇಷೈರಮರಪ್ರಧಾನೈಃ ॥ ೧೮೦ ॥

---

೧೭೮. ಆಗ ಕಮಲದಳದಂತೆ ವರ್ಣವುಳ್ಳವನೂ, ವಾಹನಶೂನ್ಯನೂ ಆದ ಭಗವಂತನು ಆ ದೇವತಾಗಣದ ಮಧ್ಯದಲ್ಲಿ ಸುಮೇರುಪರ್ವತದ ಶಿಖರಕ್ಕೆ ಬಂದ, ಮೂರುಲೋಕವನ್ನು ಬೆಳಗುವ, ಪೂಜ್ಯನಾದ, ಸೂರ್ಯನಂತೆ ಪ್ರಕಾಶಿಸಿದನು.

೧೭೯. ಆಗ ಅನಾದಿಯೂ, ಗಣನಾತೀತನೂ ಆದ ಪರಮಶಿವನು ಸಹಸ್ರಾರು ಆಕಾರಗಳಿಂದ ಕೂಡಿ ಹಸ್ತದಲ್ಲಿ ಧರಿಸಿದ ತ್ರಿಶೂಲದಿಂದ ಜಯಶಾಲಿಯಾಗಿ ಮೆರೆದನು. ಆಗ ಆಕಾಶದಿಂದ ಶಿವನಮೇಲೆ ಗಂಭೀರ ಧ್ವನಿಯಿಂದ ಕೂಡಿದ ಪುಷ್ಪವೃಷ್ಟಿಯು ಸುರಿಯಿತು.

೧೮೦. ಮತ್ತು ದೈತ್ಯರಿಗೆ ರಿಪುವಾದ ಗಣೇಶ್ವರನು ಮುಖ್ಯಗಣಗಳಿಂದ ಕೂಡಿ ಬಂದಿರುವುದನ್ನು ನೋಡಿ ಇಂದ್ರ-ಮಾತೃಗಣ-ದೇವವರ್ಗ ಮತ್ತು ಪ್ರಮಥಗಣವೆಂಬ ವೀರ್ಯೋನ್ಮತ್ತರಾದ ಪರಿವಾರದೊಂದಿಗೆ ಯುದ್ಧಮಾಡಿದನು.

ವಿಜಿತ್ಯ ಸರ್ವಾನಪಿ ಬಾಹುವೀರ್ಯಾತ್
ಸ ಸಂಯುಗೇ ಶಂಭುರನಂತಧಾಮಾ ।
ಸಮಾಯಯೌ ಯತ್ರ ಸ ಕಾಲರುದ್ರೋ
ವಿಮಾನಮಾರುಹ್ಯ ವಿಹೀನಸತ್ತ್ವಃ ॥ ೧೮೧ ॥

ದೃಷ್ಟ್ವಾಂಧಕಂ ಸಮಾಯಾಂತಂ ಭಗವಾನ್ ಗರುಡಧ್ವಜಃ ।
ವ್ಯಾಜಹಾರ ಮಹಾದೇವಂ ಭೈರವಂ ಭೂತಿಭೂಷಣಮ್ ॥ ೧೮೨ ॥

ಹಂತುಮರ್ಹಸಿ ದೈತ್ಯೇಶಮಂಧಕಂ ಲೋಕಕಂಟಕಮ್ ।
ತ್ವಾಮೃತೇ ಭಗವಾನ್ ಶಕ್ತೋ ಹಂತಾ ನಾನ್ಯೋಽಸ್ಯ ವಿದ್ಯತೇ ॥೧೮೩॥

ತ್ವಂ ಹರ್ತಾ ಸರ್ವಲೋಕಾನಾಂ ಕಾಲಾತ್ಮಾ ಹ್ಯೈಶ್ವರೀ ತನುಃ ।
ಸ್ತೂಯಶೇ ವಿವಿಧೈರ್ಮಂತ್ರೈರ್ವೇದವಿದ್ಭಿರ್ವಿಚಕ್ಷಣೈಃ ॥ ೧೮೪ ॥

---

೧೮೧. ಅಪಾರವಾದ ಮಹಿಮೆಯುಳ್ಳ ಶಂಕರನು ಯುದ್ಧರಂಗದಲ್ಲಿ ಬಾಹುವೀರ್ಯದಿಂದ ಸಮಸ್ತ ಶತ್ರುಗಳನ್ನು ಗೆದ್ದು ವಿಮಾನಾರೂಢನಾಗಿ ಸತ್ವಹೀನನಾದ ಕಾಲರುದ್ರನು ವಾಸಮಾಡುತ್ತಿದ್ದ ಪ್ರದೇಶಕ್ಕೆ ಬಂದನು.

೧೮೨. ಅಲ್ಲಿ ಭಗವಂತನೂ, ಗರುಡವಾಹನನೂ ಆದ ವಿಷ್ಣುವು ಅಂಧಕಾಸುರನು ಬರುತ್ತಿದ್ದುದನ್ನು ಕಂಡು ಭಯಂಕರನೂ, ಭಸ್ಮವನ್ನು ಲೇಪಿಸಿಕೊಂಡವನೂ, ಆದ ಮಹಾದೇವನನ್ನು ಕುರಿತು ಹೀಗೆಂದು ಹೇಳಿದನು.

೧೮೩. ನೀನು ಲೋಕಗಳಿಗೆ ಕಂಟಕನಾದ ಮತ್ತು ದೈತ್ಯರಾಜನಾದ ಈ ಅಂಧಕಾಸುರನನ್ನು ಸಂಹರಿಸಲು ಅರ್ಹನಾಗಿದ್ದೀಯೆ. ನಿನ್ನನ್ನು ಬಿಟ್ಟು ಈ ಅಸುರನನ್ನು ಕೊಲ್ಲಲು ಶಕ್ತನಾದ ಭಗವಂತನು ಮತ್ತಾರೂ ಇಲ್ಲ.

೧೮೪. ನೀನು ಸಮಸ್ತ ಲೋಕಗಳ ಸಂಹಾರಕನೂ ಕಾಲಸ್ವರೂಪಿಯೂ ಆದ ಈಶ್ವರ ವಿಗ್ರಹವೆಂದು ವೇದಜ್ಞರಾದ ವಿದ್ವಾಂಸರಿಂದ ಅನೇಕ ವೈದಿಕ ಮಂತ್ರಗಳಿಂದ ಸ್ತುತಿಸಲ್ಪಡುತ್ತಿದ್ದೀ.

ಸ ವಾಸುದೇವಸ್ಯ ವಚೋ ನಿಶಮ್ಯ ಭಗವಾನ್ ಹರಃ ।
ನಿರೀಕ್ಷ್ಯ ವಿಷ್ಣುಂ ಹನನೇ ದೈತ್ಯೇಂದ್ರಸ್ಯ ಮತಿಂ ದಧೌ ॥ ೧೮೫ ॥

ಜಗಾಮ ದೇವತಾನೀಕಂ ಗಣಾನಾಂ ಹರ್ಷವರ್ಧನಮ್ ।
ಸ್ತುವಂತಿ ಭೈರವಂ ದೇವಮಂತರಿಕ್ಷಚರಾ ಜನಾಃ ॥ ೧೮೬ ॥

ಜಯಾನಂತ ಮಹಾದೇವ ಕಾಲಮೂರ್ತೇ ಸನಾತನ ।
ತ್ವಮಗ್ನಿಃ ಸರ್ವಭಾವಾನಾಮಂತಸ್ತಿಷ್ಠಸಿ ಸರ್ವಗಃ ॥ ೧೮೭ ॥

ತ್ವಮಂತಕೋ ಲೋಕಕರ್ತಾ ತ್ವಂ ಧಾತಾ ಹರಿರವ್ಯಯಃ ।
ತ್ವಂ ಬ್ರಹ್ಮಾ ತ್ವಂ ಮಹಾದೇವಸ್ತ್ವಂ ಧಾಮ ಪರಮಂ ಪದಮ್॥೧೮೮॥

---

೧೮೫. ಆಗ ಭಗವಂತನಾದ ಪರಮೇಶ್ವರನು ಶ್ರೀಮನ್ನಾರಾಯಣನ ಈ ವಚನವನ್ನು ಕೇಳಿ ವಿಷ್ಣುವನ್ನು ನೋಡುತ್ತಾ ಆ ದೈತ್ಯೇಂದ್ರನ ಸಂಹಾರದಲ್ಲಿ ತನ್ನ ಗಮನವನ್ನಿಟ್ಟನು.

೧೮೬. ಮತ್ತು ಪ್ರಮಥಗಣಗಳಿಗೆ ಹರ್ಷೋದ್ರೇಕವನ್ನು ಮಾಡುವ ದೇವ ಸೈನ್ಯವನ್ನು ಪ್ರವೇಶಿಸಿದನು. ಆಗ ಗಗನಸಂಚಾರಿಗಳಾದ ಜನರು ಈ ಭೈರವ ಮೂರ್ತಿಯನ್ನು ಬಹುವಾಗಿ ಸ್ತುತಿಸಿದರು.

೧೧೭. ಅಂತಶೂನ್ಯನೇ ! ಮಹಾದೇವನೇ ! ಮೃತ್ಯುರೂಪಿಯೇ ! ಮತ್ತು ಸನಾತನನೇ ! ನೀನು ಜಯಶಾಲಿಯಾಗು, ನೀನು ಸಮಸ್ತ ವಸ್ತುಗಳ ಒಳಭಾಗದಲ್ಲಿ ಅಗ್ನಿರೂಪಿಯಾಗಿ ಸರ್ವವ್ಯಾಪಕನಾಗಿದ್ದೀಯೆ.

೧೮೮. ನೀನು ಜಗತ್ತನ್ನು ಸಂಹರಿಸುವ ಅಂತಕನು, ಲೋಕಗಳನ್ನು ನಿರ್ಮಾಣ ಮಾಡುವ ಬ್ರಹ್ಮದೇವನು, ಅವ್ಯಯನಾದ ಹರಿಯು, ಬ್ರಹ್ಮಮಹಾದೇವ-ಇವರೆಲ್ಲರೂ ನೀನೇ ಆಗಿದ್ದೀ, ನೀನೇ ತೇಜೋಮಯವಾದ ಪರಮಪದವಿಯು.

ಓಂಕಾರಮೂರ್ತಿರ್ಯೋಗಾತ್ಮಾ ತ್ರಯೀನೇತ್ರಸ್ತ್ರಿಲೋಚನಃ ।
ಮಹಾವಿಭೂತಿರ್ವಿಶ್ವೇಶೋ ಜಯಾನಂತ ಜಗತ್ಪತೇ ॥ ೧೮೯ ॥

ತತಃ ಕಾಲಾಗ್ನಿರುದ್ರೋಽಸೌ ಗೃಹೀತ್ವಾಂಧಕಮೀಶ್ವರಃ ।
ತ್ರಿಶೂಲಾಗ್ರೇಷು ವಿನ್ಯಸ್ಯ ಪ್ರನನರ್ತ ಸತಾಂ ಗತಿಃ ॥ ೧೯೦ ॥

ದೃಷ್ಟ್ವಾಂಧಕಂ ದೇವಗಣಾಃ ಶೂಲಪ್ರೋತಂ ಪಿತಾಮಹಃ ।
ಪ್ರಣೇಮುರೀಶ್ವರಂ ದೇವಂ ಭೈರವಂ ಭವಮೋಚನಮ್ ॥ ೧೯೧ ॥

ಅಸ್ತುವನ್ಮುನಯಃ ಸಿದ್ಧಾ ಜಗುರ್ಗಂಧರ್ವಕಿನ್ನರಾಃ ।
ಅಂತರಿಕ್ಷೇಽಪ್ಸರಃಸಂಘಾ ನೃತ್ಯಂತಿ ಸ್ಮ ಮನೋಹರಾಃ ॥ ೧೯೨ ॥

---

೧೮೯. ಮತ್ತು ಓಂಕಾರಸ್ವರೂಪನೂ ಯೋಗಾತ್ಮಕನೂ ವೇದತ್ರಯವೆಂಬ ಮೂರು ನೇತ್ರವುಳ್ಳವನೂ ವಿವಿಧವಾದ ವಿಭೂತಿ ವಿಸ್ತಾರವುಳ್ಳವನೂ ವಿಶ್ವೇಶ್ವರನೂ ಆದ ಸಮಸ್ತ ಜಗದೀಶ್ವರನೇ! ನೀನು ಜಯಶಾಲಿಯಾಗು.

೧೯೦. ಅನಂತರದಲ್ಲಿ ಕಾಲಾಗ್ನಿಯಂತೆ ರುದ್ರನೂ ಸತ್ಪುರುಷರಿಗೆ ಸದ್ಗತಿ ರೂಪನೂ ಆದ ಭೈರವೇಶ್ವರನು ಅಂಧಕಾಸುರನನ್ನು ಹಿಡಿದು ತ್ರಿಶೂಲದ ತುದಿಯಲ್ಲಿರಿಸಿ ನಾಟ್ಯವಾಡಿದನು.

೧೯೧. ಆಗ ಬ್ರಹ್ಮನೇ ಆದಿಯಾದ ಸಮಸ್ತದೇವತಾಗಣವೂ ಶೂಲಾಗ್ರದಲ್ಲಿಯೇರಿಸಲ್ಪಟ್ಟ ಅಂಧಕಾಸುರನನ್ನು ನೋಡಿ ಭೈರವನೂ ಸಂಸಾರ ಮೋಚಕನೂ ಆದ ಈಶ್ವರನನ್ನು ನಮಸ್ಕರಿಸಿದರು.

೧೯೨. ಆಗ ಮಹರ್ಷಿಗಳೂ, ಸಿದ್ಧರೂ ಸ್ವಾಮಿಯನ್ನು ಸ್ತೋತ್ರಮಾಡಿದರು. ಗಂಧರ್ವರೂ, ಕಿಂಪುರುಷರೂ ಗಾನಮಾಡಿದರು ಮತ್ತು ಗಗನರಂಗದಲ್ಲಿ ಸುಂದರಿಯರಾದ ಅಪ್ಸರಸ್ತ್ರೀಯರು ನರ್ತನಮಾಡಿದರು.

ಸಂಸ್ಥಾಪಿತೋಽಥ ಶೂಲಾಗ್ರೇ ಸೋಽಂಧಕೋ ದಗ್ಧಕಿಲ್ಬಿಷಃ ।
ಉತ್ಪನ್ನಾಖಿಲನಿಜ್ಞಾನಸ್ತುಷ್ಟಾವ ಪರಮೇಶ್ವರಮ್ ॥ ೧೯೩ ॥

ಅಂಧಕ ಉವಾಚ :—

ನಮಾಮಿ ಮೂರ್ಧ್ನಾ ಭಗವಂತಮೇಕಂ
ಸಮಾಹಿತೋ ಯಂ ವಿದುರೀಶ ತತ್ತ್ವಮ್ ।
ಪುರಾತನಂ ಪುಣ್ಯಮನಂತರೂಪಂ
ಕಾಲಂ ಕವಿಂ ಯೋಗವಿಯೋಗಹೇತುಮ್ ॥ ೧೯೪ ॥

ದಂಷ್ಟ್ರಾಕರಾಲಂ ದಿವಿ ನೃತ್ಯಮಾನಂ
ಹುತಾಶವಕ್ತ್ರಂ ಜ್ವಲನಾರ್ಕರೂಪಮ್ ।
ಸಹಸ್ರಪಾದಾಕ್ಷಿಶಿರೋಽಭಿಯುಕ್ತಂ
ಭವಂತಮೇಕಂ ಪ್ರಣಮಾಮಿ ರುದ್ರಮ್ ॥ ೧೯೫ ॥

---

೧೯೩. ಶೂಲಾಗ್ರದಲ್ಲಿ ಇರಿಸಲ್ಪಟ್ಟ ಆ ಅಂಧಕಾಸುರನು ಭಸ್ಮೀಭೂತವಾದ ಪಾಪಪುಂಜವುಳ್ಳವನಾಗಿ ಸಮಸ್ತ ವಿಜ್ಞಾನವನ್ನು ಹೊಂದಿ ಪರಮೇಶ್ವರನನ್ನು ಸ್ತುತಿಸಿದನು.

೧೯೪. ಅಂಧಕಾಸುರನು ಹೀಗೆಂದನು :—ಮಹೇಶ್ವರನೇ! ಸಮಾಧಿಸ್ಥನಾದ ಯೋಗಿಯು ಪುರಾತನವೂ, ಪವಿತ್ರವೂ, ಅನಂತವೂ, ಕಾಲಾತ್ಮಕವೂ, ಸರ್ವಜ್ಞಾನಮಯವೂ, ಸಂಯೋಗ - ವಿಯೋಗಗಳಿಗೆ ಕಾರಣವೂ ಆದ ನಿನ್ನ ತತ್ತ್ವವನ್ನು ಅರಿಯುವನು. ಅಂತಹ ನಿನ್ನ ಅದ್ವಿತೀಯ ಪೂಜ್ಯರೂಪವನ್ನು ಶಿರಸ್ಸಿನಿಂದ ನಮಿಸುವೆನು.

೧೯೫. ಮತ್ತು ಕೋರೆಹಲ್ಲಿನಿಂದ ಕರಾಳವೂ, ಆಕಾಶದಲ್ಲಿ ನರ್ತಿಸುವುದೂ, ಮುಖದಲ್ಲಿ ಅಗ್ನಿಜ್ವಾಲೆಯುಳ್ಳದ್ದೂ, ಅಗ್ನಿ-ಸೂರ್ಯರಂತೆ ಜ್ವಲಿಸುವುದೂ ಸಹಸ್ರ ಸಂಖ್ಯೆಯ ಪಾದ, ನೇತ್ರ, ಶಿರಸ್ಸುಗಳಿಂದ ಕೂಡಿರುವುದೂ ಮತ್ತು ಭಯಂಕರವೂ ಆದ ರುದ್ರಮೂರ್ತಿಯನ್ನು ನಮಸ್ಕರಿಸುತ್ತೇನೆ.

ಜಯಾದಿದೇವಾಮರಪೂಜಿತಾಂಘ್ರೇ
ವಿಭಾಗಹೀನಾಮಲತತ್ತ್ವರೂಪ ।
ತ್ವಮಗ್ನಿರೇಕೋ ಬಹುಧಾಭಿಪೂಜ್ಯೋ
ಬಾಹ್ಯಾದಿಭೇದೈರಖಿಲಾತ್ಮರೂಪಃ ॥ ೧೯೬ ॥

ತ್ವಾಮೇಕಮಾಹುಃ ಪುರುಷಂ ಪುರಾಣ-
ಮಾದಿತ್ಯವರ್ಣಂ ತಮಸಃ ಪರಸ್ತಾತ್ ।
ತ್ವಂ ಪಶ್ಯಸೀದಂ ಪರಿಪಾಸ್ಯಜಸ್ರಂ
ತ್ವಮಂತಕೋ ಯೋಗಿಗಣಾನುಜುಷ್ಟಃ ॥ ೧೯೭ ॥

ಏಕೋಽಂತರಾತ್ಮಾ ಬಹುಧಾ ನಿವಿಷ್ಟೋ
ದೇಹೇಷು ದೇಹಾದಿವಿಶೇಷಹೀನಃ
ತ್ವಮಾತ್ಮತತ್ತ್ವಂ ಪರಮಾತ್ಮಶಬ್ದಂ
ಭವಂತಮಾಹುಃ ಶಿವಮೇವ ಕೇಚಿತ್ ॥ ೧೯೮ ॥

---

೧೯೬. ಆದಿದೇವನೇ ! ದೇವತೆಗಳಿಂದ ಪೂಜ್ಯವಾದ ಪಾದವುಳ್ಳವನೇ ! ನಿರ್ವಿಭಾಗರೂಪನೇ ! ನಿರ್ಮಲ ತತ್ತ್ವಸ್ವರೂಪನೇ ! ನೀನು ಜಯಶಾಲಿಯಾಗು. ನೀನು ಬಾಹ್ಯ-ಅಂತರಮುಂತಾದ ಭೇದಗಳಿಂದ ಅನೇಕ ರೂಪಧಾರಿಯಾಗಿರುವ ಏಕಾಗ್ನಿರೂಪನೂ, ಅನೇಕವಾಗಿ ಪೂಜಿಸಲ್ಪಡುವವನೂ ಆಗಿದ್ದೀ.

೧೯೭. ಯೋಗಿಗಳು ನಿನ್ನನ್ನು ಪುರಾಣನೂ, ಆದಿತ್ಯನಂತೆ ವರ್ಣವುಳ್ಳವನೂ, ತಮೋಗುಣಕ್ಕೆ ಬಾಹ್ಯನೂ ಆದ ಏಕ ಪುರುಷನನ್ನಾಗಿ ಹೇಳುತ್ತಾರೆ. ನೀನು ಈ ಜಗತ್ತನ್ನು ಸಾಕ್ಷಾತ್ಕರಿಸುತ್ತೀ, ಸಂತತವಾಗಿ ಪಾಲಿಸುತ್ತೀ ಮತ್ತು ಅಂತ್ಯಕಾಲದಲ್ಲಿ ನಾಶಮಾಡುತ್ತೀ, ನೀನು ಯೋಗಿಗಳ ಸಮೂಹದಿಂದ ಸೇವ್ಯನಾಗಿದ್ದೀ.

೧೯೮. ದೇಹ ಮುಂತಾದ ಅವಯುವವಿಶೇಷಗಳಿಂದ ಶೂನ್ಯನಾದ ನೀನು ಸರ್ವ ದೇಹಗಳಲ್ಲಿ ಅಂತರಾತ್ಮನಾಗಿ ಅನೇಕರೂಪದಿಂದ ಪ್ರವೇಶಮಾಡಿದ್ದೀ, ನೀನು ಪರಮಾತ್ಮ ಎಂಬ ಸಂಜ್ಞೆಯಿಂದ ಕರೆಯಲ್ಪಡುವ ಆತ್ಮವು. ನಿನ್ನನ್ನು ಶಿವ ರೂಪನೆಂದು ಕೆಲವರು ಕರೆಯುರು.

ತ್ವಮಕ್ಷರಂ ಬ್ರಹ್ಮ ಪರಂ ಪವಿತ್ರ-
ಮಾನಂದರೂಪಂ ಪ್ರಣವಾಭಿಧಾನಮ್ ।
ತ್ವಮೀಶ್ವರೋ ವೇದವಿದಾಂ ಪ್ರಸಿದ್ಧಃ
ಸ್ವಾಯಂಭುವೋಽಶೇಷವಿಶೇಷಹೀನಃ ॥ ೧೯೯ ॥

ತ್ವಮಿಂದ್ರರೂಪೋ ವರುಣೋಽಗ್ನಿರೂಪೋ
ಹಂಸಃ ಪ್ರಾಣೋ ಮೃತ್ಯುರಂತೋಽಸಿ ಯಜ್ಞಃ ।
ಪ್ರಜಾಪತಿರ್ಭಗವಾನೇಕರೂಪೋ
ನೀಲಗ್ರೀವಃ ಸ್ತೂಯಸೇ ವೇದವಿದ್ಭಿಃ ॥ ೨೦೦ ॥

ನಾರಾಯಣಸ್ತ್ವಂ ಜಗತಾಮನಾದಿಃ
ಪಿತಾಮಹಸ್ತ್ವಂ ಪ್ರಪಿತಾಮಹಶ್ಚ ।
ವೇದಾಂತಗುಹ್ಯೋಪನಿಷತ್ಸು ಗೀತಃ
ಸದಾಶಿವಸ್ತ್ವಂ ಪರಮೇಶ್ವರೋಽಸಿ ॥ ೨೦೧ ॥

---

೧೯೯. ನೀನು ಅಕ್ಷರನೂ, ಪರಬ್ರಹ್ಮನೂ, ಪವಿತ್ರವಾದ ಆನಂದರೂಪನೂ, ಓಂಕಾರವೆಂಬ ಸಂಜ್ಞೆಯುಳ್ಳವನೂ ಆಗಿದ್ದೀ, ಮತ್ತು ನೀನು ಸಮಸ್ತ ವಿಕಾರಶೂನ್ಯನಾದ ಸ್ವಯಂಭು ಪುತ್ರನಾದ ಈಶ್ವರನೆಂದು ವೇದವಾದಿಗಳಲ್ಲಿ ಪ್ರಸಿದ್ಧನಾಗಿದ್ದೀ.

೨೦೦. ನೀನು ಇಂದ್ರ, ವರುಣ, ಅಗ್ನಿ, ಸೂರ್ಯ, ಪ್ರಾಣ, ಮೃತ್ಯು, ಅಂತ, ಯಜ್ಞ, ಪ್ರಜಾಪತಿ ಮುಂತಾದ ಅನೇಕಮೂರ್ತಿ ರೂಪದಿಂದಲೂ ಷಡ್ಗುಣೈಶ್ವರ್ಯ ಸಂಪನ್ನನೂ, ಅದ್ವಿತೀಯನೂ, ನೀಲಕಂಠನೂ ಮುಂತಾದ ಗುಣವಾಚಕಗಳಿಂದಲೂ ವೇದಜ್ಞರಿಂದ ಸ್ತುತಿಸಲ್ಪಡುತ್ತೀ.

೨೦೧. ನೀನು ಪ್ರಪಂಚಕ್ಕೆ ಆದಿಭೂತನಾದ ನಾರಾಯಣನೂ, ಪಿತಾಮಹನೂ, ಪ್ರಪಿತಾಮಹರೂಪನೂ ಆಗಿದ್ದೀ, ಮತ್ತು ವೇದಾಂತದ ರಹಸ್ಯೋಪನಿಷತ್ತುಗಳಲ್ಲಿ ವರ್ಣಿಸಲ್ಪಟ್ಟಿರುವ ಪರಮೇಶ್ವರನಾದ ಸದಾಶಿವನೂ ನೀನೇ ಆಗಿದ್ದೀ.

ನಮಃ ಪರಸ್ಮೈ ತಮಸಃ ಪರಸ್ತಾತ್
ಪರಾತ್ಮನೇ ಪಂಚಪದಾಂತರಾಯ ।
ತ್ರಿಶಕ್ತ್ಯತೀತಾಯ ನಿರಂಜನಾಯ
ಸಹಸ್ರಶಕ್ತ್ಯಾಸನಸಂಸ್ಥಿತಾಯ ॥ ೨೦೨ ॥

ತ್ರಿಮೂರ್ತಯೇಽನಂತಪದಾತ್ಮಮೂರ್ತೇ
ಜಗನ್ನಿವಾಸಾಯ ಜಗನ್ಮಯಾಯ ।
ನಮೋ ಜನಾನಾಂ ಹೃದಿ ಸಂಸ್ಥಿತಾಯ
ಫಣೀಂದ್ರಹಾರಾಯ ನಮೋಽಸ್ತು ತುಭ್ಯಮ್ ॥ ೨೦೩ ॥

ಮುನೀಂದ್ರಸಿದ್ಧಾರ್ಚಿತಪಾದಪದ್ಮ
ಐಶ್ವರ್ಯಧರ್ಮಾಸನಸಂಸ್ಥಿತಾಯ ।
ನಮಃ ಪರಾಂತಾಯ ಭವೋದ್ಭವಾಯ
ಸಹಸ್ರಚಂದ್ರಾರ್ಕಸಹಸ್ರಮೂರ್ತೇ ॥ ೨೦೪ ॥

---

೨೦೨. ಸರ್ವೋತ್ಕೃಷ್ಟನೂ, ತಮೋಗುಣಾತೀತನೂ ಪರಾತ್ಮನೂ, ಚತುರ್ದಶಭುವನ ವ್ಯಾಪಿಯೂ, ಶಕ್ತಿತ್ರಯಾತೀತನೂ, ನಿರಂಜನನೂ, ಸಹಸ್ರಶಕ್ತಿಮಯವಾದ ಆಸನದಲ್ಲಿ ಕುಳಿತವನೂ ಆದ ನಿನಗೆ ನಮಸ್ಕಾರವು.

೨೦೩. ತ್ರಿಮೂರ್ತಿಸ್ವರೂಪನೂ, ಅನಂತಸ್ಥಾನಗಳಲ್ಲಿ ಆತ್ಮರೂಪದಿಂದಿರುವವನೂ, ಜಗನ್ನಿವಾಸನೂ, ಜಗನ್ಮಯನೂ, ಜನರ ಹೃದಯದಲ್ಲಿ ವಾಸಿಸುವವನೂ, ಮತ್ತು ನಾಗೇಂದ್ರಹಾರದಿಂದ ಶೋಭಿತನೂ ಆದ ನಿನಗೆ ನಮಸ್ಕಾರವು.

೨೦೪. ಮುನೀಂದ್ರರಿಂದಲೂ, ಸಿದ್ಧಜನರಿಂದಲೂ ಪೂಜಿಸಲ್ಪಟ್ಟ ಪಾದಕಮಲವುಳ್ಳವನೂ, ಐಶ್ವರ್ಯ, ಧರ್ಮಗಳಿಂದ ಪೂರ್ಣವಾದ ಆಸನದಲ್ಲಿ ಕುಳಿತವನೂ, ಉತ್ಕೃಷ್ಟ ವಸ್ತುಗಳ ಸೀಮಾಸ್ವರೂಪನೂ, ಪ್ರಪಂಚಕಾರಣನೂ ಮತ್ತು ಸಹಸ್ರಚಂದ್ರಸೂರ್ಯರಂತೆ ಜ್ವಲಿಸುವ ಅನೇಕ ಮೂರ್ತಿಯುಳ್ಳವನೂ, ಆದ, ನಿನ್ನನ್ನು ವಂದಿಸುವೆನು.

ನಮೋಽಸ್ತು ಸೋಮಾಯ ಸುಮಧ್ಯಮಾಯ
ನಮೋಽಸ್ತು ದೇವಾಯ ಹಿರಣ್ಯಬಾಹೋ ।
ನಮೋಽಗ್ನಿಚಂದ್ರಾರ್ಕವಿಲೋಚನಾಯ
ನಮೋಽಂಬಿಕಾಯಾಃ ಪತಯೇ ಮೃಡಾಯ ॥ ೨೧೫ ॥

ನಮೋಽಸ್ತು ಗುಹ್ಯಾಯ ಗುಹಾಂತರಾಯ
ವೇದಾಂತವಿಜ್ಞಾನವಿನಿಶ್ಚಿತಾಯ ।
ತ್ರಿಕಾಲಹೀನಾಮಲಧಾಮಧಾಮ್ನೇ
ನಮೋ ಮಹೇಶಾಯ ನಮಃ ಶಿವಾಯ ॥ ೨೦೬ ॥

ಏವಂ ಸ್ತುತಃ ಸ ಭಗವಾನ್ ಶೂಲಾಗ್ರಾದವತಾರ್ಯ ತಮ್ ।
ತುಷ್ಟಃ ಪ್ರೋವಾಚ ಹಸ್ತಾಭ್ಯಾಂ ಸ್ಪೃಷ್ಟ್ವಾ ಚ ಪರಮೇಶ್ವರಃ ॥ ೨೦೭ ॥

---

೨೦೫. ಉತ್ತಮವಾದ ಮಧ್ಯಭಾಗವುಳ್ಳ ಪಾರ್ವತಿಯಿಂದ ಕೂಡಿದ ನಿನಗೆ ನಮಸ್ಕಾರವು. ಸುವರ್ಣದಂತೆ ಹೊಳೆಯುವ ಬಾಹುವುಳ್ಳ ನಿನಗೆ ನಮಸ್ಕಾರವು. ಅಗ್ನಿ, ಚಂದ್ರ, ಸೂರ್ಯರೆಂಬ ಮೂರು ನೇತ್ರಗಳುಳ್ಳ ನಿನಗೆ ನಮಸ್ಕಾರವು ಮತ್ತು ಅಂಬಿಕಾಪತಿಯೂ, ಶಂಕರನೂ ಆದ ನಿನಗೆ ನಮಸ್ಕಾರವು.

೨೦೬. ಹೃದಯಗುಹೆಯಲ್ಲಿ ರಹಸ್ಯರೂಪದಿಂದ ವಾಸಮಾಡುವ, ವೇದಾಂತ ವಾಕ್ಯಾರ್ಥ ಅನುಭವದಿಂದ ವೇದ್ಯನಾದ ನಿನಗೆ ನಮಸ್ಕಾರವು. ಕಾಲತ್ರಯದಿಂದ ವರ್ಜಿತನೂ, ನಿರ್ಮಲವಾದ ತೇಜೋರಾಶಿರೂಪನೂ ಮತ್ತು ಮಹೇಶ್ವರನೂ ಆದ ನಿನಗೆ ನಮಸ್ಕಾರವು, ಹಾಗು ಮಂಗಳ ಮೂರ್ತಿಗೆ ನಮಸ್ಕಾರವು.

೨೦೭. ಈ ರೀತಿಯಾಗಿ ಸ್ತುತಿಸಲ್ಪಟ್ಟ, ಪೂಜ್ಯನಾದ ಶಿವನು ಸಂತುಷ್ಟನಾಗಿ ಶೂಲಾಗ್ರದಿಂದ ಅವನನ್ನು ಕೆಳಗೆ ಇಳಿಸಿ ಹಸ್ತಗಳಿಂದ ಮೃದುವಾಗಿ ಸ್ಪರ್ಶಿಸುತ್ತಾ ಹೀಗೆ ಹೇಳಿದನು.

ಪ್ರೀತೋಽಹಂ ಸರ್ವಥಾ ದೈತ್ಯ ಸ್ತವೇನಾನೇನ ಸಾಂಪ್ರತಮ್ ।
ಸಂಪ್ರಾಪ್ಯ ಗಾಣಪತ್ಯಂ ಮೇ ಸನ್ನಿಧಾನೇ ಸದಾ ವಸ　　॥ ೨೦೮ ॥

ಅರೋಗಶ್ಛಿನ್ನಸಂದೇಹೋ ದೇವೈರಪಿ ಸುಪೂಜಿತಃ ।
ನಂದೀಶ್ವರಸ್ಯಾನುಚರಃ ಸರ್ವದುಃಖವಿವರ್ಜಿತಃ　　॥ ೨೦೯ ॥

ಏವಂ ವ್ಯಾಹೃತಮಾತ್ರೇ ತು ದೇವದೇವೇನ ದೇವತಾಃ ।
ಗಣೇಶ್ವರಂ ಮಹಾದೈತ್ಯಮಂಧಕಂ ದೇವಸನ್ನಿಧೌ　　॥ ೨೧೦ ॥

ಸಹಸ್ರಸೂರ್ಯಸಂಕಾಶಂ ತ್ರಿನೇತ್ರಂ ಚಂದ್ರಚಿಹ್ನಿತಮ್ ।
ನೀಲಕಂಠಂ ಜಟಾಮೌಲಿಂ ಶೂಲಾಸಕ್ತಂ ಮಹಾಕರಮ್　　॥ ೨೧೧ ॥

---

೨೦೮. ಅಂಧಕಾಸುರನೇ ! ನೀನು ಮಾಡಿದ ಈ ಸ್ತೋತ್ರಪಾಠದಿಂದ ಈಗ ನಾನು ಸಂಪೂರ್ಣವಾಗಿ ಪ್ರೀತನಾಗಿದ್ದೇನೆ, ನೀನು ಇನ್ನು ಮುಂದೆ ನನ್ನ ಗಣಾಧಿಪತ್ಯವನ್ನು ಹೊಂದಿ ಯಾವಾಗಲೂ ನನ್ನ ಸನ್ನಿಧಿಯಲ್ಲಿ ವಾಸಮಾಡು.

೨೦೯. ನೀರೋಗನೂ, ತೊಲಗಿದ ಸಮಸ್ತ ಸಂದೇಹವುಳ್ಳವನೂ, ದೇವತೆಗಳಿಂದ ಪೂಜ್ಯನೂ, ಸಮಸ್ತ ದುಃಖಗಳಿಂದ ವರ್ಜಿತನೂ ಆಗಿ ನಂದೀಶ್ವರನ ಅನುಚರನಾಗಿರು.

೨೧೦. ದೇವೋತ್ತಮನಾದ ಶಂಕರನಿಂದ ಹೀಗೆ ಹೇಳಲ್ಪಡುತ್ತಿರುವಷ್ಟರಲ್ಲಿ ಮಹಾದೈತ್ಯನಾದ ಅಂಧಕಾಸುರನು ದೇವತಾ ಸನ್ನಿಧಿಯಲ್ಲಿ ಗಣೇಶ್ವರರೂಪದಿಂದ ಇರುವುದನ್ನು ದೇವತೆಗಳು ನೋಡಿದರು.

೨೧೧. ಆ ಗಣೇಶ್ವರನು ಸಹಸ್ರ ಸೂರ್ಯ ಮಂಡಲಗಳಂತೆ ತೇಜಸ್ವಿಯೂ, ಮೂರು ನೇತ್ರಗಳನ್ನು ಧರಿಸಿದವನೂ, ಚಂದ್ರಕಲೆಯಿಂದ ಲಾಂಛಿತನೂ, ಕಪ್ಪಾದ ಕಂಠವುಳ್ಳವನೂ, ಶಿರದಲ್ಲಿ ಜಟಾಭಾರವುಳ್ಳವನೂ, ಕರದಲ್ಲಿ ಶೂಲವನ್ನು ಧರಿಸಿದವನೂ, ಆಗಿ ಪ್ರಕಾಶಿಸಿದನು.

ದೃಷ್ಟ್ವಾ ತಂ ತುಷ್ಟುವುರ್ದೈತ್ಯಮಾಶ್ಚರ್ಯಂ ಪರಮಂ ಗತಾಃ ।
ಉವಾಚ ಭಗವಾನ್ ವಿಷ್ಣುರ್ದೇವದೇವಂ ಸ್ಮಯನ್ನಿವ ॥ ೨೧೨ ॥

ಸ್ಥಾನೇ ತವ ಮಹಾದೇವ ಪ್ರಭಾವಃ ಪುರುಷೋ ಮಹಾನ್ ।
ನೇಕ್ಷತೇ ಜಾತಿಜಾನ್ ದೋಷಾನ್ ಗೃಹ್ಣಾತಿ ಚ ಗುಣಾನಪಿ ॥ ೨೧೩ ॥

ಇತೀರಿತೋಽಥ ಭೈರವೋ ಗಣೇಶದೇವಪುಂಗವಃ
ಸಕೇಶವಃ ಸಹಾಂಧಕೋ ಜಗಾಮ ಶಂಕರಾಂತಿಕಮ್ ।
ನಿರೀಕ್ಷ್ಯ ದೇವಮಾಗತಂ ಸ್ವಶಂಕರಃ ಸಹಾಂಧಕಂ
ಸಮಾಧವಂ ಸಮಾತೃಕಂ ಜಗಾಮ ನಿರ್ವೃತಿಂ ಹರಃ ॥ ೨೧೪ ॥

ಪ್ರಗೃಹ್ಯ ಪಾಣಿನೇಶ್ವರೋ ಹಿರಣ್ಯಲೋಚನಾತ್ಮಜಂ
ಜಗಾಮ ಯತ್ರ ಶೈಲಜಾ ವಿಮಾನಮೀಶವಲ್ಲಭಾ ।
ವಿಲೋಕ್ಯ ಸಾ ಸಮಾಗತಂ ಪತಿಂ ಭವಾರ್ತಿಹಾರಿಣಂ
ಉವಾಚ ಸಾಂಧಕಂ ಸುಖಂ ಪ್ರಸಾದಮಂಧಕಂ ಪ್ರತಿ ॥ ೨೧೫ ॥

---

೨೧೨. ಸಮಸ್ತ ದೇವತೆಗಳು ಗಣೇಶ್ವರರೂಪಿಯಾದ ದೈತ್ಯನನ್ನು ನೋಡಿ ಪರಮಾಶ್ಚರ್ಯವನ್ನು ಹೊಂದಿ ಸ್ತುತಿಮಾಡಿದರು. ಆಗ ಭಗವಂತನಾದ ವಿಷ್ಣುವು ನಗುತ್ತಾ ದೇವೋತ್ತಮನಾದ ಶಂಕರನನ್ನು ಕುರಿತು ಹೇಳಿದನು.

೨೧೩. ಮಹಾದೇವನೇ ! ನಿನ್ನ ಪ್ರಭಾವವು ಅಪಾರವಾದುದು. ನೀನು ಮಹಾಪುರುಷನು. ಇದು ಯುಕ್ತವು : ಮಹಾಪುರುಷನು ಜಾತಿದೋಷಗಳನ್ನು ಗಣಿಸುವುದಿಲ್ಲ, ಮತ್ತು ಗುಣಗಳನ್ನು ಗ್ರಹಿಸುತ್ತಾನೆ.

೨೧೪. ಹೀಗೆಂದು ಹೇಳಲ್ಪಟ್ಟ ಗಣೇಶ್ವರ ಶ್ರೇಷ್ಠನಾದ ಭೈರವಮೂರ್ತಿಯು ವಿಷ್ಣು ಮತ್ತು ಅಂಧಕಾಸುರರೊಡನೆ ಶಂಕರನ ಸನ್ನಿಧಿಗೆ ಹೋದನು. ಆಗ ಸಂಹಾರಕನಾದ ಶಂಕರನು ಅಂಧಕಾಸುರ, ವಿಷ್ಣು ಮತ್ತು ಮಾತೃದೇವತೆಗಳೊಡನೆ ಬಂದಿರುವ ಭೈರವೇಶ್ವರನನ್ನು ನೋಡಿ ಆನಂದವನ್ನು ಹೊಂದಿದನು.

೨೧೫. ಆಗ ಈಶ್ವರನು ಹಿರಣ್ಯಾಕ್ಷನ ಪುತ್ರನಾದ ಅಂಧಕನನ್ನು ಕೈಯಿಂದ ಹಿಡಿದು ತನ್ನ ವಲ್ಲಭೆಯಾದ ಪಾರ್ವತಿಯು ವಾಸಮಾಡುವ ವಿಮಾನ ಶಿಖರಕ್ಕೆ ತೆರಳಿದನು. ಅಲ್ಲಿ ಆ ಪಾರ್ವತಿಯು ಅಂಧಕಾಸುರನೊಡನೆ ಸಂಸಾರ ಪೀಡೆಯನ್ನು ಅಪಹರಿಸುವ ಪತಿಯು ಬಂದಿರುವುದನ್ನು ಕಂಡು ಸುಖವನ್ನೂ, ಅಂಧಕಾಸುರನ ವಿಷಯದಲ್ಲಿ ಪ್ರಸಾದವನ್ನೂ ಪ್ರಕಟಿಸಿದಳು.

ಅಥಾಂಧಕೋ ಮಹೇಶ್ವರೀಂ ದದರ್ಶ ದೇವಪಾರ್ಶ್ವಗಾಂ
ಪಪಾತ ದಂಡವತ್ ಕ್ಷಿತೌ ನನಾಮ ಪಾದಪದ್ಮಯೋಃ ।
ನಮಾಮಿ ದೇವವಲ್ಲಭಾಮನಾದಿಮದ್ರಿಜಾಮಿಮಾಂ
ಯತಃ ಪ್ರಧಾನಪೂರುಷೌ ನಿಹಂತಿ ಯಾಖಿಲಂ ಜಗತ್ ॥ ೨೧೬ ॥

ವಿಭಾತಿ ಯಾ ಶಿವಾಸನೇ ಶಿವೇನ ಸಾಕಮವ್ಯಯಾ
ಹಿರಣ್ಮಯೇಽತಿನಿರ್ಮಲೇ ನಮಾಮಿ ತಾಂ ಹಿಮಾದ್ರಿಜಾಮ್ ।
ಯದಂತರಾಖಿಲಂ ಜಗಜ್ಜಗಂತಿ ಯಾಂತಿ ಸಂಕ್ಷಯಂ
ನಮಾಮಿ ಯತ್ರ ತಾಮುಮಾಮಶೇಷದೋಷವರ್ಜಿತಾಮ್ ॥೨೧೭॥

ನ ಜಾಯತೇ ನ ಹೀಯತೇ ನ ವರ್ಧತೇ ಚ ತಾಮುಮಾಂ
ನಮಾಮಿ ತಾಂ ಗುಣಾತಿಗಾಂ ಗಿರೀಶಪುತ್ರಿಕಾಮಿಮಾಮ್ ।

---

೨೧೬. ಅನಂತರದಲ್ಲಿ ಅಂಧಕಾಸುರನು ಮಹಾದೇವನ ಪಾರ್ಶ್ವದಲ್ಲಿದ್ದ ಪಾರ್ವತೀದೇವಿಯನ್ನು ನೋಡಿ ದಂಡಾಕಾರವಾಗಿ ನೆಲದಲ್ಲಿ ಬಿದ್ದು ಪಾದಪದ್ಮಗಳನ್ನು ವಂದಿಸಿದನು. ಯಾವ ದೇವಿಯು ಪ್ರಧಾನ-ಪುರುಷರನ್ನು ಸೃಷ್ಟಿಸುವಳೋ, ಯಾವ ದೇವಿಯು ಸಮಸ್ತ ಪ್ರಪಂಚವನ್ನು ಸಂಹರಿಸುವಳೋ, ಅಂತಹ ಮಹೇಶ್ವರನ ಸತಿಯೂ, ಅನಾದಿಯೂ ಆದ ಈ ಪಾರ್ವತಿಯನ್ನು ನಮಸ್ಕರಿಸುತ್ತೇನೆ.

೨೧೭. ಯಾವ ಪಾರ್ವತೀದೇವಿಯು ನಿರ್ಮಲವೂ, ಚಿನ್ನದಂತೆ ಹೊಳೆಯುವುದೂ ಆದ ಶಿವನ ಆಸನದಲ್ಲಿ ಶಿವನ ಸಂಗಡ ಸಂತತವಾಗಿ ಪ್ರಕಾಶಿಸುವಳೋ, ಅಂತಹ ಹಿಮಾಲಯ ಪುತ್ರಿಯನ್ನು ನಮಸ್ಕರಿಸುತ್ತೇನೆ. ಯಾವ ದೇವಿಯ ಉದರದಲ್ಲಿ ಸಮಸ್ತ ಪ್ರಪಂಚವು ನಿಂತಿದೆಯೋ, ಯಾವ ದೇವಿಯಲ್ಲಿ ಜಗತ್ತು ಲಯಹೊಂದುವುದೋ, ಅಂತಹ ಸರ್ವದೋಷಶೂನ್ಯಳಾದ ಉಮಾದೇವಿಯನ್ನು ವಂದಿಸುವೆನು.

೨೧೮. ಯಾವ ದೇವಿಯು ಜನ್ಮ-ಹಾನಿ-ವೃದ್ಧಿ ಮುಂತಾದ ವಿಕಾರಗಳಿಂದ ವರ್ಜಿತಳೂ, ಗುಣಾತೀತಳೂ ಆಗಿರುವಳೋ, ಅಂತಹ ಪರ್ವತರಾಜ ಪುತ್ರಿಯನ್ನು

ಕ್ಷಮಸ್ವ ದೇವಿ ಶೈಲಜೇ ಕೃತಂ ಮಯಾ ವಿಮೋಹಿತಂ
ಸುರಾಸುರೈರ್ನಮಸ್ಕೃತಂ ನಮಾಮಿ ತೇ ಪದಾಂಬುಜಮ್ ॥ ೨೧೮ ॥

ಇತ್ಥಂ ಭಗವತೀ ದೇವೀ ಭಕ್ತಿನಮ್ರೇಣ ಪಾರ್ವತೀ ।
ಸಂಸ್ತುತಾ ದೈತ್ಯಪತಿನಾ ಪುತ್ರತ್ವೇ ಜಗೃಹೇಽಂಧಕಮ್ ॥ ೨೧೯ ॥

ತತಃ ಸ ಮಾತೃಭಿಃ ಸಾರ್ಧಂ ಭೈರವೋ ರುದ್ರಸಂಭವಃ ।
ಜಗಾಮ ತ್ವಾಜ್ಞಯಾ ಶಂಭೋಃ ಪಾತಾಲಂ ಪರಮೇಶ್ವರಃ ॥ ೨೨೦ ॥

ಯತ್ರ ಸಾ ತಾಮಸೀ ವಿಷ್ಣೋರ್ಮೂರ್ತಿಃ ಸಂಹಾರಕಾರಿಕಾ ।
ಸಮಾಸ್ತೇ ಹರಿರವ್ಯಕ್ತೋ ನೃಸಿಹ್ಮಾಕೃತಿರೀಶ್ವರಃ ॥ ೨೨೧ ॥

---

ವಂದಿಸುತ್ತೇನೆ. ಹಿಮಾಲಯ ಪುತ್ರಿಯಾದ ಪಾರ್ವತೀದೇವಿಯೇ ! ಅಜ್ಞಾನದಿಂದ ಮಾಡಿರುವ ನನ್ನ ಅಪರಾಧವನ್ನು ಕ್ಷಮಿಸು. ದೇವ-ದಾನವರಿಂದ ವಂದಿಸಲ್ಪಟ್ಟ ನಿನ್ನ ಪದಾಂಬುಜವನ್ನು ನಮಸ್ಕರಿಸುವೆನು.

೨೧೯. ಈ ರೀತಿಯಾಗಿ ಭಕ್ತಿಯಿಂದ ನಮ್ರನಾದ ದೈತ್ಯರಾಜನಿಂದ ಭಗವತಿಯಾದ ಪಾರ್ವತೀದೇವಿಯು ಸ್ತುತಿಸಲ್ಪಟ್ಟವಳಾಗಿ ಆ ಅಂಧಕಾಸುರನನ್ನು ಪುತ್ರನನ್ನಾಗಿ ಭಾವಿಸಿದಳು.

೨೨೦. ತರುವಾಯ ರುದ್ರನಿಂದ ಜನಿಸಿದ ಪರಮೇಶ್ವರನಾದ ಆ ಭೈರವ ಮೂರ್ತಿಯು ಶಂಕರನ ಆಜ್ಞೆಯನ್ನು ಸ್ವೀಕರಿಸಿ ಮಾತೃದೇವತೆಗಳೊಡನೆ ಪಾತಾಳ ಲೋಕವನ್ನು ಸೇರಿದನು.

೨೨೧. ಆ ಪಾತಾಳದಲ್ಲಿ ಸರ್ವ ಸಂಹಾರಕಾರಣವೂ, ತಮೋಗುಣಮಯವೂ ಆದ ವಿಷ್ಣುವಿನ ಮೂರ್ತಿಯು ಸರ್ವ ಸಮರ್ಥವಾದ ನರಸಿಹ್ಮಾಕಾರದಿಂದ ವ್ಯಕ್ತವಾಗಿರುವುದು.

ತತೋಽನಂತಾಕೃತಿಃ ಶಂಭುಃ ಶೇಷೇಣಾಪಿ ಸುಪೂಜಿತಃ ।
ಕಾಲಾಗ್ನಿರುದ್ರೋ ಭಗವಾನ್ ಯುಯೋಜಾತ್ಮಾನಮಾತ್ಮನಿ ॥ ೨೨೨ ॥

ಯುಂಜತಸ್ತಸ್ಯ ದೇವಸ್ಯ ಸರ್ವಾ ಏವಾಥ ಮಾತರಃ ।
ಬುಭುಕ್ಷಿತಾ ಮಹಾದೇವಂ ಪ್ರಣಮ್ಯಾಹುಸ್ತ್ರಿಲೋಚನಮ್ ॥ ೨೨೩ ॥

ಮಾತರ ಊಚುಃ :—

ಬುಭುಕ್ಷಿತಾ ಮಹಾದೇವ ತ್ವಮನುಜ್ಞಾತುಮರ್ಹಸಿ ।
ತ್ರೈಲೋಕ್ಯಂ ಭಕ್ಷಯಿಷ್ಯಾಮೋ ನಾನ್ಯಥಾ ತೃಪ್ತಿರಸ್ತಿ ನಃ ॥ ೨೨೪ ॥

ಏತಾವದುಕ್ತ್ವಾ ವಚನಂ ಮಾತರೋ ವಿಷ್ಣುಸಂಭವಾಃ ।
ಭಕ್ಷಯಾಂಚಕ್ರಿರೇ ಸರ್ವಂ ತ್ರೈಲೋಕ್ಯಂ ಸಚರಾಚರಮ್ ॥ ೨೨೫ ॥

---

೨೨೨. ತರುವಾಯ ಆದಿಶೇಷನಿಂದ ಪೂಜಿಸಲ್ಪಟ್ಟ, ಅನಂತವಾದ ಆಕಾರವುಳ್ಳ, ಸುಖಮಯನಾದ ಮತ್ತು ಭಗವಂತನಾದ ಕಾಲಾಗ್ನಿರುದ್ರನು ತನ್ನ ಆತ್ಮವನ್ನು ಆತ್ಮದಲ್ಲಿರಿಸಿ ಯೋಗತತ್ಪರನಾದನು.

೨೨೩. ಹೀಗೆ ಆ ಕಾಲಾಗ್ನಿರುದ್ರನು ಯೋಗಾಭ್ಯಾಸಪರನಾಗುತ್ತಲಿರಲು ಬುಭುಕ್ಷೆಯಿಂದ ಕೂಡಿದ ಮಾತೃದೇವತೆಗಳು ಮೂರು ಲೋಚನಗಳಿಂದ ಕೂಡಿದ ಮಹಾದೇವನನ್ನು ನಮಸ್ಕರಿಸಿ ಹೇಳಿದರು.

೨೨೪. ಮಾತೃದೇವತೆಗಳು ಹೀಗೆ ಹೇಳಿದರು :— ಮಹಾದೇವನೇ ! ನಾವೆಲ್ಲರೂ ಹಸಿದುಕೊಂಡಿರುತ್ತೇವೆ. ನೀನು ನಮಗೆ ಸಂಮತಿಯನ್ನು ಕೊಡುವನಾಗು. ನಿನ್ನ ಅನುಜ್ಞೆಯಂತೆ ನಾವು ತ್ರಿಲೋಕಗಳನ್ನು ಭಕ್ಷಿಸುತ್ತೇವೆ. ಇನ್ನಾವ ವಿಧದಿಂದಲೂ ನಮಗೆ ತೃಪ್ತಿಯಿಲ್ಲ.

೨೨೫. ಮಹಾವಿಷ್ಣುವಿನಿಂದ ಹುಟ್ಟಿದ ಮಾತೃದೇವತೆಗಳು ಇಷ್ಟು ವಚನವನ್ನು ಹೇಳಿ ಚರ-ಅಚರಪ್ರಾಣಿಗಳಿಂದ ಕೂಡಿದ ಎಲ್ಲಾ ಮೂರು ಲೋಕಗಳನ್ನು ಭಕ್ಷಿಸಿದರು.

ತತಃ ಸ ಭೈರವೋ ದೇವೋ ನೃಸಿಹ್ಮವಪುಷಂ ಹರಿಮ್ ।
ದಧ್ಯಾ ನಾರಾಯಣಂ ದೇವಂ ಪ್ರಣಮ್ಯ ಚ ಕೃತಾಂಜಲಿಃ ॥ ೨೨೬ ॥

ಉಮೇಶಚಿಂತಿತಂ ಜ್ಞಾತ್ವಾ ಕ್ಷಣಾತ್ಪ್ರಾದುರಭೂದ್ಧರಿಃ ।
ವಿಜ್ಞಾಪಯಾಮಾಸ ಚ ತಂ ಭಕ್ಷಯಂತೀಹ ಮಾತರಃ ॥ ೨೨೭ ॥

ನಿವಾರಯಾಶು ತ್ರೈಲೋಕ್ಯಂ ತ್ವದೀಯಾ ಭಗವನ್ನಿತಿ ।
ಸಂಸ್ಮೃತಾ ವಿಷ್ಣುನಾ ದೇವ್ಯೋ ನೃಸಿಹ್ಮವಪುಷಾ ಪುನಃ ।
ಉಪತಸ್ಥುರ್ಮಹಾದೇವಂ ನರಸಿಹ್ಮಾಕೃತಿಂ.ತತಃ ॥ ೨೨೮ ॥

ಸಂಪ್ರಾಪ್ಯ ಸನ್ನಿಧಿಂ ವಿಷ್ಣೋಃ ಸರ್ವಾಃ ಸಂಹಾರಕಾರಿಕಾಃ ।
ಪ್ರದದುಃ ಶಂಭವೇ ಶಕ್ತಿಂ ಭೈರವಾಯಾತಿತೇಜಸೇ ॥ ೨೨೯ ॥

---

೨೨೬. ಆಗ ಆ ಭೈರವಸ್ವಾಮಿಯು ನರಸಿಹ್ಮರೂಪದಿಂದ ಇರುವ, ಸರ್ವಾನರ್ಥಗಳನ್ನು ಅಪಹರಿಸುವ ಶ್ರೀಮನ್ನಾರಾಯಣನನ್ನು ಧ್ಯಾನಿಸಿ ಬದ್ಧಾಂಜಲಿಯಾಗಿ ನಮಸ್ಕರಿಸಿದನು.

೨೨೭. ಆ ಕ್ಷಣದಲ್ಲಿ ಹರಿಯು ಪರಮೇಶ್ವರನಿಂದ ಧ್ಯಾನಿಸಲ್ಪಟ್ಟಂತೆ ತಿಳಿದು ಅಲ್ಲಿ ಪ್ರಾದುರ್ಭವಿಸಿದನು. ಆಗ ಮಾತೃದೇವತೆಗಳು ಜಗತ್ತನ್ನು ಭಕ್ಷಿಸುವ ವಿಷಯವನ್ನು ಭೈರವದೇವನು ವಿಜ್ಞಾಪಿಸಿಕೊಂಡನು.

೨೨೮. ಭಗವಂತನೇ! ನಿನ್ನ ದೇವಿಯರು ತ್ರೈಲೋಕ್ಯವನ್ನು ಭಕ್ಷಿಸುವರು. ಅವರನ್ನು ನೀನು ನಿವಾರಿಸು. ಅನಂತರದಲ್ಲಿ ನರಸಿಹ್ಮರೂಪಿಯಾದ ವಿಷ್ಣುವಿನಿಂದ ಸ್ಮರಿಸಲ್ಪಟ್ಟ ಆ ಮಾತೃದೇವತೆಗಳು ನರಸಿಹ್ಮಾಕಾರದಿಂದ ಶೋಭಿಸುವ ಮಹಾದೇವನಸಮೀಪಕ್ಕೆ ಮತ್ತೆ ಬಂದರು.

೨೨೯. ಸಂಹಾರಕಾರಣರಾದ ಸರ್ವಶಕ್ತಿಗಳು ವಿಷ್ಣುವಿನ ಸನ್ನಿಧಿಗೆ ಬಂದು ಅತಿ ತೇಜಸ್ವಿಯೂ, ಭೈರವಮೂರ್ತಿಯೂ ಆದ ಶಂಕರನಿಗೆ ತಮ್ಮ ಶಕ್ತಿಯನ್ನು ಕೊಟ್ಟರು.

ಅಪಶ್ಯಂಸ್ತಾ ಜಗತ್ಸೂತಿಂ ನೃಸಿಹ್ಮಮತಿಭೈರವಮ್ ।
ಕ್ಷಣಾದೇಕತ್ವಮಾಪನ್ನಂ ಶೇಷಾಹಿಂ ಚಾಪಿ ಮಾತರಃ ॥ ೨೩೦ ॥

ವ್ಯಾಜಹಾರ ಹೃಷೀಕೇಶೋ ಯೇ ಭಕ್ತಾಃ ಶೂಲಪಾಣಯೇ ।
ಯೇ ಚ ಮಾಂ ಸಂಸ್ಮರಂತೀಹ ಪಾಲನೀಯಾಃ ಪ್ರಯತ್ನತಃ ॥ ೨೩೧ ॥

ಮಮೈವ ಮೂರ್ತಿರತುಲಾ ಸರ್ವಸಂಹಾರಕಾರಿಕಾ ।
ಮಹೇಶ್ವರಾಂಗಸಂಭೂತಾ ಭುಕ್ತಿಮುಕ್ತಿಪ್ರದಾಯಿನೀ ॥ ೨೩೨ ॥

ಅನಂತೋ ಭಗವಾನ್ ಕಾಲೋ ದ್ವಿಧಾವಸ್ಥಾ ಮಮೈವ ತು ।
ತಾಮಸೀ ರಾಜಸೀ ಮೂರ್ತಿರ್ದೇವದೇವಶ್ಚತುರ್ಮುಖಃ ॥ ೨೩೩ ॥

---

೨೩೦. ಆಗ ಆ ಮಾತೃದೇವತೆಗಳು ಜಗತ್ಕಾರಣನೂ, ಅತ್ಯಂತ ಭೈರವನೂ ಆದ ನರಸಿಹ್ಮಸ್ವಾಮಿ ಮತ್ತು ಆದಿಶೇಷ ಇವರಿಬ್ಬರೂ ಒಂದು ಕ್ಷಣದಲ್ಲಿ ಐಕ್ಯ ರೂಪವನ್ನು ಹೊಂದಿರುವುದನ್ನು ನೋಡಿದರು.

೨೩೧. ಆಗ ಇಂದ್ರಿಯಪ್ರೇರಕನಾದ ವಿಷ್ಣುವು ತ್ರಿಶೂಲಧಾರಿಯಾದ ಪರಮೇಶ್ವರನ ಭಕ್ತರೂ ಮತ್ತು ಭಕ್ತಿಯಿಂದ ನನ್ನನ್ನು ಸ್ಮರಿಸುವವರೂ ಆದ ಮಾನವರನ್ನು ಪ್ರಯತ್ನದಿಂದ ರಕ್ಷಿಸಬೇಕೆಂದು ಮಾತೃದೇವತೆಗಳಿಗೆ ಹೇಳಿದನು.

೧೩೨. ನಿರುಪಮವೂ, ಸರ್ವಸಂಹಾರಕಾರಣವೂ ಮತ್ತು ಭೋಗ-ಮೋಕ್ಷ ಗಳನ್ನು ಕೊಡುವುದೂ ಆದ ನನ್ನ ಮೂರ್ತಿಯು ಮಹೇಶ್ವರನ ದೇಹದಿಂದ ಜನಿಸಿರುವುದು.

೧೩೩. ಅನಂತ ಮತ್ತು ಪೂಜ್ಯನಾದ ಕಾಲ ಎಂಬುದಾಗಿ ನನ್ನ ಅಂಶಗಳು ಎರಡು ಮೂರ್ತಿಗಳಾಗಿರುವುವು. ಈ ಎರಡು ಅವಸ್ಥೆಗಳೂ ತಮೋಗುಣದಿಂದ ಪೂರ್ಣವಾಗಿವೆ. ದೇವದೇವನಾದ ಚತುರ್ಮುಖನು ನನ್ನ ರಜೋಗುಣದ ಮೂರ್ತಿಯಾಗಿರುವನು.

ಸೋಽಹಂ ದೇವೋ ದುರಾಧರ್ಷಃ ಕಾಲೋ ಲೋಕಪ್ರಕಾಲನಃ ।
ಭಕ್ಷಯಿಷ್ಯಾಮಿ ಕಲ್ಪಾಂತೇ ರೌದ್ರೇಣ ನಿಖಿಲಂ ಜಗತ್ ॥ ೨೩೪ ॥

ಯಾ ಯಾ ವಿಮೋಹನೀ ಮೂರ್ತಿರ್ಮಮ ನಾರಾಯಣಾಹ್ವಯಾ ।
ಸತ್ತ್ವೋದ್ರಿಕ್ತಾ ಜಗತ್ಸರ್ವಂ ಸಂಸ್ಥಾಪಯತಿ ನಿತ್ಯದಾ ॥ ೨೩೫ ॥

ಸ ವಿಷ್ಣುಃ ಪರಮಂ ಬ್ರಹ್ಮ ಪರಮಾತ್ಮಾ ಪರಾ ಗತಿಃ ।
ಮೂಲಪ್ರಕೃತಿರವ್ಯಕ್ತಾ ಸದಾನಂದೇತಿ ಕಥ್ಯತೇ ॥ ೨೩೬ ॥

ಇತ್ಯೇವಂ ಬೋಧಿತಾ ದೇವ್ಯೋ ವಿಷ್ಣುನಾ ವಿಷ್ಣುಮಾತರಃ ।
ಪ್ರಪೇದಿರೇ ಮಹಾದೇವಂ ತಮೇವ ಶರಣಂ ಪರಮ್ ॥ ೨೩೭ ॥

---

೨೩೪. ಆ ನಾನು ಲೋಕಗಳನ್ನು ಜೀರ್ಣಮಾಡುವ, ಪರರಿಂದ ತಡೆಯಲಾಗದ ಕಾಲದೇವನೆಂಬ ರೌದ್ರರೂಪದಿಂದ ಕಲ್ಪಾಂತಕಾಲದಲ್ಲಿ ಸಮಸ್ತ ಜಗತ್ತನ್ನೂ ಭಕ್ಷಿಸುತ್ತೇನೆ.

೨೩೫. ನನ್ನ ಮೋಹಕವಾದ ಮೂರ್ತಿಯು ನಾರಾಯಣ ಎಂಬ ಸಂಜ್ಞಾಂಕಿತವೂ, ಸತ್ವಗುಣಪೂರ್ಣವೂ ಆಗಿ ಸಂತತವಾಗಿ ಸಮಸ್ತ ಜಗತ್ತನ್ನು ಪಾಲಿಸುತ್ತದೆ.

೨೩೬. ಆ ಮಹಾವಿಷ್ಣುವು ಪರಬ್ರಹ್ಮ-ಪರಮಾತ್ಮ-ಪರಮಗತಿ-ಅತೀಂದ್ರಿಯವಾದ ಮೂಲಪ್ರಕೃತಿ ಮತ್ತು ಸದಾನಂದ ಮುಂತಾದ ಅನೇಕ ಸಂಜ್ಞಾಶಬ್ದಗಳಿಂದ ನಿರ್ದೇಶಿಸಲ್ಪಡುವನು.

೨೩೭. ಈ ರೀತಿಯಾಗಿ ವಿಷ್ಣುವಿನಿಂದ ಬೋಧಿಸಲ್ಪಟ್ಟ, ವಿಷ್ಣುವಿನಿಂದ ಜನಿಸಿದ ಮಹಾದೇವಿಯರು ಸರ್ವೋತ್ತಮನಾದ ಆ ಮಹಾದೇವನನ್ನೇ ಶರಣು ಹೊಂದಿದರು.

ಏತದ್ವಃ ಕಥಿತಂ ಸರ್ವಂ ಮಯಾಂಧಕನಿಷೂದನಮ್ ।
ಮಾಹಾತ್ಮ್ಯಂ ದೇವದೇವಸ್ಯ ಭೈರವಸ್ಯಾಮಿತೌಜಸಃ ॥ ೨೩೮ ॥

ಇತಿ ಶ್ರೀ ಕೂರ್ಮಪುರಾಣೇ ಷೋಡಶೋಽಧ್ಯಾಯಃ]

---

೨೩೮. ವಿಪ್ರರೇ ! ಈ ರೀತಿಯಾಗಿ ಅಂಧಕಾಸುರನನ್ನು ಸಂಹರಿಸಿದ ಅಪಾರಮಹಿಮೆಯುಳ್ಳವನೂ, ದೇವೋತ್ತಮನೂ ಆದ ಭೈರವಮೂರ್ತಿಯ ಸಮಸ್ತ ಮಾಹಾತ್ಮ್ಯವು ನನ್ನಿಂದ ನಿಮಗೆ ಉಪದೇಶಿಸಲ್ಪಟ್ಟಿದೆ.

(ಕೂರ್ಮಪುರಾಣದಲ್ಲಿ ಹದಿನಾರನೆಯ ಅಧ್ಯಾಯವು ಸಮಾಪ್ತವು)



ಶ್ರೀಃ

# ಕೂರ್ಮಪುರಾಣಂ

## ಸಪ್ತದಶೋಽಧ್ಯಾಯಃ

### ( ತ್ರಿವಿಕ್ರಮಚರಿತಮ್ )

ಸೂತ ಉವಾಚ :—

ಅಂಧಕೇ ನಿಗೃಹೀತೇ ವೈ ಪ್ರಹ್ರಾದಸ್ಯ ಮಹಾತ್ಮನಃ ।
ವಿರೋಚನೋ ನಾಮ ಬಲೀ ಬಭೂವ ನೃಪತಿಃ ಸುತಃ ॥ ೧ ॥

ದೇವಾನ್ ಜಿತ್ವಾ ಸದೇವೇಂದ್ರಾನ್ ಬಹೂನ್ ವರ್ಷಾನ್ ಮಹಾಸುರಃ।
ಪಾಲಯಾಮಾಸ ಧರ್ಮೇಣ ತ್ರೈಲೋಕ್ಯಂ ಸಚರಾಚರಮ್ ॥ ೨ ॥

---

## ಹದಿನೇಳನೆಯ ಅಧ್ಯಾಯವು

೧. ಸೂತಮುನಿಯು ಇಂತೆಂದನು—ಈ ರೀತಿಯಾಗಿ ಅಂಧಕಾಸುರನು ನಿಗ್ರಹಿಸಲ್ಪಡಲಾಗಿ ಮಹಾತ್ಮನಾದ ಪ್ರಹ್ರಾದನಿಗೆ ವಿರೋಚನನೆಂಬ ಬಲಿಷ್ಠನಾದ ರಾಜನು ಪುತ್ರನಾಗಿದ್ದನು.

೨. ಆ ವಿರೋಚನನೆಂಬ ಮಹಾಸುರನು ದೇವೇಂದ್ರನು ಆದಿಯಾದ ಸಕಲ ದೇವತೆಗಳನ್ನು ಜಯಿಸಿ ಚರ-ಅಚರ ಪ್ರಾಣಿಗಳಿಂದ ಕೂಡಿದ ತ್ರೈಲೋಕ್ಯವನ್ನು ಬಹು ವರ್ಷಗಳವರೆಗೆ ಧರ್ಮದಿಂದ ಪಾಲಿಸಿದನು.

ತಸ್ಯೈವಂ ವರ್ತಮಾನಸ್ಯ ಕದಾಚಿದ್ವಿಷ್ಣುಚೋದಿತಃ ।
ಸನತ್ಕುಮಾರೋ ಭಗವಾನ್ ಪುರಂ ಪ್ರಾಪ ಮಹಾಮುನಿಃ ॥ ೩ ॥

ಗತ್ವಾ ಸಿಹ್ಮಾಸನಗತೋ ಬ್ರಹ್ಮಪುತ್ರಂ ಮಹಾಸುರಃ ।
ನನಾಮೋತ್ಥಾಯ ಶಿರಸಾ ಪ್ರಾಂಜಲಿರ್ವಾಕ್ಯಮಬ್ರವೀತ್ ॥ ೪ ॥

ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಸಂಪ್ರಾಪ್ತೋ ಮೇ ಪುರೋತ್ತಮಮ್
ಯೋಗೀಶ್ವರೋಽದ್ಯ ಭಗವಾನ್ ಯತೋಽಸೌ ಬ್ರಹ್ಮವಿತ್ ಸ್ವಯಮ್

ಕಿಮರ್ಥಮಾಗತೋ ಬ್ರಹ್ಮನ್ ಸ್ವಯಂ ದೇವಃ ಪಿತಾಮಹಃ ।
ಬ್ರೂಹಿ ಮೇ ಬ್ರಹ್ಮಣಃ ಪುತ್ರ ಕಿಂ ಕಾರ್ಯಂ ಕರವಾಣ್ಯಹಮ್ ॥ ೬ ॥

---

೩. ವಿರೋಚನಾಸುರನು ಈ ಸದ್ವೃತ್ತದಿಂದ ಇರುತ್ತಿರಲು ಸರ್ವಜ್ಞನಾದ ಸನತ್ಕುಮಾರ ಮುನಿಯು ವಿಷ್ಣುವಿನಿಂದ ಪ್ರೇರಿಸಲ್ಪಟ್ಟವನಾಗಿ ಅವನ ನಗರಕ್ಕೆ ಬಂದನು.

೪. ಆಗ ಸಿಹ್ಮಾಸನಾರೂಢನಾಗಿ ಕುಳಿತಿದ್ದ ಮಹಾಸುರನು ಬ್ರಹ್ಮಪುತ್ರನಾದ ಸನತ್ಕುಮಾರ ಮುನಿಯ ಬಳಿಗೆ ಹೋಗಿ ತಲೆಬಾಗಿ ನಮಸ್ಕರಿಸಿ ಮೇಲೆದ್ದು ಕೃತಾಂಜಲಿಯಾಗಿ ನಿಂತು ಮಾತನಾಡಿದನು.

೫. ಬ್ರಹ್ಮರ್ಷಿಯೇ! ಯೋಗೀಶ್ವರನೂ, ಬ್ರಹ್ಮಜ್ಞಾನಿಯೂ, ಮತ್ತು ಭಗವಂತನೂ ಆದ ನೀನು ತಾನಾಗಿ ನನ್ನ ಶ್ರೇಷ್ಠವಾದ ನಗರಕ್ಕೆ ಬಂದಿರುವುಗರಿಂದ ನಾನು ಧನ್ಯನೂ, ಕೃತಕೃತ್ಯನೂ ಆಗಿರುವೆನು.

೬. ಬ್ರಹ್ಮರ್ಷಿಯೇ! ಬ್ರಹ್ಮದೇವರೂಪಿಯಾದ ನೀನು ಏಕೆ ಇಲ್ಲಿಗೆ ಬಂದಿರುತ್ತೀ? ಬ್ರಹ್ಮಪುತ್ರನೆ! ಅದನ್ನು ಹೇಳು. ನಾನು ನಿನ್ನ ಯಾವ ಕರ್ತವ್ಯವನ್ನು ಮಾಡಲಿ?

ಸೋಽಬ್ರವೀದ್ಭಗವಾನ್ ದೇವೋ ಧರ್ಮಯುಕ್ತಂ ಮಹಾಸುರಮ್ ।
ದ್ರಷ್ಟುಮಭ್ಯಾಗತೋಽಹಂ ವೈ ಭವಂತಂ ಭಾಗ್ಯವಾನಸಿ ॥ ೭ ॥

ಸುದುರ್ಲಭಾ ನೀತಿರೇಷಾ ದೈತ್ಯಾನಾಂ ದೈತ್ಯಸತ್ತಮ ।
ತ್ರಿಲೋಕೇ ಧಾರ್ಮಿಕೋ ನೂನಂ ತ್ವಾದೃಶೋಽನ್ಯೋ ನ ವಿದ್ಯತೇ ॥೮॥

ಇತ್ಯುಕ್ತೋಽಸುರರಾಜೋಽಸೌ ಪುನಃ ಪ್ರಾಹ ಮಹಾಮುನಿಮ್ ।
ಧರ್ಮಾಣಾಂ ಪರಮಂ ಧರ್ಮಂ ಬ್ರೂಹಿ ಮೇ ಬ್ರಹ್ಮವಿತ್ತಮ ॥ ೯ ॥

ಸೋಽಬ್ರವೀದ್ಭಗವಾನ್ ಯೋಗೀ ದೈತ್ಯೇಂದ್ರಾಯ ಮಹಾತ್ಮನೇ ।
ಸರ್ವಗುಹ್ಯತಮಂ ಧರ್ಮಮಾತ್ಮಜ್ಞಾನಮನುತ್ತಮಮ್ ॥ ೧೦ ॥

---

೭. ಷಡ್ಗುಣೈಶ್ವರ್ಯಸಂಪನ್ನನಾದ ಆ ಬ್ರಹ್ಮರ್ಷಿಯು ಹೀಗೆಂದು ಉತ್ತರ ಕೊಟ್ಟನು—ಧಾರ್ಮಿಕೋತ್ತಮನೂ, ಮಹಾಸುರನೂ ಆದ ನಿನ್ನನ್ನು ನೋಡಲು ನಾನು ಬಂದಿರುವೆನು. ನೀನು ಭಾಗ್ಯಶಾಲಿಯಾಗಿದ್ದೀ.

೮. ದೈತ್ಯಪುಂಗವನೆ! ಶ್ಲಾಘ್ಯವಾದ ಈ ನೀತಿಯು ದೈತ್ಯರಾಗಿ ಜನಿಸಿದವರಿಗೆ ಬಹು ದುರ್ಲಭವಾದುದು. ಮೂರು ಲೋಕಗಳಲ್ಲಿಯೂ ನಿನ್ನಂತಹ ಧಾರ್ಮಿಕೋತ್ತಮನು ಬೇರೊಬ್ಬನು ದೊರೆಯುವುದಿಲ್ಲ.

೯. ಮುನಿಯಿಂದ ಈ ರೀತಿಯಾಗಿ ಹೇಳಲ್ಪಟ್ಟ ದೈತ್ಯರಾಜನು ಮತ್ತೆ ಮಹಾಮುನಿಯ ಸಂಗಡ ಹೇಳಿದನು. ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಮುನಿಯೇ! ಧರ್ಮಗಳಲ್ಲಿ ಉತ್ತಮವಾದ ಧರ್ಮವನ್ನು ನನಗೆ ಬೋಧಿಸು.

೧೦. ಆಗ ಭಗವಂತನಾದ ಸನತ್ಕುಮಾರ ಯೋಗಿಯು ಮಹಾತ್ಮನಾದ ಆ ದೈತ್ಯೇಶ್ವರನಿಗೆ ಎಲ್ಲಕ್ಕಿಂತಲೂ ಅತಿರಹಸ್ಯವಾದ ಆತ್ಮಜ್ಞಾನವನ್ನು ನಿರುಪಮ ಧರ್ಮವೆಂದು ಉಪದೇಶಿಸಿದನು.

ಸ ಲಬ್ಧ್ವಾ ಪರಮಂ ಜ್ಞಾನಂ ದತ್ವಾ ಚ ಗುರುದಕ್ಷಿಣಾಮ್ ।
ನಿಧಾಯ ಪುತ್ರೇ ತದ್ರಾಜ್ಯಂ ಯೋಗಾಭ್ಯಾಸರತೋಽಭವತ್ ॥ ೧೧ ॥

ಸ ತಸ್ಯ ಪುತ್ರೋ ಮತಿಮಾನ್ ಬಲಿರ್ನಾಮ ಮಹಾಸುರಃ ।
ಬ್ರಹ್ಮಣ್ಯೋ ಧಾರ್ಮಿಕೋಽತ್ಯರ್ಥಂ ವಿಜಿಗ್ಯೇಽಥ ಪುರಂದರಮ್ ॥೧೨॥

ಕೃತ್ವಾ ತೇನ ಮಹದ್ಯುದ್ಧಂ ಶಕ್ರಃ ಸರ್ವಾಮರೈರ್ವೃತಃ ।
ಜಗಾಮ ನಿರ್ಜಿತೋ ವಿಷ್ಣುಂ ದೇವಂ ಶರಣಮಚ್ಯುತಮ್ ॥ ೧೩ ॥

ತದಂತರೇ ದಿತಿರ್ದೇವೀ ದೇವಮಾತಾ ಸುದುಃಖಿತಾ ।
ದೈತ್ಯೇಂದ್ರಾಣಾಂ ವಧಾರ್ಥಾಯ ಪುತ್ರೋ ಮೇ ಸ್ಯಾದಿತಿ ಸ್ವಯಮ್೧೪

---

೧೧. ತರುವಾಯ ಆ ವಿರೋಚನಾಸುರನು ಪರಮವಾದ ಆತ್ಮಜ್ಞಾನವನ್ನು ಹೊಂದಿ ಗುರುವಿಗೆ ಗುರುದಕ್ಷಿಣೆಯನ್ನು ಕೊಟ್ಟು ಆ ರಾಜ್ಯವನ್ನು ತನ್ನ ಪುತ್ರನಲ್ಲಿ ಒಪ್ಪಿಸಿ ತಾನು ಯೋಗಾಭ್ಯಾಸದಲ್ಲಿ ನಿರತನಾದನು.

೧೨. ವಿವೇಕಿಯೂ ಬ್ರಹ್ಮನಿಷ್ಠನೂ ಪರಮಧಾರ್ಮಿಕನೂ ಆದ ವಿರೋಚನಾ ಸುರನ ಪುತ್ರನಾದ ಬಲಿ ಎಂಬ ಮಹಾಸುರನು ಬಲಿಷ್ಠನಾಗಿ ರಾಜ್ಯಭಾರವನ್ನು ಮಾಡುತ್ತ ದೇವೇಂದ್ರನನ್ನು ಜಯಿಸಿದನು.

೧೩. ದೇವೇಂದ್ರನು ಸಮಸ್ತ ದೇವಸೈನ್ಯದಿಂದ ಕೂಡಿಬಂದು ಬಲಿರಾಜ ನೊಡನೆ ಮಹಾಯುದ್ಧವನ್ನು ಮಾಡಿ ಬಲಿಯಿಂದ ಪರಾಜಯವನ್ನು ಹೊಂದಿ ಚ್ಯುತಿರಹಿತನಾದ ಮಹಾವಿಷ್ಣುವನ್ನು ಶರಣುಹೊಂದಿದನು.

೧೪. ಈ ಸಮಯದಲ್ಲಿ ದೇವತೆಗಳ ಜನನಿಯಾನ ಅದಿತಿ ದೇವಿಯು ಬಹಳ ದುಃಖಗೊಂಡವಳಾಗಿ ದೈತ್ಯೇಂದ್ರರನ್ನು ಸಂಹರಿಸಲು ಶಕ್ತನಾದ ಪುತ್ರನು ತನ್ನಲ್ಲಿ ಹುಟ್ಟಬೇಕೆಂದು ಸಂಕಲ್ಪಿಸಿದಳು.

ತತಾಪ ಸುಮಹಾಘೋರಂ ತಪೋರಾಶಿಂ ತತಃ ಪರಮ್ ।
ಪ್ರಪನ್ನಾ ವಿಷ್ಣುಮವ್ಯಕ್ತಂ ಶರಣ್ಯಂ ಶರಣಂ ಹರಿಮ್ ॥ ೧೫ ॥

ಕೃತ್ವಾ ಹೃತ್ಪದ್ಮಕಿಂಜಲ್ಕೇ ನಿಷ್ಕಲಂ ಪರಮಂ ಪದಮ್ ।
ವಾಸುದೇವಮನಾದ್ಯಂತಮಾನಂದಂ ವ್ಯೋಮ ಕೇವಲಮ್ ॥ ೧೬ ॥

ಪ್ರಪನ್ನೋ ಭಗವಾನ್ ವಿಷ್ಣುಃ ಶಂಖಚಕ್ರಗದಾಧರಃ ।
ಆವಿರ್ಬಭೂವ ಯೋಗಾತ್ಮಾ ದೇವಮಾತುಃ ಪುರೋ ಹರಿಃ ॥ ೧೭ ॥

ದೃಷ್ಟ್ವಾ ಸಮಾಗತಂ ವಿಷ್ಣುಮದಿತಿರ್ಭಕ್ತಿಸಂಯುತಾ ।
ಮೇನೇ ಕೃತಾರ್ಥಮಾತ್ಮಾನಂ ತೋಷಯಾಮಾಸ ಕೇಶವಮ್ ॥೧೮॥

---

೧೫. ತರುವಾಯ ಅದಕ್ಕೋಸ್ಕರ ಅತ್ಯಂತ ಘೋರವಾದ ಉತ್ಕೃಷ್ಟ ತಪಸ್ಸನ್ನು ರಾಶಿರೂಪವಾಗಿ ಆಚರಿಸಿದಳು. ಆ ತಪೋನಿಷ್ಠೆಯಲ್ಲಿ ಅವ್ಯಕ್ತನೂ, ಭಕ್ತಶರಣನೂ ಮತ್ತುಅನರ್ಥನಿವಾರಕನೂ ಆದ ಮಹಾವಿಷ್ಣುವಿಗೆ ಶರಣಾಗತಳಾದಳು.

೧೬. ಅದಿತಿದೇವಿಯು ತನ್ನ ಹೃದಯಕಮಲದ ಕರ್ಣಿಕೆಯೆಂಬ ಪರಮ ಪದವಿಯಲ್ಲಿ ಆದ್ಯಂತರಹಿತನೂ, ಆನಂದರೂಪಿಯೂ,ಆಕಾಶದಂತೆ ಪರಮಸೂಕ್ಷ್ಮನೂ, ಅದ್ವಿತೀಯನೂ ಆದ ವಾಸುದೇವನನ್ನು ಧ್ಯಾನಿಸಿದಳು.

೧೭. ಆಗ ಯೋಗೇಶ್ವರನೂ ಪಾಪಭಂಜಕನೂ ಆದ ಭಗವಂತನಾದ ಮಹಾ ವಿಷ್ಣುವು ಪ್ರಸನ್ನನಾಗಿ ಶಂಕ-ಚಕ್ರ-ಗದಾಧಾರಿಯಾಗಿ ದೇವತೆಗಳ ಮಾತೆಯಾದ ಅದಿತಿಯ ಮುಂದೆ ಆವಿರ್ಭಾವಹೊಂದಿದನು.

೧೮. ಹೀಗೆ ಮಹಾವಿಷ್ಣುವು ತನ್ನ ಸಮೀಪಕ್ಕೆ ಬಂದಿರುವುದನ್ನು ನೋಡಿ ಭಕ್ತಿಯಿಂದ ಕೂಡಿದ ಅದಿತಿದೇವಿಯು ಪುರುಷೋತ್ತಮನ ದರ್ಶನದಿಂದ ತನ್ನನ್ನು ಕೃತಾರ್ಥಳನ್ನಾಗಿ ಭಾವಿಸುತ್ತ ಕೇಶವನನ್ನು ಸಂತೋಷಪಡಿಸಿದಳು.

**ಅದಿತಿರುವಾಚ :—**

ಜಯಾಶೇಷದುಃಖೌಘನಾಶೈಕಹೇತೋ
ಜಯಾನಂತಮಾಹಾತ್ಮ್ಯಯೋಗಾಭಿಯುಕ್ತ ।
ಜಯಾನಾದಿಮಧ್ಯಾಂತವಿಜ್ಞಾನಮೂರ್ತೇ
ಜಯಾಕಾಶಕಲ್ಪಾಮಲಾನಂದರೂಪ ॥ ೧೯ ॥

ನಮೋ ವಿಷ್ಣವೇ ಕಾಲರೂಪಾಯ ತುಭ್ಯಂ
ನಮೋ ನಾರಸಿಹ್ಮಾಯ ಶೇಷಾಯ ತುಭ್ಯಮ್ ।
ನಮಃ ಕಾಲರುದ್ರಾಯ ಸಂಹಾರಕರ್ತ್ರೇ
ನಮೋ ವಾಸುದೇವಾಯ ತುಭ್ಯಂ ನಮಸ್ತೇ ॥ ೨೦ ॥

ನಮೋ ವಿಶ್ವಮಾಯಾವಿಧಾನಾಯ ತುಭ್ಯಂ
ನಮೋ ಯೋಗಗಮ್ಯಾಯ ಸತ್ಯಾಯ ತುಭ್ಯಮ್ ।
ನಮೋ ಧರ್ಮವಿಜ್ಞಾನನಿಷ್ಠಾಯ ತುಭ್ಯಂ
ನಮಸ್ತೇ ವರಾಹಾಯ ಭೂಯೋ ನಮಸ್ತೇ ॥ ೨೧ ॥

---

೧೯. ಅದಿತಿ ದೇವಿಯು ಹೀಗೆಂದು ಸ್ತುತಿಸಿದಳು—ಸಮಸ್ತ ಜನರ ದುಃಖ ರಾಶಿಯನ್ನು ನಾಶಮಾಡುವ ಅಸಹಾಯಕಾರಣ ಮೂರ್ತಿಯೆ! ಅಪಾರವಾದ ಮಾಹಾತ್ಮ್ಯಯೋಗದಿಂದ ಪರಿಪೂರ್ಣನೆ! ಆದಿ-ಮಧ್ಯ-ಅಂತಗಳಿಂದ ರಹಿತನಾದ ಜ್ಞಾನಮಯ ಮೂರ್ತಿಯೆ! ನೀನು ಜಯಶಾಲಿಯಾಗು.

೨೦. ಪ್ರಲಯಕಾಲದಲ್ಲಿ ಮೃತ್ಯುರೂಪವನ್ನು ಪರಿಗ್ರಹಿಸಿದ ನಿನಗೆ ವಂದನೆಯು. ನರಸಿಹ್ಮ-ಆದಿಶೇಷರ ವಿಗ್ರಹವನ್ನು ಸ್ವೀಕರಿಸುವ ನಿನಗೆ ನಮಸ್ಕಾರವು. ಸಂಹಾರಕರ್ಮವನ್ನು ನಡೆಸುವ ಕಾಲರುದ್ರಮೂರ್ತಿಯಾದ ನಿನಗೆ ನಮಸ್ಕಾರವು. ಮತ್ತು ವಾಸುದೇವ ಪರಮಾತ್ಮ ಸ್ವರೂಪಿಯಾದ ನಿನ್ನನ್ನು ನಮಸ್ಕರಿಸುವೆನು.

೨೧. ಮತ್ತು ಪ್ರಪಂಚಮಾಯೆಯನ್ನು ರಚಿಸುವ ಮಾಯಾವಿಯಾದ ನಿನಗೆ ನಮಸ್ಕಾರವು. ಯೋಗಾಭ್ಯಾಸದಿಂದ ಗಮ್ಯನಾದ ಸತ್ಯಸ್ವರೂಪನಾದ ನಿನಗೆ ವಂದನೆಯು. ಧರ್ಮ-ಜ್ಞಾನಮಾರ್ಗಗಳಲ್ಲಿ ಪ್ರತಿಷ್ಠಿತನಾದ ನಿನಗೆ ಪ್ರಣಾಮವು. ಮತ್ತು ದೈತ್ಯಸಂಹಾರಕ್ಕೆ ಆದಿವರಾಹರೂಪದಿಂದ ಅವತರಿಸಿದ ನಿನ್ನನ್ನು ವಂದಿಸುವೆನು.

ನಮಸ್ತೇ ಸಹಸ್ರಾರ್ಕಚಂದ್ರಾಭಮೂರ್ತೇ
ನಮೋ ವೇದವಿಜ್ಞಾನಧರ್ಮಾಭಿಗಮ್ಯ ।
ನಮೋ ಭೂಧರಾಯಾಪ್ರಮೇಯಾಯ ತುಭ್ಯಂ
ಪ್ರಭೋ ವಿಶ್ವಯೋನೇಽಥ ಭೂಯೋ ನಮಸ್ತೇ ॥ ೨೨ ॥

ನಮಃ ಶಂಭವೇ ಸತ್ಯನಿಷ್ಠಾಯ ತುಭ್ಯಂ
ನಮೋ ಹೇತವೇ ವಿಶ್ವರೂಪಾಯ ತುಭ್ಯಮ್ ।
ನಮೋ ಯೋಗಪೀಠಾಂತರಸ್ಥಾಯ ತುಭ್ಯಂ
ಶಿವಾಯೈಕರೂಪಾಯ ಭೂಯೋ ನಮಸ್ತೇ ॥ ೨೩ ॥

ಏವಂ ಸ ಭಗವಾನ್ ವಿಷ್ಣುರ್ದೇವಮಾತ್ರಾ ಜಗನ್ಮಯಃ ।
ತೋಷಿತಶ್ಛಂದಯಾಮಾಸ ವರೇಣ ಪ್ರಹಸನ್ನಿವ ॥ ೨೪ ॥

---

೨೨. ಸಹಸ್ರಾರು ಸೂರ್ಯ-ಚಂದ್ರರಂತೆ ಅಧಿಕವಾದ ಪ್ರಭಾಮಯಮೂರ್ತಿಯುಳ್ಳ ನಿನಗೆ ನಮಸ್ಕಾರವು. ವೈದಿಕವಾದ ಧರ್ಮ-ಜ್ಞಾನನಿಷ್ಠೆಗಳಿಂದ ಗಮ್ಯನಾದ ನಿನಗೆ ಪ್ರಣಾಮವು. ಭೂಮಿಯನ್ನು ಧರಿಸಿ ಗಣನಾತೀತವಾದ ಮಹಿಮೆಯನ್ನು ತೋರಿಸಿದ ನಿನಗೆ ವಂದನೆಯು. ಪ್ರಭುವೂ ವಿಶ್ವಕಾರಣನೂ ಆದ ಸ್ವಾಮಿಯೇ ! ನಿನ್ನನ್ನು ಪುನಃಪುನಃ ನಮಸ್ಕರಿಸುವೆನು.

೨೩. ಸುಖಹೇತುವೂ, ಸತ್ಯನಿಷ್ಠನೂ ಆದ ನಿನಗೆ ನಮಸ್ಕಾರವು. ಸರ್ವಕಾರಣನೂ, ವಿಶ್ವರೂಪಿಯೂ ಆದ ನಿನಗೆ ನಮಸ್ಕಾರವು. ಯೋಗಪೀಠಗಳ ಮಧ್ಯದಲ್ಲಿ ವಾಸಿಸುವ ನಿನಗೆ ನಮಸ್ಕಾರವು. ಅದ್ವಿತೀಯ ಕಲ್ಯಾಣರೂಪಿಯಾದ ನಿನ್ನನ್ನು ಮತ್ತೆ ಮತ್ತೆ ವಂದಿಸುವೆನು.

೨೪. ಈ ರೀತಿಯಾಗಿ ವಿಶ್ವಮೂರ್ತಿಯಾದ ವಿಷ್ಣುಪರಮಾತ್ಮನು ದೇವಜನನಿಯಾದ ಅದಿತಿಯಿಂದ ಸ್ತುತಿಸಲ್ಪಟ್ಟು ಪ್ರಸನ್ನನಾಗಿ ನಸುನಗುತ್ತ ವರವನ್ನು ನೀಡಿ ಅದಿತಿದೇವಿಯನ್ನು ತೃಪ್ತಿಪಡಿಸಿದನು.

ಪ್ರಣಮ್ಯ ಶಿರಸಾ ಭೂಮೌ ಸಾ ವವ್ರೇ ವರಮುತ್ತಮಮ್ ।
ತ್ವಾಮೇವ ಪುತ್ರಂ ದೇವಾನಾಂ ಹಿತಾಯ ವರಯೇ ವರಮ್ ॥ ೨೫ ॥

ತಥಾಸ್ತ್ವಿತ್ಯಾಹ ಭಗವಾನ್ ಪ್ರಪನ್ನಜನವತ್ಸಲಃ ।
ದತ್ವಾ ವರಾನಪ್ರಮೇಯಸ್ತತ್ರೈವಾಂತರಧೀಯತ ॥ ೨೬ ॥

ತತೋ ಬಹುತಿಥೇ ಕಾಲೇ ಭಗವಂತಂ ಜನಾರ್ದನಮ್ ।
ದಧಾರ ಗರ್ಭಂ ದೇವಾನಾಂ ಮಾತಾ ನಾರಾಯಣಂ ಸ್ವಯಮ್ ॥೨೭॥

ಸಮಾವಿಷ್ಟೇ ಹೃಷೀಕೇಶೇ ದೇವಮಾತುರಥೋದರಮ್ ।
ಉತ್ಪಾತಾ ಜಜ್ಞಿರೇ ಘೋರಾ ಬಲೇರ್ವೈರೋಚನೇಃ ಪುರೇ ॥ ೨೮ ॥

---

೨೫. ಆಗ ಅದಿತಿದೇವಿಯು ತಲೆಬಾಗಿ ನೆಲದಲ್ಲಿ ಬಿದ್ದು ನಮಸ್ಕರಿಸಿ ದೇವತೆಗಳ ಹಿತಕ್ಕೋಸ್ಕರ ನೀನೇ ನನ್ನ ಪುತ್ರನಾಗಿ ಜನಿಸಬೇಕೆಂಬುದಾಗಿ ಉತ್ತಮವಾದ ವರವನ್ನು ಪ್ರಾರ್ಥಿಸಿದಳು.

೨೬. ಶರಣಾಗತ ಜನರಲ್ಲಿ ವಾತ್ಸಲ್ಯವನ್ನು ತೋರುವ, ಪ್ರಮಾಣಾಗಮ್ಯನಾದ ಭಗವಂತನು ಅದಿತಿದೇವಿಯ ಪ್ರಾರ್ಥನೆಯನ್ನು "ಹಾಗೆ ಆಗಲಿ" ಎಂದು ಅಂಗೀಕರಿಸಿದನು. ಹೀಗೆ ವರವನ್ನು ಕೊಟ್ಟು ಸ್ವಾಮಿಯು ಅಲ್ಲಿಂದ ಅಂತರ್ಧಾನ ಹೋದಿದನು.

೨೭. ತರುವಾಯ ಅನೇಕ ಕಾಲ ಕಳೆಯಲು ದೇವಜನನಿಯಾದ ಅದಿತಿಯು ದುಷ್ಟಜನರನ್ನು ಮರ್ದಿಸುವ ಪೂಜ್ಯನಾದ ಶ್ರೀಮನ್ನಾರಾಯಣನನ್ನು ಗರ್ಭದಲ್ಲಿ ಧರಿಸಿದವಳಾದಳು.

೨೮. ಈ ರೀತಿಯಾಗಿ ಇಂದ್ರಿಯಪ್ರೇರಕನಾದ ಮಹಾವಿಷ್ಣುವು ಅದಿತಿದೇವಿಯ ಗರ್ಭದಲ್ಲಿ ಪ್ರವೇಶಮಾಡಲಾಗಿ ವಿರೋಚನನ ಪುತ್ರನಾದ ಬಲಿರಾಜನ ನಗರದಲ್ಲಿ ಘೋರವಾಗಿ ಅನೇಕ ಉತ್ಪಾತಗಳು ಕಂಡುಬಂದುವು.

ನಿರೀಕ್ಷ್ಯ ಸರ್ವಾನುತ್ಪಾತಾನ್ ದೈತ್ಯೇಂದ್ರೋ ಭಯವಿಹ್ವಲಃ ।
ಪ್ರಹ್ರಾದಮಸುರಂ ವೃದ್ಧಂ ಪ್ರಣಮ್ಯಾಹ ಪಿತಾಮಹಮ್ ॥ ೨೯ ॥

ಬಲಿರುವಾಚ :—

ಪಿತಾಮಹ ಮಹಾಪ್ರಾಜ್ಞ ಜಾಯತೇಽಸ್ಮಿನ್ ಪುರಾಂತರೇ ।
ಕಿಮುತ್ಪಾತೋ ಭವೇತ್ಕಾರ್ಯಮಸ್ಮಾಕಂ ಕಿಂನಿಮಿತ್ತಕಃ ॥ ೩೦ ॥

ನಿಶಮ್ಯ ತಸ್ಯ ವಚನಂ ಚಿರಂ ಧ್ಯಾತ್ವಾ ಮಹಾಸುರಃ ।
ನಮಸ್ಕೃತ್ಯ ಹೃಷೀಕೇಶಮಿದಂ ವಚನಮಬ್ರವೀತ್ ॥ ೩೧ ॥

ಪ್ರಹ್ರಾದ ಉವಾಚ :—

ಯೋ ಯಜ್ಞೈರಿಜ್ಯತೇ ವಿಷ್ಣುರ್ಯಸ್ಯ ಸರ್ವಮಿದಂ ಜಗತ್ ।
ದಧಾರಾಸುರನಾಶಾರ್ಥಂ ಮಾತಾ ತಂ ತ್ರಿದಿವೌಕಸಾಮ್ ॥ ೩೨ ॥

---

೨೯. ದೈತ್ಯರಾಜನಾದ ಬಲಿಯು ಘೋರವಾದ ಸಮಸ್ತ ಉತ್ಪಾತಗಳನ್ನು ಕಂಡು ಭಯದಿಂದ ಕಳವಳಗೊಂಡು ವೃದ್ಧನೂ ಪಿತಾಮಹನೂ ಆದ ಪ್ರಹ್ರಾದನನ್ನು ಕುರಿತು ನಮಸ್ಕರಿಸಿ ಹೇಳಿಕೊಂಡನು.

೩೦. ಬಲಿಯು ಹೀಗೆಂದು ಹೇಳಿದನು :— ಮಹಾಪ್ರಜ್ಞಾವಂತನಾದ ಪಿತಾಮಹನೇ ! ಈ ನಮ್ಮ ನಗರದ ಒಳಗೆ ಅನೇಕ ಉತ್ಪಾತಗಳು ಉಂಟಾಗಿವೆ. ಇದು ಯಾವ ನಿಮಿತ್ತದಿಂದ ಸಂಭವಿಸಿದೆ ? ಮತ್ತು ಇದರಿಂದ ಆಗುವ ಅನರ್ಥ ಪರಿಣಾಮವು ಏನು ?

೩೧. ಮಹಾಸುರನಾದ ಪ್ರಹ್ರಾದನು ಬಲಿರಾಜನ ವಚನವನ್ನು ಕೇಳಿ ಬಹಳ ಹೊತ್ತು ಧ್ಯಾನಿಸಿ ಸರ್ವೇಂದ್ರಿಯಪ್ರೇರಕನಾದ ವಿಷ್ಣುಪರಮಾತ್ಮನನ್ನು ನಮಸ್ಕರಿಸಿ ಈ ವಚನವನ್ನು ಹೇಳಿದನು.

೩೨. ಪ್ರಹ್ರಾದ ದೈತ್ಯನು ಇಂತೆಂದನು :—ಸಮಸ್ತ ಯಜ್ಞಕರ್ಮಗಳಿಂದ ಪೂಜಿಸಲ್ಪಡುವವನೂ, ಸಮಸ್ತ ಚರಾಚರ ಪ್ರಪಂಚಕ್ಕೆ ಕಾರಣನೂ ಆದ ವಿಷ್ಣು ಪರಮಾತ್ಮನನ್ನು ಸ್ವರ್ಲೋಕವಾಸಿಗಳಾದ ದೇವತೆಗಳ ಮಾತೆಯಾದ ಅದಿತಿಯು ಅಸುರರ ವಧಕ್ಕೋಸ್ಕರ ಗರ್ಭದಲ್ಲಿ ಧರಿಸಿರುವಳು.

ಯಸ್ಮಾದಭಿನ್ನಂ ಸಕಲಂ ಭಿದ್ಯತೇ ಯೋಽಖಿಲಾದಪಿ ।
ಸ ವಾಸುದೇವೋ ದೇವಾನಾಂ ಮಾತುರ್ದೇಹಂ ಸಮಾವಿಶತ್ ॥ ೩೩ ॥

ನ ಯಸ್ಯ ದೇವಾ ಜಾನಂತಿ ಸ್ವರೂಪಂ ಪರಮಾರ್ಥತಃ ।
ಸ ವಿಷ್ಣುರದಿತೇರ್ದೇಹಂ ಸ್ವೇಚ್ಛಯಾದ್ಯ ಸಮಾವಿಶತ್ ॥ ೩೪ ॥

ಯಸ್ಮಾದ್ಭವಂತಿ ಭೂತಾನಿ ಯತ್ರ ಸಂಯಾಂತಿ ಸಂಕ್ಷಯಮ್ ।
ಸೋಽವತೀರ್ಣೋ ಮಹಾಯೋಗೀ ಪುರಾಣಪುರುಷೋ ಹರಿಃ॥ ೩೫ ॥

ನ ಯತ್ರ ವಿದ್ಯತೇ ನಾಮಜಾತ್ಯಾದಿಪರಿಕಲ್ಪನಾ ।
ಸತ್ತಾಮಾತ್ರಾತ್ಮರೂಪೋಽಸೌ ವಿಷ್ಣುರಂಶೇನ ಜಾಯತೇ ॥ ೩೬ ॥

---

೩೩. ಸಮಸ್ತ ವಸ್ತುಜಾಲವು ಪರಮಾತ್ಮನಿಂದ ಅಭಿನ್ನವಾಗಿದ್ದರೂ ಯಾವ ಪರಮಾತ್ಮನು ಸಕಲ ವಸ್ತುವಿಲಕ್ಷಣನಾಗಿರುವನೋ, ಅಂತಹ ವಾಸುದೇವ ಮೂರ್ತಿಯು ದೇವಜನನಿಯಾದ ಅದಿತಿಯ ದೇಹದಲ್ಲಿ ವಾಸಿಸುತ್ತಿರುವನು.

೩೪. ದೇವತೆಗಳು ಯಾವ ಪರಮಾತ್ಮನ ಪಾರಮಾರ್ಥಿಕ ರೂಪವನ್ನು ತಿಳಿಯಲಾರರೋ, ಅಂತಹ ವಿಷ್ಣುಪರಮಾತ್ಮನು ಸ್ವೇಚ್ಛಾಮಾತ್ರದಿಂದ ಅದಿತಿಯ ದೇಹವನ್ನು ಪ್ರವೇಶಿಸಿರುವನು.

೩೫. ಸಮಸ್ತ ಭೂತೋತ್ಪತ್ತಿಗೆ ಕಾರಣನೂ ಮತ್ತು ಸಮಸ್ತ ಭೂತಲಯಕ್ಕೆ ಆಧಾರನೂ, ಮಹಾ ಯೋಗೇಶ್ವರನೂ ಮತ್ತು ಪುರಾಣಪುರುಷನೂ ಆದ ಶ್ರೀಮನ್ನಾರಾಯಣನು ಅವತರಿಸಿರುವನು.

೩೬. ನಾಮ-ಜಾತಿ ಮೊಂತಾದ ಧರ್ಮಕಲ್ಪನೆಯಿಂದ ರಹಿತನಾಗಿ ಸತ್ತಾ ಮಾತ್ರ ಸ್ವರೂಪದಿಂದ ಇರುವ ವಿಷ್ಣುಪರಮಾತ್ಮನು ತನ್ನ ಅಂಶದಿಂದ ಅವತರಿಸಿರುವನು.

ಯಸ್ಯ ಸಾ ಜಗತಾಂ ಮಾತಾ ಶಕ್ತಿಸ್ತದ್ಧರ್ಮಧಾರಿಣೀ ।
ಮಾಯಾ ಭಗವತೀ ಲಕ್ಷ್ಮೀಃ ಸೋಽವತೀರ್ಣೋ ಜನಾರ್ದನಃ ॥೩೭॥

ಯಸ್ಯ ಸಾ ತಾಮಸೀ ಮೂರ್ತಿಃ ಶಂಕರೋ ರಾಜಸೀ ತನುಃ ।
ಬ್ರಹ್ಮಾ ಸಂಜಾಯತೇ ವಿಷ್ಣುರಂಶೇನೈಕೇನ ಸತ್ತ್ವಧೃಕ್ ॥ ೩೮ ॥

ಇತಿ ಸಂಚಿಂತ್ಯ ಗೋವಿಂದಂ ಭಕ್ತಿನಮ್ರೇಣ ಚೇತಸಾ ।
ತಮೇವ ಗಚ್ಛ ಶರಣಂ ತತೋ ಯಾಸ್ಯಸಿ ನಿರ್ವೃತಿಮ್ ॥ ೩೯ ॥

ತತಃ ಪ್ರಹ್ರಾದವಚನಾದ್ಬಲಿರ್ವೈರೋಚನಿರ್ಹರಿಮ್ ।
ಜಗಾಮ ಶರಣಂ ವಿಶ್ವಂ ಪಾಲಯಾಮಾಸ ಧರ್ಮವಿತ್ ॥ ೪೦ ॥

---

೩೭. ಜಗನ್ಮಾತೆಯೂ ನಾರಾಯಣನಿಗೆ ಸಮಾನವಾದ ಧರ್ಮವುಳ್ಳವಳೂ ಆದ ಭಗವತಿಯಾದ ಮಹಾಲಕ್ಷ್ಮಿಯು ಯಾವ ಪರಮಾತ್ಮನಲ್ಲಿ ಮಾಯಾಶಕ್ತಿ ರೂಪದಿಂದ ಇರುವಳೋ, ಅಂತಹ ಜನಾರ್ದನಸ್ವಾಮಿಯು ಅವತರಿಸಿರುವನು.

೩೮. ಸಂಹಾರಕನಾದ ಶಂಕರನು ಯಾವ ವಿಷ್ಣುವಿನ ತಾಮಸಮೂರ್ತಿ ಯಾಗಿರುವನೋ, ಹಾಗೆ ಬ್ರಹ್ಮದೇವನು ಯಾವ ವಿಷ್ಣುವಿನ ರಾಜಸಮೂರ್ತಿ ಯಾಗಿರುವನೋ, ಅಂತಹ ಮಹಾವಿಷ್ಣುವು ಸತ್ತ್ವಗುಣಮಯನಾಗಿ ತನ್ನ ಅಂಶದಿಂದ ಜನ್ಮವೆತ್ತಿರುವನು.

೩೯. ಹೀಗೆಂದು ಗೋಪತಿಯಾದ ವಿಷ್ಣುವನ್ನು ಧ್ಯಾನಿಸಿ ಭಕ್ತಿಗೆ ಪರವಶವಾದ ಹೃದಯದಿಂದ ವಿಷ್ಣುಪರಮಾತ್ಮನನ್ನು ನೀನು ಶರಣುಹೊಂದು, ಅದರಿಂದ ನೀನು ಸುಖವನ್ನು ಹೊಂದುತ್ತೀಯೆ.

೪೦. ತರುವಾಯ ವಿರೋಚನಪುತ್ರನಾದ ಬಲಿಮಹಾಸುರನು ಪ್ರಹ್ಲಾದನ ವಚನದಂತೆ ಶ್ರೀ ಹರಿಯನ್ನು ಶರಣುಹೊಂದಿದನು. ಮತ್ತು ತಾನು ಧರ್ಮಜ್ಞನಾಗಿ ಅದರಂತೆ ವಿಶ್ವವನ್ನು ಪಾಲಿಸಿದನು.

ಕಾಲೇ ಪ್ರಾಪ್ತೇ ಮಹಾವಿಷ್ಣುಂ ದೇವಾನಾಂ ಹರ್ಷವರ್ಧನಮ್ ।
ಅಸೂತ ಕಶ್ಯಪಾಚ್ಚೈನಂ ದೇವಮಾತಾದಿತಿಃ ಸ್ವಯಮ್ ॥ ೪೧ ॥

ಚತುರ್ಭುಜಂ ವಿಶಾಲಾಕ್ಷಂ ಶ್ರೀವತ್ಸಾಂಕಿತವಕ್ಷಸಮ್ ।
ನೀಲಮೇಘಪ್ರತೀಕಾಶಂ ಭ್ರಾಜಮಾನಂ ಶ್ರಿಯಾವೃತಮ್ ॥ ೪೨ ॥

ಉಪತಸ್ಥುಃ ಸುರಾಃ ಸರ್ವೇ ಸಿದ್ಧಾಃ ಸಾಧ್ಯಾಶ್ಚ ಚಾರಣಾಃ ।
ಉಪೇಂದ್ರ ಇಂದ್ರಪ್ರಮುಖಾ ಬ್ರಹ್ಮಾ ಚರ್ಷಿಗಣೈರ್ವೃತಃ ॥ ೪೩ ॥

ಕೃತೋಪನಯನೋ ವೇದಾನಧ್ಯೈಷ್ಟ ಭಗವಾನ್ ಹರಿಃ ।
ಸದಾಚಾರಂ ಭರದ್ವಾಜಾತ್ತ್ರಿಲೋಕಾಯ ಪ್ರದರ್ಶಯನ್ ॥ ೪೪ ॥

---

೪೧. ಕಶ್ಯಪಮುನಿಯಿಂದ ಗರ್ಭವತಿಯಾದ, ದೇವಮಾತೆಯಾದ ಅದಿತಿ ದೇವಿಯು ಪ್ರಸವಕಾಲವು ಪ್ರಾಪ್ತವಾಗಲು ದೇವತೆಗಳ ಹರ್ಷಕ್ಕೆ ಕಾರಣನಾದ ಮಹಾವಿಷ್ಣುವನ್ನು ಪುತ್ರನನ್ನಾಗಿ ಪ್ರಸವಿಸಿದಳು.

೪೨. ವಿಷ್ಣುವಿನ ಅಂಶರೂಪವಾದ ಆ ಶಿಶುವು ನಾಲ್ಕು ಭುಜಗಳಿಂದಲೂ, ವಿಶಾಲವಾದ ನೇತ್ರಗಳಿಂದಲೂ, ಶ್ರೀವತ್ಸವೆಂಬ ಮಚ್ಚೆಯಿಂದ ಅಂಕಿತವಾದ ಎದೆಯಿಂದಲೂ, ನೀಲಮೇಘದಂತೆ ಕಂಗೊಳಿಸುವ ಕಾಂತಿಯಿಂದಲೂ ಕೂಡಿ ಸೌಂದರ್ಯರಾಶಿಯಿಂದ ವಿರಾಜಿಸುತ್ತಿತ್ತು.

೪೩. ಆಗ ಉಪೇಂದ್ರ, ಇಂದ್ರ ಮುಂತಾದ ನಿಖಿಲದೇವತೆಗಳೂ, ಸಿದ್ಧರೂ, ಸಾಧ್ಯರೂ, ಚಾರಣರೂ ಮತ್ತು ಬ್ರಹ್ಮನೂ ಸಕಲ ಋಷಿಗಣಗಳೊಡನೆ ಬಂದು ಮಹಾವಿಷ್ಣುವನ್ನು ಸ್ತುತಿಸಿದರು.

೪೪. ಆಗ ಉಪನಯನದಿಂದ ವಟುರೂಪಿಯಾದ ವಿಷ್ಣುವು ತ್ರಿಲೋಕಗಳಿಗೆ ಸದಾಚಾರ ಮಾರ್ಗವನ್ನು ಬೋಧಿಸುತ್ತ ಭರದ್ವಾಜಮುನಿಯೆಂಬ ಗುರುವಿನಿಂದ ವೇದಗಳನ್ನು ಅಭ್ಯಾಸಮಾಡಿದನು.

ಏವಂ ಚ ಲೌಕಿಕಂ ಮಾರ್ಗಂ ಪ್ರದರ್ಶಯತಿ ಸ ಪ್ರಭುಃ ।
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ ೪೫ ॥

ತತಃ ಕಾಲೇನ ಮತಿಮಾನ್ ಬಲಿರ್ವೈರೋಚನಿಃ ಸ್ವಯಮ್ ।
ಯಜ್ಞೈರ್ಯಜ್ಞೇಶ್ವರಂ ವಿಷ್ಣುಮರ್ಚಯಾಮಾಸ ಸರ್ವಗಮ್ ॥ ೪೬ ॥

ಬ್ರಾಹ್ಮಣಾನ್ ಪೂಜಯಾಮಾಸ ದತ್ತ್ವಾ ಬಹುತರಂ ಧನಮ್ ।
ಬ್ರಹ್ಮರ್ಷಯಃ ಸಮಾಜಗ್ಮುರ್ಯಜ್ಞವಾಟಂ ಮಹಾತ್ಮನಃ ॥ ೪೭ ॥

ವಿಜ್ಞಾಯ ವಿಷ್ಣುರ್ಭಗವಾನ್ ಭರದ್ವಾಜಪ್ರಚೋದಿತಃ ।
ಆಸ್ಥಾಯ ವಾಮನಂ ರೂಪಂ ಯಜ್ಞದೇಶಮಥಾಗಮತ್ ॥ ೪೮ ॥

---

೪೫. ಹೀಗೆ ಪ್ರಭುವಾದ ಮಹಾವಿಷ್ಣುವು ಲೋಕಹಿತವಾದ ಧರ್ಮಮಾರ್ಗವನ್ನು ಅಭಿನಯಿಸಿ ತೋರಿಸುವನು. ಆ ಸ್ವಾಮಿಯು ಪ್ರಮಾಣವಾಗಿ ಪರಿಗ್ರಹಿಸಿರುವುದನ್ನು ಜನರು ಅನುಸರಿಸುತ್ತಾರೆ.

೪೬. ತರುವಾಯ ಕೆಲವು ಕಾಲ ಕಳೆಯಲು ವಿವೇಕಿಯಾದ, ವಿರೋಚನ ಪುತ್ರನಾದ ಬಲಿಯು ತಾನಾಗಿ ಯಜ್ಞಾಧಿಪತಿಯೂ, ಸರ್ವವ್ಯಾಪಿಯೂ, ಆದ ವಿಷ್ಣುವನ್ನು ಪವಿತ್ರವಾದ ಯಜ್ಞಕರ್ಮಗಳಿಂದ ಆರಾಧಿಸಿದನು.

೪೭. ಆ ಯಜ್ಞದಲ್ಲಿ ಅತಿಶಯವಾಗಿ ಧನವನ್ನು ದಾನಮಾಡಿ ಬ್ರಾಹ್ಮಣೋತ್ತಮರನ್ನು ಸತ್ಕರಿಸಿದನು. ಅನೇಕ ಬ್ರಹ್ಮರ್ಷಿಗಳು ಮಹಾತ್ಮನಾದ ಆ ಬಲಿರಾಜನ ಯಜ್ಞಶಾಲೆಗೆ ಬಂದು ಸೇರಿದರು.

೪೮. ಭಗವಂತನಾದ ಮಹಾವಿಷ್ಣುವು ಅದನ್ನು ತಿಳಿದು ಭರದ್ವಾಜ ಗುರುವಿನಿಂದ ಪ್ರೇರೇಪಿಸಲ್ಪಟ್ಟವನಾಗಿ ವಾಮನರೂಪವನ್ನು ಧರಿಸಿ ಯಜ್ಞಭೂಮಿಗೆ ಬಂದನು.

ಕೃಷ್ಣಾಜಿನೋಪವೀತಾಂಗ ಆಷಾಢೇನ ವಿರಾಜಿತಃ ।
ಬ್ರಾಹ್ಮಣೋ ಜಟಿಲೋ ವೇದಾನುದ್ಗಿರನ್ ಸುಮಹಾದ್ಯುತಿಃ ॥ ೪೯ ॥

ಸಂಪ್ರಾಪ್ಯಾಸುರರಾಜಸ್ಯ ಸಮೀಪಂ ಭಿಕ್ಷುಕೋ ಹರಿಃ ।
ಸ್ವಪದ್ಭ್ಯಾಂ ಕ್ರಮಿತಂ ದೇಶಮಯಾಚತ ಬಲಿಂ ತ್ರಿಭಿಃ ॥ ೫೦ ॥

ಪ್ರಕ್ಷಾಲ್ಯ ಚರಣೌ ವಿಷ್ಣೋರ್ಬಲಿರ್ಭಾವಸಮನ್ವಿತಃ ।
ಆಚಾಮಯಿತ್ವಾ ಭೃಂಗಾರಮಾದಾಯ ಸ್ವರ್ಣನಿರ್ಮಿತಮ್ ॥ ೫೧ ॥

ದಾಸ್ಯೇ ತಥೇದಂ ಭವತೇ ಪದತ್ರಯಂ
ಪ್ರೀಣಾತು ದೇವೋ ಹರಿರವ್ಯಯಾಕೃತಿಃ ।
ವಿಚಿಂತ್ಯ ದೇವಸ್ಯ ಕರಾಗ್ರಪಲ್ಲವೇ
ನಿಪಾತಯಾಮಾಸ ಸುಶೀತಲಂ ಜಲಮ್ ॥ ೫೨ ॥

---

೪೯. ಆ ಕಪಟ ವಾಮನಮೂರ್ತಿಯು ಕೃಷ್ಣಾಜಿನದಿಂದ ಹೊದಿಸಿದ ಅಂಗವುಳ್ಳವನೂ, ಪಲಾಶದಂಡದಿಂದ ಶೋಭಿತನೂ, ಜಟಾಧಾರಿಯೂ, ಬ್ರಹ್ಮ ತೇಜಸ್ಸಿನಿಂದ ಹೊಳೆಯುವವನೂ ಮತ್ತು ವೇದಗಳನ್ನು ಪಠಿಸುತ್ತಿದ್ದ ಬ್ರಾಹ್ಮಣನೂ ಆಗಿ ಕಾಣುತ್ತಲಿದ್ದನು.

೫೦. ಭಿಕ್ಷುಕನಾಗಿ ಅಲ್ಲಿಗೆ ಬಂದ ಹರಿಯು ಬಲಿರಾಜನ ಸಮೀಪವನ್ನು ಹೊಂದಿ ತನ್ನ ಕಾಲುಹೆಜ್ಜೆಗಳಿಂದ ಅಳೆಯಲ್ಪಡುವ ಮೂರು ಹೆಜ್ಜೆ ಭೂಮಿಯನ್ನು ಯಾಚಿಸಿದನು.

೫೧. ಆಗ ಭಕ್ತಿಭಾವದಿಂದ ಕೂಡಿದ ಬಲಿ ಮಹಾರಾಜನು ಮಹಾವಿಷ್ಣುವಿನ ಚರಣಗಳನ್ನು ತೊಳೆದು ಸುವರ್ಣಮಯವಾದ ಕಲಶವನ್ನು ತೆಗೆದುಕೊಂಡು ಶುದ್ಧೋದಕದಿಂದ ಆಚಮನೀಯವನ್ನು ಕೊಟ್ಟನು.

೫೨. ಈ ಪಾದತ್ರಯಪರಿಮಿತ ಭೂಮಿಯನ್ನು ನಿನಗೆ ಕೊಡುವೆನು, ಇದರಿಂದ ಅವ್ಯಯವಾದ ಆಕಾರವುಳ್ಳ ಶ್ರೀಹರಿಯು ತೃಪ್ತನಾಗಲಿ, ಹೀಗೆಂದು ಧ್ಯಾನಿಸಿ ವಾಮನ ಮೂರ್ತಿಯು ಪಲ್ಲವದಂತಿರುವ ಹಸ್ತಾಗ್ರದಲ್ಲಿ ಶೀತಲಜಲವನ್ನು ಧಾರೆಯೆರೆದನು.

ವಿಚಕ್ರಮೇ ಪೃಥಿವೀಮೇಷ ಚೈತಾ ।
ಮಥಾಂತರಿಕ್ಷಂ ದಿವಮಾದಿದೇವಃ
ವ್ಯಪೇತರಾಗಂ ದಿತಿಜೇಶ್ವರಂ ತಂ
ಪ್ರಕರ್ತುಕಾಮಃ ಶರಣಂ ಪ್ರಪನ್ನಮ್ ॥ ೫೩ ॥

ಆಕ್ರಮ್ಯ ಲೋಕತ್ರಯಮೀಶಪಾದಃ
ಪ್ರಾಜಾಪತ್ಯಾದ್ಬ್ರಹ್ಮಲೋಕಂ ಜಗಾಮ ।
ಪ್ರಣೇಮುರಾದಿತ್ಯಮುಖಾಃ ಸುರೇಂದ್ರಾ
ಯೇ ತತ್ರ ಲೋಕೇ ನಿವಸಂತಿ ಸಿದ್ಧಾಃ ॥ ೫೪ ॥

ಅಥೋಪತಸ್ಥೇ ಭಗವಾನನಾದಿಃ
ಪಿತಾಮಹಸ್ತೋಷಯಾಮಾಸ ವಿಷ್ಣುಮ್ ।
ಭಿತ್ವಾ ತದಂಡಸ್ಯ ಕಪಾಲಮೂರ್ಧ್ವಂ
ಜಗಾಮ ದಿವ್ಯಾಭರಣೋಽಥ ಭೂಯಃ ॥ ೫೫ ॥

---

೫೩. ಪಾದತ್ರಯ ಭೂಮಿಯನ್ನು ಪ್ರತಿಗ್ರಹಿಸಿದ ಆದಿದೇವನಾದ ವಾಮನ ಮೂರ್ತಿಯು ಶರಣಾಗತನಾಗಿರುವ, ದೈತ್ಯರಾಜನಾದ ಆ ಬಲಿಯನ್ನು ರಾಗಾದಿ ದೋಷನಿರ್ಮುಕ್ತನನ್ನಾಗಿ ಮಾಡಲು ಒಂದುಪಾದದಿಂದ ಸಂಪೂರ್ಣ ಭೂಮಿಯನ್ನೂ ಮತ್ತೊಂದು ಪಾದದಿಂದ ಅಂತರಿಕ್ಷಲೋಕ-ದ್ಯುಲೋಕಗಳನ್ನೂ ಅಳೆದನು.

೫೪. ಸರ್ವೇಶ್ವರನ ಪಾದವು ಲೋಕತ್ರಯವನ್ನು ಆಕ್ರಮಿಸಿ ಪ್ರಾಜಾಪತ್ಯ ಲೋಕದಿಂದ ಬ್ರಹ್ಮಲೋಕಕ್ಕೆ ಪ್ರಸರಿಸಿತು. ಆಗ ಆದಿತ್ಯ ಮುಂತಾದ ದೇವತೆಗಳೂ, ಆಯಾಯ ಲೋಕಗಳಲ್ಲಿ ವಾಸಮಾಡುವ ಸಿದ್ಧಪುರುಷರೂ ಪರಮಾತ್ಮನ ಚರಣ ವನ್ನು ವಂದಿಸಿದರು.

೫೫. ತರುವಾಯ ಅನಾದಿಯೂ, ಪೂಜ್ಯನೂ ಆದ ಬ್ರಹ್ಮದೇವನು ಚರಣಕ್ಕೆ ಸನ್ನಿಹಿತನಾಗಿ ಮಹಾವಿಷ್ಣುವನ್ನು ಸ್ತುತಿಸಿ ಸಂತೋಷಪಡಿಸಿದನು. ವಾಮನ ಮೂರ್ತಿಯ ಚರಣವು ಬ್ರಹ್ಮಾಂಡದ ಊರ್ಧ್ವಕಪಾಲವನ್ನು ಭೇದಿಸಿ ದಿವ್ಯಸ್ಥಾನ ಗಳಿಗೆ ಆಭರಣದಂತೆ ಆಗಿ ಮತ್ತೆ ಮೇಲೆ ವ್ಯಾಪಿಸಿತು.

ಅಥಾಂಡಭೇದಾನ್ನಿಪಪಾತ ಶೀತಲಂ
ಮಹಾಜಲಂ ಪುಣ್ಯಕೃದ್ಭಿಶ್ಚ ಜುಷ್ಟಮ್ ।
ಪ್ರವರ್ತಿತಾ ಚಾಪಿ ಸರಿದ್ವರಾ ಸಾ
ಗಂಗೇತ್ಯುಕ್ತಾ ಬ್ರಹ್ಮಣಾ ವ್ಯೋಮಸಂಸ್ಥಾ ॥ ೫೬ ॥

ಗತ್ವಾ ಮಹಾಂತಂ ಪ್ರಕೃತಿಂ ಬ್ರಹ್ಮಯೋನಿಂ
ಬ್ರಹ್ಮಾಣಮೇಕಂ ಪುರುಷಂ ವಿಶ್ವಯೋನಿಮ್ ।
ಅತಿಷ್ಠದೀಶಸ್ಯ ಪದಂ ತದವ್ಯಯಂ
ದೃಷ್ಟ್ವಾ ದೇವಾಸ್ತತ್ರ ತತ್ರ ಸ್ತುವಂತಿ ॥ ೫೭ ॥

ವಿಲೋಕ್ಯ ತಂ ಪುರುಷಂ ವಿಶ್ವಕಾಯಂ
ಮಹಾನ್ ಬಲಿರ್ಭಕ್ತಿ ಯೋಗೇನ ವಿಷ್ಣುಮ್ ।
ನನಾಮ ನಾರಾಯಣಮೇಕಮವ್ಯಯಂ
ಸ್ವಚೇತಸಾ ಯಂ ಪ್ರಣಮಂತಿ ವೇದಾಃ ॥ ೫೮ ॥

---

೫೬. ಹಾಗೆ ಬ್ರಹ್ಮಾಂಡವನ್ನು ಭೇದಿಸಿದುದರಿಂದ ಪುಣ್ಯವಂತರಿಂದ ಸೇವಿಸಲ್ಪಟ್ಟ ಶೀತಲವಾದ ಮಹಾಜಲವು ಕೆಳಕ್ಕೆ ಧುಮುಕಿತು. ಆಕಾಶದಲ್ಲಿ ಉತ್ತಮ ನದೀರೂಪದಿಂದ ಹರಿಯುವ ಆ ಜಲಪ್ರವಾಹವು ಬ್ರಹ್ಮದೇವನಿಂದ ಗಂಗಾ ನದಿಯೆಂದು ಅಂಕಿಸಲ್ಪಟ್ಟಿತು.

೫೭. ವ್ಯಯರಹಿತನಾದ ಸರ್ವೇಶ್ವರನ ಪಾದವು ಮಹಾಪರಿಮಾಣನೂ, ಪ್ರಕೃತಿರೂಪನೂ, ವೇದಕಾರಣನೂ, ಅದ್ವಿತೀಯನೂ, ಪೂರ್ಣನೂ, ಪ್ರಪಂಚ ಕಾರಣನೂ ಆದ ಬ್ರಹ್ಮನನ್ನು ಹೊಂದಿ ಅಲ್ಲಿ ಅಚಲವಾಗಿ ನಿಂತಿತು. ಅದನ್ನು ನೋಡಿ ಅಲ್ಲಲ್ಲಿ ಇರುವ ದೇವತೆಗಳು ಸ್ತುತಿಸಿದರು.

೫೮. ಮಹಾತ್ಮನಾದ ಬಲಿಯು ವಿಶ್ವಮೂರ್ತಿಯೂ, ನಾರಾಯಣನೂ, ಅದ್ವಿತೀಯನೂ, ವ್ಯಯರಹಿತನೂ ಮತ್ತು ವೇದಪುರುಷನಿಂದ ವಂದನೀಯನೂ ಆದ ಆ ಪುರಾಣಪುರುಷನನ್ನು ಭಕ್ತಿಯೋಗದಿಂದ ಕೂಡಿದ ಏಕಾಗ್ರಮಾನಸದಿಂದ ವಂದಿಸಿದನು.

ತಮುಬ್ರವೀದ್ಭಗವಾನಾದಿಕರ್ತಾ
ಭೂತ್ವಾ ಪುನರ್ವಾಮನೋ ವಾಸುದೇವಃ ।
ಮಮೈವ ದೈತ್ಯಾಧಿಪತೇಽಧುನೇದಂ
ಲೋಕತ್ರಯಂ ಭವತಾ ಭಾವದತ್ತಮ್ ॥ ೫೯ ॥

ಪ್ರಣಮ್ಯ ಮೂರ್ಧ್ನಾ ಪುನರೇವ ದೈತ್ಯೋ
ನಿಪಾತಯಾಮಾಸ ಜಲಂ ಕರಾಗ್ರೇ ।
ದಾಸ್ಯೇ ತವಾತ್ಮಾನಮನಂತಧಾಮ್ನೇ
ತ್ರಿವಿಕ್ರಮಾಯಾಮಿತವಿಕ್ರಮಾಯ ॥ ೬೦ ॥

ಪ್ರಗೃಹ್ಯ ಸೂನೋರಪಿ ಸಂಪ್ರದತ್ತಂ
ಪ್ರಹ್ರಾದಸೂನೋರಥ ಶಂಖಪಾಣಿಃ ।
ಜಗಾದ ದೈತ್ಯಂ ಜಗದಂತರಾತ್ಮಾ
ಪಾತಾಲಮೂಲಂ ಪ್ರವಿಶೇತಿ ಭೂಯಃ ॥ ೬೧ ॥

---

೫೯. ಆಗ ಆದಿಕಾರಣನೂ, ಭಗವಂತನೂ ಆದ ವಾಸುದೇವ ಪರಮಾತ್ಮನು ಮತ್ತೆ ವಾಮನಮೂರ್ತಿಯಾಗಿ ದೈತ್ಯರಾಜನನ್ನು ಕುರಿತು ಹೀಗೆಂದು ಹೇಳಿದನು. "ದೈತ್ಯರಾಜನೆ! ನಿನ್ನಿಂದ ಈ ಲೋಕತ್ರಯವೆಲ್ಲವೂ ಭಕ್ತಿಭಾವ ಪೂರ್ವಕವಾಗಿ ನನಗೆ ಕೊಡಲ್ಪಟ್ಟಿದೆ"

೬೦. ಆಗ ಬಲಿರಾಜನು ಶಿರದಿಂದ ನಮಸ್ಕರಿಸಿ ಕಪಟ ವಾಮನಮೂರ್ತಿಯ ಹಸ್ತಾಗ್ರದಲ್ಲಿ ಜಲಧಾರೆಯನ್ನು ಸುರಿಸಿದನು. ಮತ್ತು ಅಪಾರಮಹಿಮೆಯುಳ್ಳವನೂ, ತ್ರಿವಿಕ್ರಮಾವತಾರಿಯೂ, ಗಣನಾತೀತವಾದ ವಿಕ್ರಮ ಶೋಭಿತನೂ ಆದ ನಿನಗೆ ನನ್ನ ಆತ್ಮವನ್ನು ದಾನವಾಗಿ ಧಾರೆಯೆರೆಯುವೆನೆಂದು ಹೇಳಿದನು.

೬೧. ಜಗತ್ತಿನಲ್ಲಿ ಅಂತರ್ಯಾಮಿಯೂ, ಹಸ್ತದಲ್ಲಿ ಶಂಖವನ್ನು ಧರಿಸಿದವನೂ ಆದ ವಾಮನನು ಪ್ರಹ್ಲಾದನ ಪುತ್ರನಾದ ವಿರೋಚನಾಸುರನಿಗೆ ಪುತ್ರನಾಗಿರುವ ಬಲಿ ಚಕ್ರವರ್ತಿಯಿಂದ ಭೂದಾನವನ್ನು ಸ್ವೀಕರಿಸಿ ಮತ್ತೆ ದೈತ್ಯನನ್ನು ಕುರಿತು ನೀನು ಪಾತಾಲಲೋಕದ ಮೂಲಕ್ಕೆ ಹೋಗೆಂದು ಹೇಳಿದನು.

ಸಮಾಸ್ಯತಾಂ ಭವತಾ ತತ್ರ ನಿತ್ಯಂ
ಭುಕ್ತ್ವಾ ಭೋಗಾನ್ ದೇವತಾನಾಮಲಭ್ಯಾನ್ ।
ಧ್ಯಾಯಸ್ವ ಮಾಂ ಸತತಂ ಭಕ್ತಿಯೋಗಾತ್
ಪ್ರವೇಕ್ಷ್ಯಸೇ ಕಲ್ಪದಾಹೇ ಪುನರ್ಮಾಮ್ ॥ ೬೨ ॥

ಉಕ್ತ್ವೈವಂ ದೈತ್ಯಸಿಹ್ಮಂ ತಂ ವಿಷ್ಣುಃ ಸತ್ಯಪರಾಕ್ರಮಃ ।
ಪುರಂದರಾಯ ತ್ರೈಲೋಕ್ಯಂ ದದೌ ಜಿಷ್ಣುರುರುಕ್ರಮಃ ॥ ೬೩ ॥

ಸಂಸ್ತುವಂತಿ ಮಹಾಯೋಗಂ ಸಿದ್ಧಾ ದೇವರ್ಷಿಕಿನ್ನರಾಃ ।
ಬ್ರಹ್ಮಾ ಶಕ್ರೋಽಥ ಭಗವಾನ್ ರುದ್ರಾದಿತ್ಯಮರುದ್ಗಣಾಃ ॥ ೬೪ ॥

ಕೃತ್ವೈತದದ್ಭುತಂ ಕರ್ಮ ವಿಷ್ಣುರ್ವಾಮನರೂಪಧೃಕ್ ।
ಪಶ್ಯತಾಮೇವ ಸರ್ವೇಷಾಂ ತತ್ರೈವಾಂತರಧೀಯತ ॥ ೬೫ ॥

---

೬೨. ದೇವತೆಗಳಿಗೆ ಅಲಭ್ಯವಾದ ಸುಖಭೋಗವನ್ನು ಅನುಭವಿಸುತ್ತ ನಿನ್ನಿಂದ ಪಾತಾಲದಲ್ಲಿ ವಾಸಮಾಡಲ್ಪಡಲಿ, ಮತ್ತು ಅಲ್ಲಿ ಭಕ್ತಿಯೋಗದಿಂದ ನನ್ನನ್ನು ನಿರಂತರವಾಗಿ ಧ್ಯಾನಿಸು. ಕಲ್ಪಾಂತಕಾಲದಲ್ಲಿ ಮತ್ತೆ ನನ್ನಲ್ಲಿ ಬಂದು ಸೇರುತ್ತೀ.

೬೩. ವ್ಯರ್ಥವಾಗದ ಪರಾಕ್ರಮವುಳ್ಳವನೂ, ಜಯಶಾಲಿಯೂ, ವಿಸ್ತೀರ್ಣವಾದ ಪಾದನ್ಯಾಸವುಳ್ಳವನೂ ಆದ ಮಹಾವಿಷ್ಣುವು ದೈತ್ಯೇಂದ್ರನಾದ ಬಲಿರಾಜನಿಗೆ ಹೀಗೆಂದು ಹೇಳಿ ತ್ರೈಲೋಕ್ಯರಾಜ್ಯವನ್ನು ಇಂದ್ರನಿಗೆ ಕೊಟ್ಟನು.

೬೪. ಈ ಅದ್ಭುತ ಕರ್ಮದಿಂದ ಸಿದ್ಧರೂ, ದೇವತೆಗಳೂ, ಮಹರ್ಷಿಗಳೂ, ಕಿನ್ನರರೂ, ಬ್ರಹ್ಮನೂ, ಇಂದ್ರನೂ, ರುದ್ರನೂ, ಆದಿತ್ಯನೂ, ಮರುದ್ದೇವತೆಗಳೂ ಮೊದಲಾದ ಪೂಜ್ಯರೆಲ್ಲರೂ ಯೋಗೇಶ್ವರನನ್ನು ಸ್ತುತಿಸಿದರು.

೬೫. ಹೀಗೆ ಮಾಯಾ ವಾಮನರೂಪವನ್ನು ಧರಿಸಿದ ಮಹಾವಿಷ್ಣುವು ಅದ್ಭುತವಾದ ಒಂದು ಕರ್ಮವನ್ನು ತೋರಿಸಿ ದೇವಾದಿ ಸಮಸ್ತ ಪ್ರಜೆಗಳು ನೋಡುತ್ತಿರುವಂತೆಯೇ ಅಲ್ಲಿಂದ ಅಂತರ್ಧಾನ ಹೊಂದಿದನು.

ಸೋಽಪಿ ದೈತ್ಯವರಃ ಶ್ರೀಮಾನ್ ಪಾತಾಲಂ ಪ್ರಾಪ ನೋದಿತಃ ।
ಪ್ರಹ್ರಾದೇನಾಸುರವರ್ಯೈರ್ವಿಷ್ಣುಭಕ್ತ್ಯಾಸ್ತು ತತ್ಪರಃ ॥ ೬೬ ॥

ಅಪೃಚ್ಛದ್ವಿಷ್ಣುಮಾಹಾತ್ಮ್ಯಂ ಭಕ್ತಿಯೋಗಮನುತ್ತಮಮ್ ।
ಪೂಜಾವಿಧಾನಂ ಪ್ರಹ್ರಾದಂ ತದಾಹಾಸೌ ಚಕಾರ ಸಃ ॥ ೬೭ ॥

ಅಥ ರಥಚರಣಂ ಸಶಂಖಪಾಣಿಂ
ಸರಸಿಜಲೋಚನಮೀಶಮಪ್ರಮೇಯಮ್ ।
ಶರಣಮುಪಯಯೌ ಸ ಭಾವಯೋಗಾತ್
ಪ್ರಣಯಗತಿಂ ಪ್ರಣಿಧಾಯ ಕರ್ಮಯೋಗಮ್ ॥ ೬೮ ॥

ಏಷ ವಃ ಕಥಿತೋ ವಿಪ್ರಾ ವಾಮನಸ್ಯ ಪರಾಕ್ರಮಃ ।
ಸ ದೇವಕಾರ್ಯಾಣಿ ಸದಾ ಕರೋತಿ ಪುರುಷೋತ್ತಮಃ ॥ ೬೯ ॥

ಇತಿ ಶ್ರೀ ಕೂರ್ಮಪುರಾಣೇ ಸಪ್ತದಶೋಽಧ್ಯಾಯಃ

---

೬೬. ದೈತ್ಯವರ್ಯನೂ, ಐಶ್ವರ್ಯಸಂಪನ್ನನೂ ಆದ ಬಲಿರಾಜನು ಪ್ರಹ್ಲಾದನಿಂದ ಸಮ್ಮತಿಸಲ್ಪಟ್ಟವನಾಗಿ, ವಿಷ್ಣುವಿನಲ್ಲಿ ಭಕ್ತಿಯೋಗತತ್ಪರನಾಗಿ ಶ್ರೇಷ್ಠರಾದ ದಾನವರೊಡನೆ ಪಾತಾಲಕ್ಕೆ ಹೋದನು.

೬೭. ಮತ್ತು ವಿಷ್ಣುವಿನ ಮಾಹಾತ್ಮ್ಯ, ನಿರುಪಮವಾದ ವಿಷ್ಣುಭಕ್ತಿಯೋಗ, ಮತ್ತು ವಿಷ್ಣುಪೂಜಾ ವಿಧಾನಗಳನ್ನು ಉಪದೇಶಿಸುವಂತೆ ಪ್ರಹ್ಲಾದನನ್ನು ಕೇಳಿದನು. ಮತ್ತು ಅವನು ಉಪದೇಶಿಸಿದಂತೆ ಸಮಸ್ತ ವಿಧಾನಗಳನ್ನು ಆಚರಿಸಿದನು.

೬೮. ತರುವಾಯ ಶಂಖ-ಚಕ್ರಗಳಿಂದ ಶೋಭಿಸುವ ಹಸ್ತವುಳ್ಳವನೂ, ಪದ್ಮಪತ್ರದಂತೆ ಸುಂದರವಾದ ನೇತ್ರವುಳ್ಳವನೂ, ಸರ್ವೇಶ್ವರನೂ, ಪ್ರಮಾಣಾಗೋಚರನೂ, ಪ್ರೇಮಾಸ್ಪದನೂ, ಆದ ವಿಷ್ಣುಪರಮಾತ್ಮನಲ್ಲಿ ಧ್ಯಾನೈಕಾಗ್ರತೆಯಿಂದ ಶರಣುಹೊಂದಿ ಕರ್ಮಯೋಗವನ್ನು ಆಚರಿಸಿದನು.

೬೯. ವಿಪ್ರರೇ! ಈ ರೀತಿಯಾಗಿ ವಾಮನಮೂರ್ತಿಯ ಪರಾಕ್ರಮವು ನನ್ನಿಂದ ನಿಮಗೆ ವರ್ಣಿಸಲ್ಪಟ್ಟಿದೆ. ಹೀಗೆ ಆ ಪುರುಷೋತ್ತಮನು ಯಾವಾಗಲೂ ದೇವಕಾರ್ಯಗಳನ್ನು ಮಾಡುತ್ತಲಿರುವನು.

ಕೂರ್ಮಪುರಾಣದಲ್ಲಿ ಹದಿನೇಳನೆಯ ಅಧ್ಯಾಯವು ಸಮಾಪ್ತವು.

---

ಶ್ರೀಃ

# ಕೂರ್ಮಪುರಾಣಂ

---

## ಅಷ್ಟಾದಶೋಽಧ್ಯಾಯಃ

( ವಂಶಾನುಕೀರ್ತನಮ್ )

**ಸೂತ ಉವಾಚ :—**

**ಬಲೇಃ ಪುತ್ರಶತಂ ತ್ವಾಸೀನ್ಮಹಾಬಲಪರಾಕ್ರಮಮ್ ।**
**ತೇಷಾಂ ಪ್ರಧಾನೋ ದ್ಯುತಿಮಾನ್ ಬಾಣೋ ನಾಮ ಮಹಾಬಲಃ ॥೧॥**

**ಸೋಽತೀವ ಶಂಕರೇ ಭಕ್ತೋ ರಾಜಾ ರಾಜ್ಯಮಪಾಲಯತ್ ।**
**ತ್ರೈಲೋಕ್ಯಂ ವಶಮಾನೀಯ ಬಾಧಯಾಮಾಸ ವಾಸವಮ್ ॥ ೨ ॥**

---

## ಹದಿನೆಂಟನೆಯ ಅಧ್ಯಾಯವು

೧. ಸೂತಮುನಿಯು ಇಂತೆಂದನು—ಬಲಿರಾಜನಿಗೆ ಮಹಾಬಲ-ಪರಾಕ್ರಮಗಳಿಂದ ಕೂಡಿದ ಒಂದುನೂರುಮಂದಿ ಪುತ್ರರಿದ್ದರು. ಅವರಲ್ಲಿ ಮಹಾವಿಕ್ರಮಿಯೂ, ತೇಜಸ್ವಿಯೂ ಆದ ಬಾಣಾಸುರನು ಪ್ರಧಾನನಾಗಿದ್ದನು.

೨. ಅವನು ಮಹೇಶ್ವರನಾದ ಶಂಕರನಲ್ಲಿ ಪರಮಭಕ್ತನಾದ ರಾಜನಾಗಿ ರಾಜ್ಯವನ್ನು ಪಾಲಿಸಿದನು ಮತ್ತು ತ್ರಿಲೋಕಗಳನ್ನು ತನ್ನ ಶಾಸನಕ್ಕೆ ಅಧೀನವನ್ನಾಗಿ ಮಾಡಿ ಇಂದ್ರನನ್ನು ಪೀಡಿಸಿದನು.

ತತಃ ಶಕ್ರಾದಯೋ ದೇವಾಃ ಗತ್ವೋಚುಃ ಕೃತ್ತಿವಾಸಸಮ್ ।
ತ್ವದೀಯೋ ಬಾಧತೇ ಹ್ಯಸ್ಮಾನ್ ಬಾಣೋ ನಾಮ ಮಹಾಸುರಃ ॥ ೩ ॥

ವ್ಯಾಹೃತೋ ದೈವತೈಃ ಸರ್ವೈರ್ದೇವದೇವೋ ಮಹೇಶ್ವರಃ ।
ದದಾಹ ಬಾಣಸ್ಯ ಪುರಂ ಶರೇಣೈಕೇನ ಲೀಲಯಾ ॥ ೪ ॥

ದಹ್ಯಮಾನೇ ಪುರೇ ತಸ್ಮಿನ್ ಬಾಣೋ ರುದ್ರಂ ತ್ರಿಶೂಲಿನಮ್ ।
ಯಯೌ ಶರಣಮೀಶಾನಂ ಗೋಪತಿಂ ನೀಲಲೋಹಿತಮ್ ॥ ೫ ॥

ಮೂರ್ಧ್ನ್ಯಾಧಾಯ ತಲ್ಲಿಂಗಂ ಶಾಂಭವಂ ರಾಗವರ್ಜಿತಃ ।
ನಿರ್ಗತ್ಯ ತು ಪುರಾತ್ತಸ್ಮಾತ್ತುಷ್ಟಾವ ಪರಮೇಶ್ವರಮ್ ॥ ೬ ॥

---

೩. ತರುವಾಯ ಇಂದ್ರನೇ ಮುಂತಾದ ದೇವತೆಗಳು ಗಜಚರ್ಮಾಂಬರ ಧಾರಿಯಾದ ಈಶ್ವರನ ಸನ್ನಿಧಿಗೆ ಹೋಗಿ ಹೇಳಿದರು :—ನಿನ್ನ ಕಡೆಯವನಾದ ಬಾಣ ಎಂಬ ಮಹಾಸುರನು ನಮ್ಮನ್ನು ಬಾಧಿಸುತ್ತಿರುವನು.

೪. ಸಮಸ್ತ ದೇವತೆಗಳಿಂದ ಈ ರೀತಿಯಾಗಿ ವಿಜ್ಞಾಪಿಸಲ್ಪಟ್ಟ ದೇವ ದೇವನಾದ ಮಹೇಶ್ವರನು ಲೀಲೆಯನ್ನಾಡುವನಂತೆ ಒಂದೇ ಬಾಣದಿಂದ ಬಾಣಾಸುರನ ಪುರವನ್ನು ದಹಿಸಿದನು.

೫. ಬಾಣಾಸುರನು ತನ್ನ ನಗರವು ಸುಟ್ಟುಹೋಗುತ್ತಿರುವ ಸಮಯದಲ್ಲಿ ರುದ್ರರೂಪಿಯೂ, ತ್ರಿಶೂಲಧಾರಿಯೂ, ವೃಷಭವಾಹನಕ್ಕೆ ಪತಿಯೂ, ನೀಲ-ಲೋಹಿತವರ್ಣಗಳಿಂದ ಶೋಭಿತನೂ ಆದ ಈಶ್ವರನನ್ನು ಶರಣುಹೊಂದಿದನು.

೬. ಮತ್ತು ಶಂಭುವಿನ ಪೂಜ್ಯವಾದ ಲಿಂಗವನ್ನು ಶಿರದಲ್ಲಿ ಧರಿಸಿ ರಾಗದಿಂದ ವರ್ಜಿತನಾಗಿ ಆ ನಗರದಿಂದ ಹೊರಗೆ ಹೊರಟುಹೋಗಿ ಪರಮೇಶ್ವರನನ್ನು ಸ್ತೋತ್ರಮಾಡಿದನು.

ಸಂಸ್ತುತೋ ಭಗವಾನೀಶಃ ಶಂಕರೋ ನೀಲಲೋಹಿತಃ ।
ಗಾಣಪತ್ಯೇನ ಬಾಣಂ ತಂ ಯೋಜಯಾಮಾಸ ಭಾವತಃ ॥ ೭ ॥

ಅಥೈವಂ ಚ ದನೋಃ ಪುತ್ರಾಸ್ತಾರಾದ್ಯಾಶ್ಚಾತಿಭೀಷಣಾಃ ।
ತಾರಸ್ತಥಾ ಶಂಬರಶ್ಚ ಕಪಿಲಃ ಶಂಕರಸ್ತಥಾ
ಸ್ವರ್ಭಾನುರ್ವೃಷಪರ್ವಾ ಚ ಪ್ರಾಧಾನ್ಯೇನ ಪ್ರಕೀರ್ತಿತಾಃ ॥ ೮ ॥

ಸುರಸಾಯಾಃ ಸಹಸ್ರಂ ತು ಸರ್ಪಾಣಾಮಭವದ್ದ್ವಿಜಾಃ ।
ಅನೇಕಶಿರಸಾಂ ತದ್ವತ್ ಖೇಚರಾಣಾಂ ಮಹಾತ್ಮನಾಮ್ ॥ ೯ ॥

ಅರಿಷ್ಟಾ ಜನಯಾಮಾಸ ಗಂಧರ್ವಾಣಾಂ ಸಹಸ್ರಕಮ್ ।
ಅನಂತಾದ್ಯಾ ಮಹಾನಾಗಾಃ ಕಾದ್ರವೇಯಾಃ ಪ್ರಕೀರ್ತಿತಾಃ ॥ ೧೦ ॥

---

೭. ಆ ಬಾಣಾಸುರನಿಂದ ಸ್ತುತಿಸಿ ಪ್ರಾರ್ಥಿಸಲ್ಪಟ್ಟ, ಮಹೇಶ್ವರನೂ, ನೀಲ ಮತ್ತು ಲೋಹಿತವರ್ಣಯುಕ್ತನೂ, ಪೂಜ್ಯನೂ ಆದ ಈಶ್ವರನು ಆ ಬಾಣಾಸುರನನ್ನು ಪ್ರೇಮಭಾವದಿಂದ ಗಣಗಳ ಅಧಿಪತಿಯನ್ನಾಗಿ ನಿಯಮಿಸಿದನು.

೮. ತರುವಾಯ ಹೀಗೆಯೇ ದನು ಎಂಬುವಳ ಪುತ್ರರಾದ ತಾರ, ಶಂಬರ, ಕಪಿಲ, ಶಂಕರ, ಸ್ವರ್ಭಾನು, ವೃಷಪರ್ವ ಎಂಬ ಅತಿ ಭಯಂಕರರಾದ ದಾನವರು ಪ್ರಧಾನರಾಗಿ ಕೀರ್ತಿಸಲ್ಪಟ್ಟಿರುವರು.

೯. ವಿಪ್ರೋತ್ತಮರೇ! ಸುರಸಾ ಎಂಬುವಳಿಗೆ ಅನೇಕ ಶಿರಸ್ಸುಗಳಿಂದ ಕೂಡಿದ ಸಾವಿರಾರು ಸರ್ಪಗಳೂ ಮತ್ತು ಮಹಾತ್ಮರಾದ ಪಕ್ಷಿಗಳೂ ಪುತ್ರರಾಗಿ ಜನಿಸಿದರು.

೧೦. ಅರಿಷ್ಟಾ ಎಂಬಾಕೆಯು ಸಾವಿರಾರು ಮಂದಿ ಗಂಧರ್ವರನ್ನು ಪ್ರಸವಿಸಿದಳು. ಅನಂತ ಮುಂತಾದ ಮಹಾಸರ್ಪಗಳು ಕದ್ರು ಎಂಬುವಳ ಪುತ್ರರಾಗಿ ಕೀರ್ತಿಸಲ್ಪಟ್ಟಿರುವರು.

ತಾಮ್ರಾ ಚ ಜನಯಾಮಾಸ ಷಟ್ ಕನ್ಯಾ ದ್ವಿಜಪುಂಗವಾಃ ।
ಶುಕೀಂ ಶ್ಯೇನೀಂ ಚ ಭಾಸೀಂ ಚ ಸುಗ್ರೀವಾಂ ಗ್ರಂಥಿಕಾಂ ಶುಚಿಮ್॥೧೧

ಗಾಸ್ತಥಾ ಜನಯಾಮಾಸ ಸುರಭಿರ್ಮಹಿಷೀಸ್ತಥಾ ।
ಇರಾ ವೃಕ್ಷಲತಾವಲ್ಲೀಸ್ತೃಣಜಾತೀಶ್ಚ ಸರ್ವಶಃ ॥ ೧೨ ॥

ತಥಾ ವೈ ಯಕ್ಷರಕ್ಷಾಂಸಿ ಮುನಿರಪ್ಸರಸಸ್ತಥಾ ।
ರಕ್ಷೋಗಣಂ ಕ್ರೋಧವಶಾಜ್ಜನಯಾಮಾಸ ಸತ್ತಮಾಃ ॥ ೧೩ ॥

ವಿನತಾಯಾಶ್ಚ ಪುತ್ರೌ ದ್ವೌ ಪ್ರಖ್ಯಾತೌ ಗರುಡಾರುಣೌ ।
ತಯೋಶ್ಚ ಗರುಡೋ ಧೀಮಾನ್ ತಪಸ್ತಪ್ತ್ವಾ ಸುದುಶ್ಚರಮ್ ।
ಪ್ರಸಾದಾಚ್ಛೂಲಿನಃ ಪ್ರಾಪ್ತಂ ವಾಹನತ್ವಂ ಹರೇಃ ಸ್ವಯಮ್ ॥ ೧೪ ॥

---

೧೧. ದ್ವಿಜೋತ್ತಮರೇ! ತಾಮ್ರಾ ಎಂಬುವಳು ಶುಕೀ, ಶ್ಯೇನೀ, ಭಾಸೀ, ಸುಗ್ರೀವಾ, ಗ್ರಂಥಿಕಾ ಮತ್ತು ಶುಚಿ ಎಂಬ ನಾಮಾಂಕಿತರಾದ ಆರುಮಂದಿ ಕನ್ಯೆಯರನ್ನು ಹೊಂದಿದಳು.

೧೨. ಹಾಗು ಸುರಭಿ ಎಂಬುವಳು ಅನೇಕ ಗೋವುಗಳನ್ನೂ ಮತ್ತು ಮಹರ್ಷಿಗಳನ್ನೂ ಸಂತತಿಯನ್ನಾಗಿ ಹೊಂದಿದಳು. ಇರಾ ಎಂಬಾಕೆಯು ಮರ, ಬಳ್ಳಿ ಮತ್ತು ಹುಲ್ಲು ಮುಂತಾದ ಬಗೆಬಗೆಯ ಸ್ಥಾವರ ಜಾತಿಯ ಸಂತತಿಯನ್ನು ಹೊಂದಿದಳು.

೧೩. ಸಾಧುಶ್ರೇಷ್ಠರೇ! ಹಾಗೆ ಮುನಿ ಎಂಬುವಳು ಯಕ್ಷ-ರಾಕ್ಷಸ ಮತ್ತು ಅಪ್ಸರಸ್ತ್ರೀಯರನ್ನೂ ಮತ್ತು ಕ್ರೋಧಭಾವದ ವಶದಿಂದ ರಾಕ್ಷಸರ ಗುಂಪನ್ನೂ ಪ್ರಸವಿಸಿದಳು.

೧೪. ವಿನತಾ ಎಂಬುವಳಿಗೆ ಪ್ರಖ್ಯಾತರಾದ ಗರುಡ ಮತ್ತು ಅರುಣ ಎಂಬಿಬ್ಬರು ಪುತ್ರರಿದ್ದರು. ಅವರಲ್ಲಿ ಜ್ಞಾನಿಯಾದ ಗರುಡನೆಂಬ ಪುತ್ರನು ಅತ್ಯುಗ್ರವಾದ ತಪಸ್ಸನ್ನಾಚರಿಸಿ ಈಶ್ವರನ ಅನುಗ್ರಹದಿಂದ ಮಹಾವಿಷ್ಣುವಿನ ವಾಹನ ರೂಪವನ್ನು ಹೊಂದಿದನು.

ಆರಾಧ್ಯ ತಪಸಾ ದೇವಂ ಮಹಾದೇವಂ ತಥಾರುಣಃ ।
ಸಾರಥ್ಯೇ ಕಲ್ಪಿತಃ ಪೂರ್ವಂ ಪ್ರೀತೇನಾರ್ಕಸ್ಯ ಶಂಭುನಾ ॥ ೧೫ ॥

ಏತೇ ಕಶ್ಯಪದಾಯಾದಾಃ ಕೀರ್ತಿತಾಃ ಸ್ಥಾಣುಜಂಗಮಾಃ ।
ವೈವಸ್ವತೇಽಂತರೇ ಹ್ಯಸ್ಮಿಞ್ಛೃಣ್ವತಾಂ ಪಾಪನಾಶನಮ್ ॥ ೧೬ ॥

ಸಪ್ತವಿಂಶ ಸುತಾಃ ಪ್ರೋಕ್ತಾಃ ಸೋಮಪತ್ನ್ಯಶ್ಚ ಸುವ್ರತಾಃ ।
ಅರಿಷ್ಟನೇಮಿಪತ್ನೀನಾಮಪತ್ಯಾನಾಂ ಹ್ಯನೇಕಶಃ ॥ ೧೭ ॥

ಬಹುಪುತ್ರಸ್ಯ ವಿದುಷಶ್ಚತಸ್ರೋ ವಿದ್ಯುತಃ ಸ್ಮೃತಾಃ ।
ತದ್ವದಂಗಿರಸಃ ಶ್ರೇಷ್ಠಾ ಋಷಯೋ ವೃಷಸತ್ಕೃತಾಃ ॥ ೧೮ ॥

---

೧೫. ಹಾಗೆ ಅರುಣನು ಮಹೇಶ್ವರನಾದ ಶಂಕರನನ್ನು ತಪಸ್ಸಿನಿಂದ ಆರಾಧಿಸಲು ಪೂರ್ವದಲ್ಲಿ ಸುಪ್ರೀತನಾದ ಶಂಕರನಿಂದ ಸೂರ್ಯನ ಸಾರಥಿಯಾಗಿ ನಿಯಮಿಸಲ್ಪಟ್ಟನು.

೧೬. ಈ ಸ್ಥಾವರ ಮತ್ತು ಜಂಗಮಪ್ರಾಣಿಗಳು ಕಶ್ಯಪಮುನಿಯಿಂದ ಸಂತತಿಯಾಗಿ ವೈವಸ್ವತಮನ್ವಂತರದಲ್ಲಿ ಜನಿಸಿದುವೆಂದು ಕೀರ್ತಿಸಲ್ಪಟ್ಟಿರುವುವು. ಈ ಸಂಗತಿಯನ್ನು ಶ್ರವಣಮಾಡುವುದು ಪಾಪಭಂಜಕವಾಗಿದೆ.

೧೭. ತಪಸ್ವಿಗಳೇ ! ಚಂದ್ರನ ಪತ್ನಿಯಲ್ಲಿ ಜನಿಸಿದ ಇಪ್ಪತ್ತೇಳು ಮಂದಿ ಪುತ್ರರು ಹೇಳಲ್ಪಟ್ಟಿರುವರು. ಅರಿಷ್ಟನೇಮಿಯ ಪತ್ನಿಯರಲ್ಲಿ ಅನೇಕ ಪ್ರಕಾರವಾಗಿ ಸಂತತಿಯು ಪ್ರಸರಿಸಿರುವುದು.

೧೮. ಅವರಲ್ಲಿ ಜ್ಞಾನಿಯಾದ ಬಹುಪುತ್ರನೆಂಬುವನಿಗೆ ವಿದ್ಯುತ್ ಎಂಬ ನಾಲ್ಕು ಮಂದಿ ಕನ್ಯೆಯರು ಸ್ಮರಿಸಲ್ಪಟ್ಟಿರುವರು. ಅದರಂತೆ ಅಂಗಿರೋಮುನಿಗೆ ಧರ್ಮದೇವತೆಯಿಂದ ಸತ್ಕರಿಸಲ್ಪಟ್ಟ, ಶ್ರೇಷ್ಠರಾದ ಅನೇಕ ಮುನಿಗಳು ಪುತ್ರರಾಗಿ ಜನಿಸಿದರು.

ಕೃಶಾಶ್ವಸ್ಯ ತು ದೇವರ್ಷೇರ್ದೇವಃ ಪ್ರಹರಣಃ ಸುತಃ ।
ಏತೇ ಯುಗಸಹಸ್ರಾಂತೇ ಜಾಯಂತೇ ಪುನರೇವ ಹಿ ।
ಮನ್ವಂತರೇಷು ನಿಯತಂ ತುಲ್ಯಕಾರ್ಯೈಃ ಸ್ವನಾಮಭಿಃ ॥ ೧೯ ॥

ಇತಿ ಶ್ರೀಕೂರ್ಮಪುರಾಣೇಽಷ್ಟಾದಶೋಽಧ್ಯಾಯಃ

---

೧೯. ಕೃಶಾಶ್ವನೆಂಬ ದೇವರ್ಷಿಗೆ ದೇವತೆಗಳ ಉಪಯೋಗಕ್ಕೆ ಅರ್ಹವಾದ ಅಸ್ತ್ರಜಾಲವು ಸಂತತಿಯಾಗಿ ಜನಿಸಿತು. ಈ ಪ್ರಜೆಗಳು ಸಾವಿರಾರು ಯುಗಗಳ ಪರ್ಯಂತದಲ್ಲಿ ಸಂಭವಿಸುವ ಪ್ರತಿಯೊಂದು ಮನ್ವಂತರಗಳಲ್ಲಿಯೂ ತುಲ್ಯವಾದ ಸಂಜ್ಞೆ ಮತ್ತು ಪ್ರಯೋಜನದಿಂದ ಕೂಡಿ ತಪ್ಪದೆ ಮತ್ತೆ ಮತ್ತೆ ಜನಿಸುವರು.

ಕೂರ್ಮ ಪುರಾಣದಲ್ಲಿ ಹದಿನೆಂಟನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಕೂರ್ಮಪುರಾಣಂ

## ಏಕೋನವಿಂಶೋಽಧ್ಯಾಯಃ

### ( ಋಷಿವಂಶಕಥನಮ್ )

**ಸೂತ ಉವಾಚ :—**

**ಏತಾನುತ್ಪಾದ್ಯ ಪುತ್ರಾಂಸ್ತು ಪ್ರಜಾಸಂತಾನಕಾರಣಾತ್ ।**
**ಕಶ್ಯಪಃ ಪುತ್ರಕಾಮಸ್ತು ಚಚಾರ ಸುಮಹತ್ತಪಃ ॥ ೧ ॥**

**ತಸ್ಯೈವಂ ತಪತೋಽತ್ಯರ್ಥಂ ಪ್ರಾದುರ್ಭೂತೌ ಸುತಾವಿಮೌ ।**
**ವತ್ಸರಶ್ಚಾಸಿತಶ್ಚೈವ ತಾವುಭೌ ಬ್ರಹ್ಮವಾದಿನೌ ॥ ೨ ॥**

---

## ಹತ್ತೊಂಭತ್ತನೆಯ ಅಧ್ಯಾಯವು.

೧. ಸೂತಮುನಿಯು ಇಂತೆಂದನು :—ಕಶ್ಯಪಮಹರ್ಷಿಯು ಪ್ರಜಾಸಂತತಿಯ ಪ್ರಸಾರಕ್ಕೋಸ್ಕರ ಈ ಪುತ್ರರನ್ನು ಸೃಜಿಸಿ ಮತ್ತೆ ಪುತ್ರಕಾಮನಾಗಿ ಅತಿ ಮಹತ್ತಾದ ತಪವನ್ನು ಆಚರಿಸಿದನು.

೨. ಈ ರೀತಿಯಾಗಿ ಅತ್ಯಂತ ತಪೋನಿಷ್ಠೆಯಲ್ಲಿದ್ದ ಆ ಕಶ್ಯಪಮುನಿಗೆ ಬ್ರಹ್ಮವಾದಿಗಳಾದ ವತ್ಸರ, ಅಸಿತ ಎಂಬ ಇಬ್ಬರು ಪುತ್ರರು ಪ್ರಾದುರ್ಭವಿಸಿದರು.

ವತ್ಸರಾನ್ನೈಧ್ರುವೋ ಜಜ್ಞೇ ರೈಭ್ಯಶ್ಚ ಸುಮಹಾಯಶಾಃ ।
ರೈಭ್ಯಸ್ಯ ಜಜ್ಞಿರೇ ಶೂದ್ರಾಃ ಪುತ್ರಾಃ ಶ್ರುತಿಮತಾಂ ವರಾಃ ॥ ೩ ॥

ಚ್ಯವನಸ್ಯ ಸುತಾ ಭಾರ್ಯಾ ನೈಧ್ರುವಸ್ಯ ಮಹಾತ್ಮನಃ ।
ಸುಮೇಧಾ ಜನಯಾಮಾಸ ಪುತ್ರಾನ್ ವೈ ಕುಂಡಪಾಯಿನಃ ॥ ೪ ॥

ಅಸಿತಸ್ಯೈಕಪರ್ಣಾಯಾಂ ಬ್ರಹ್ಮಿಷ್ಠಃ ಸಮಪದ್ಯತ ।
ನಾಮ್ನಾ ವೈ ದೇವಲಂ ಪುತ್ರೋ ಯೋಗಾಚಾರ್ಯೋ ಮಹಾತಪಾಃ॥೫

ಶಾಂಡಿಲ್ಯಃ ಪರಮಃ ಶ್ರೀಮಾನ್ ಸರ್ವತತ್ತ್ವಾರ್ಥವಿಚ್ಛುಚಿಃ ।
ಪ್ರಸಾದಾತ್ ಪಾರ್ವತೀಶಸ್ಯ ಯೋಗಮುತ್ತಮವಾಪ್ತವಾನ್ ॥ ೬ ॥

---

೩. ಇವರಲ್ಲಿ ವತ್ಸರ ಎಂಬುವನಿಂದ ಮಹಾ ಯಶಸ್ವಿಯಾದ ನೈಧ್ರುವ, ರೈಭ್ಯ ಎಂಬ ಇಬ್ಬರು ಪುತ್ರರು ಜನಿಸಿದರು. ವೇದವಾದಿಗಳಲ್ಲಿ ಶ್ರೇಷ್ಠರಾದ ವಿಪ್ರರೇ! ರೈಭ್ಯನಿಗೆ ಬಹು ಮಂದಿ ಶೂದ್ರಪುತ್ರರು ಜನಿಸಿದರು.

೪. ಮಹಾತ್ಮನಾದ ನೈಧ್ರುವನ ಭಾರ್ಯೆಯೂ ಚ್ಯವನಮುನಿಯ ಕನ್ಯೆಯೂ ಆದ ಸುಮೇಧಾ ಎಂಬುವಳು ಕುಂಡಪಾಯಿ ಸತ್ರವನ್ನು ಆಚರಿಸಿದ ಧಾರ್ಮಿಕರಾದ ಪುತ್ರರನ್ನು ಹೊಂದಿದಳು.

೫. ಅಸಿತಮುನಿಗೆ ಏಕಪರ್ಣಾ ಎಂಬ ಭಾರ್ಯೆಯಲ್ಲಿ ಬ್ರಹ್ಮಿಷ್ಠನೂ, ಯೋಗಾಚಾರ್ಯನೂ ಮತ್ತು ಮಹಾ ತಪಸ್ವಿಯೂ ಆದ ದೇವಲ ಎಂಬ ನಾಮಾಂಕಿತನಾದ ಪುತ್ರನು ಜನಿಸಿದನು.

೬. ಸರ್ವೋತ್ತಮನೂ, ಶ್ರೀಮಂತನೂ, ಸಮಸ್ತ ತತ್ತ್ವಾರ್ಥಗಳನ್ನು ಅರಿತವನೂ ಮತ್ತು ಪವಿತ್ರನೂ ಆದ ಶಾಂಡಿಲ್ಯಮುನಿಯು ಪಾರ್ವತೀದೇವಿಯಾದ ಶಂಕರನ ಅನುಗ್ರಹದಿಂದ ಉಪದೇಶಿಸಲ್ಪಟ್ಟ ಯೋಗವಿಧಿಯನ್ನು ಹೊಂದಿದನು.

ಶಾಂಡಿಲ್ಯೋ ನೈಧ್ರುವೋ ರೈಭ್ಯಃ ತ್ರಯಃ ಪುತ್ರಾಸ್ತು ಕಾಶ್ಯಪಾಃ ।
ನರಪ್ರಕೃತಯೋ ವಿಪ್ರಾಃ ಪುಲಸ್ತ್ಯಸ್ಯ ವದಾಮಿ ವಃ ॥ ೭ ॥

ತೃಣಬಿಂದೋಃ ಸುತಾ ವಿಪ್ರಾ ನಾಮ್ನಾ ಐಲವಿಲಾ ಸ್ಮೃತಾ।
ಪುಲಸ್ತ್ಯಾಯ ತು ರಾಜರ್ಷಿಸ್ತಾಂ ಕನ್ಯಾಂ ಪ್ರತ್ಯಪಾದಯತ್ ॥ ೮ ॥

ಋಷಿಸ್ತ್ವೈಲವಿಲಸ್ತಸ್ಯಾಂ ವಿಶ್ರವಾಃ ಸಮಪದ್ಯತ ।
ತಸ್ಯ ಪತ್ನ್ಯಶ್ಚತಸ್ರಸ್ತು ಪೌಲಸ್ತ್ಯಕುಲವರ್ಧಿಕಾಃ ॥ ೯ ॥

ಪುಷ್ಪೋತ್ಕಟಾ ಚ ವಾಕಾ ಚ ಕೈಕಸೀ ದೇವವರ್ಣಿನೀ ।
ರೂಪಲಾವಣ್ಯಸಂಪನ್ನಾಸ್ತಾಸಾಂ ಚ ಶೃಣುತ ಪ್ರಜಾಃ ॥ ೧೦ ॥

---

೭. ಶಾಂಡಿಲ್ಯ, ನೈಧ್ರುವ ಮತ್ತು ರೈಭ್ಯ ಎಂಬ ಮಾನವಪ್ರಕೃತಿಯಿಂದ ಕೂಡಿ ಬ್ರಾಹ್ಮಣರು ಮೂರು ಮಂದಿ ಕಶ್ಯಪಮುನಿಯ ಪುತ್ರ ಸಂತತಿಯಲ್ಲಿ ಸೇರಿರುವರು. ಇನ್ನು ಮುಂದೆ ಪುಲಸ್ತ್ಯಮುನಿಯ ಸಂತತಿಯನ್ನು ವರ್ಣಿಸುತ್ತೇನೆ.

೮. ವಿಪ್ರರೇ ! ತೃಣಬಿಂದು ಎಂಬ ರಾಜರ್ಷಿಗೆ ಐಲವಿಲಾ ಎಂಬ ನಾಮಾಂಕಿತಳಾಗಿ ಸ್ಮರಿಸಲ್ಪಟ್ಟ ಒಬ್ಬಳು ಕನ್ಯೆಯಿದ್ದಳು. ರಾಜರ್ಷಿಯು ಆ ಕನ್ಯೆಯನ್ನು ಪುಲಸ್ತ್ಯಪ್ರಜಾಪತಿಗೆ ಕೊಟ್ಟನು.

೯. ಆ ಐಲವಿಲಾ ಎಂಬುವಳಲ್ಲಿ ವಿಶ್ರವಋಷಿಯು ಪುತ್ರನಾಗಿ ಜನಿಸಿದನು. ಆ ವಿಶ್ರವಋಷಿಗೆ ಪೌಲಸ್ತ್ಯ ವಂಶವನ್ನು ಪತಿಷ್ಠೆಗೊಳಿಸುವ ನಾಲ್ಕು ಮಂದಿ ಭಾರ್ಯೆಯರಿದ್ದರು.

೧೦. ರೂಪ ಲಾವಣ್ಯಗಳಿಂದ ಪರಿಪೂರ್ಣರಾದ ಆ ನಾಲ್ಕು ಮಂದಿಯೂ ಪುಷ್ಪೋತ್ಕಟಾ, ವಾಕಾ, ಕೈಕಸೀ ಮತ್ತು ದೇವವರ್ಣಿನೀ ಎಂಬ ನಾಮಾಂಕಿತರಾಗಿದ್ದರು. ಅವರ ಪ್ರಜೆಯನ್ನು ಕೇಳಿರಿ.

ಜ್ಯೇಷ್ಠಂ ವೈಶ್ರವಣಂ ತಸ್ಯ ಸುಷುವೇ ದೇವವರ್ಣಿನೀ ।
ಕೈಕಸ್ಯಜನಯತ್ಪುತ್ರಂ ರಾವಣಂ ರಾಕ್ಷಸಾಧಿಪಮ್ ॥ ೧೧ ॥

ಕುಂಭಕರ್ಣಂ ಶೂರ್ಪಣಖಾಂ ತಥೈವ ಚ ವಿಭೀಷಣಮ್ ।
ಪುಷ್ಪೋತ್ಕಟಾಪ್ಯಜನಯತ್ಪುತ್ರಾನ್ ವಿಶ್ರವಸಃ ಶುಭಾನ್ ॥ ೧೨ ॥

ಮಹೋದರಂ ಪ್ರಹಸ್ತಂ ಚ ಮಹಾಪಾರ್ಶ್ವಂ ಖರಂ ತಥಾ ।
ಕುಂಭೀನಸೀಂ ತಥಾ ಕನ್ಯಾಂ ವಾಕಾ ಯೋಃ ಸೃಜತೇ ಪ್ರಜಾಃ ॥ ೧೩ ॥

ತ್ರಿಶಿರಾ ದೂಷಣಶ್ಚೈವ ವಿದ್ಯುಜ್ಜಿಹ್ವೋ ಮಹಾಬಲಃ ।
ಇತ್ಯೇತೇ ಕ್ರೂರಕರ್ಮಾಣಃ ಪೌಲಸ್ತ್ಯಾ ರಾಕ್ಷಸಾ ದಶ ॥
ಸರ್ವೇ ತಪೋಬಲೋತ್ಕೃಷ್ಟಾ ರುದ್ರಭಕ್ತಾಃ ಸುಭೀಷಣಾಃ ॥ ೧೪ ॥

---

೧೧. ದೇವವರ್ಣಿನೀ ಎಂಬುವಳು ವೈಶ್ರವಣ ಅಥವಾ ಕುಬೇರನೆಂಬ ಜ್ಯೇಷ್ಠ ಪುತ್ರನನ್ನು ಪಡೆದಳು. ಕೈಕಸಿಯು ರಾಕ್ಷಸಾಧಿಪತಿಯಾದ ರಾವಣನೆಂಬ ಪುತ್ರನನ್ನು ಹೊಂದಿದಳು.

೧೨. ಮತ್ತು ಕೇಕಸಿಯು ಕುಂಭಕರ್ಣ, ವಿಭೀಷಣ ಎಂಬ ಪುತ್ರರನ್ನೂ, ಶೂರ್ಪಣಖೆ ಎಂಬ ಕನ್ಯೆಯನ್ನೂ ಹೊಂದಿದಳು. ಪುಷ್ಪೋತ್ಕಟ ಎಂಬುವಳು ವಿಶ್ರವ ಪತಿಯಿಂದ ಮಂಗಳಕರರಾದ ಪುತ್ರರನ್ನು ಪ್ರಸವಿಸಿದಳು.

೧೩. ಮಹೋದರ, ಪ್ರಹಸ್ತ, ಮಹಾಪಾರ್ಶ್ವ, ಖರ ಎಂಬ ಪುತ್ರರೂ ಕುಂಭಿನಸೀ ಎಂಬ ಕನ್ಯೆಯೂ ಪುಷ್ಪೋತ್ಕಟೆಯ ಸಂತತಿಯಲ್ಲಿ ಸೇರಿರುವರು. ಮುಂದೆ ವಾಕಾ ಎಂಬುವಳ ಸಂತತಿಯನ್ನು ಶ್ರವಣಮಾಡಿರಿ.

೧೪. ತ್ರಿಶಿರ, ದೂಷಣ, ವಿದ್ಯುಜ್ಜಿಹ್ವ ಮತ್ತು ಮಹಾಬಲ ಎಂಬುವರು ವಾಕಾ ಎಂಬುವಳ ಪುತ್ರರು. ಹೀಗೆ ಕ್ರೂರವಾದ ಕರ್ಮವುಳ್ಳ ಹತ್ತು ಮಂದಿ ರಾಕ್ಷಸರು ಪುಲಸ್ತ್ಯಪುತ್ರರಾಗಿ ಜನಿಸಿರುವರು. ಇವರೆಲ್ಲರೂ ತಪೋಮಹಿಮೆಯಲ್ಲಿ ಉತ್ಕೃಷ್ಟರೂ, ಈಶ್ವರನ ಭಕ್ತರೂ ಮತ್ತು ಭೀಷಣರೂ ಆಗಿರುವರು.

ಪುಲಹಸ್ಯ ಮೃಗಾಃ ಪುತ್ರಾಃ ಸರ್ವೇ ವ್ಯಾಲಾಶ್ಚ ದಂಷ್ಟ್ರಿಣಃ ।
ಭೂತಾಃ ಪಿಶಾಚಾ ಋಕ್ಷಾಶ್ಚ ಶೂಕರಾ ಹಸ್ತಿನಸ್ತಥಾ　　॥ ೧೫ ॥

ಅನಪತ್ಯಃ ಕ್ರತುಸ್ತಸ್ಮಿನ್ ಸ್ಮೃತೋ ವೈವಸ್ವತೇಽಂತರೇ ।
ಮರೀಚೇಃ ಕಶ್ಯಪಃ ಪುತ್ರಃ ಸ್ವಯಮೇವ ಪ್ರಜಾಪತಿಃ　　॥ ೧೬ ॥

ಭೃಗೋರಥಾಭವಚ್ಛುಕ್ರೋ ದೈತ್ಯಾಚಾರ್ಯೋ ಮಹಾತಪಾಃ ।
ಸ್ವಾಧ್ಯಾಯಯೋಗನಿರತೋ ಹರಭಕ್ತೋ ಮಹಾದ್ಯುತಿಃ　　॥ ೧೭ ॥

ಅತ್ರೇಃ ಪುತ್ರೋಽಭವದ್ವಹ್ನಿಃ ಸೋದರ್ಯಸ್ತಸ್ಯ ನೈಧ್ರುವಃ ।
ಕೃಶಾಶ್ವಸ್ಯ ತು ವಿಪ್ರರ್ಷೇಘೃತಾಚ್ಯಾಮಿತಿ ನಃ ಶ್ರುತಮ್　　॥ ೧೮ ॥

---

೧೫. ಪುಲಹಪ್ರಜಾಪತಿಗೆ ಜಿಂಕೆ, ಸರ್ಪ, (ಕೋರೆಹಲ್ಲಿನಪ್ರಾಣಿ) ಹುಲಿ, ಸಿಂಹ, ಭೂತ, ಪಿಶಾಚ, ಕರಡಿ, ವರಾಹ, ಆನೆ ಮುಂತಾದ ಸಮಸ್ತ ಪಶುಗಳು ಪುತ್ರರಾಗಿರುವರು.

೧೬. ಈ ವೈವಸ್ವತಮನ್ವಂತರದಲ್ಲಿ ಕ್ರತು ಎಂಬುವನು ಸಂತತಿರಹಿತನಾಗಿ ಸ್ಮರಿಸಲ್ಪಟ್ಟಿರುವನು. ಮರೀಚಿಮುನಿಯಲ್ಲಿ ಕಶ್ಯಪಪ್ರಜಾಪತಿಯು ತಾನೇ ಪುತ್ರನಾಗಿ ಜನಿಸಿರುವನು.

೧೭. ದೈತ್ಯರಿಗೆ ಆಚಾರ್ಯನೂ, ಮಹಾ ತಪಸ್ವಿಯೂ, ಸ್ವಾಧ್ಯಾಯ ಯೋಗದಲ್ಲಿ ತತ್ಪರನೂ, ಈಶ್ವರಭಕ್ತನೂ ಮತ್ತು ಮಹಾ ತೇಜಸ್ವಿಯೂ ಆದ ಶುಕ್ರಾಚಾರ್ಯನು ಭೃಗುಮುನಿಯ ಪುತ್ರನಾಗಿ ಜನಿಸಿದನು.

೧೮. ಅತ್ರಿಮಹರ್ಷಿಗೆ ಅಗ್ನಿಯು ಪುತ್ರನಾದನು. ಕೃಶಾಶ್ವನೆಂಬ ಬ್ರಹ್ಮರ್ಷಿಗೆ ಘೃತಾಚೀ ಎಂಬ ಅಪ್ಸರಾಂಗನೆಯಲ್ಲಿ ನೈಧ್ರುವನು ಔರಸಪುತ್ರನಾಗಿ ಜನಿಸಿದನೆಂದು ನಾವು ಕೇಳಿರುವೆವು.

ಸ ತಸ್ಯಾಂ ಜನಯಾಮಾಸ ಸ್ವಸ್ತ್ಯಾತ್ರೇಯಾನ್ಮಹೌಜಸಃ ।
ವೇದವೇದಾಂಗನಿರತಾನ್ ತಪಸಾ ಹತಕಿಲ್ಬಿಷಾನ್ ॥ ೧೯ ॥

ನಾರದಸ್ತು ವಸಿಷ್ಠಾಯ ದದೌ ದೇವೀಮರುಂಧತೀಮ್ ।
ಊರ್ಧ್ವರೇತಾಸ್ತು ತತ್ರೈವ ಶಾಪಾದ್ದಕ್ಷಸ್ಯ ನಾರದಃ ॥ ೨೦ ॥

ಹರ್ಯಶ್ವೇಷು ತು ನಷ್ಟೇಷು ಮಾಯಯಾ ನಾರದಸ್ಯ ತು ।
ಶಶಾಪ ನಾರದಂ ದಕ್ಷಃ ಕ್ರೋಧಸಂರಕ್ತಲೋಚನಃ ॥ ೨೧ ॥

ಯಸ್ಮಾನ್ಮಮ ಸುತಾಃ ಸರ್ವೇ ಭವತಾ ಮಾಯಯಾ ದ್ವಿಜ ।
ಕ್ಷಯಂ ನೀತಾಸ್ತ್ವಶೇಷೇಣ ನಿರಪತ್ಯೋ ಭವಿಷ್ಯತಿ ॥ ೨೨ ॥

---

೧೯. ಆ ಕೃಶಾಶ್ವಮುನಿಯು ಘೃತಾಚೀಮುನಿಯಲ್ಲಿ ವೇದವೇದಾಂಗಗಳಲ್ಲಿ ನಿರತರೂ, ತಪೋಮಹಿಮೆಯಿಂದ ಭಸ್ಮವಾದ ಪಾಪವುಳ್ಳವರೂ, ಮಹಾವರ್ಚಸ್ವಿಗಳೂ ಆದ ಸ್ವಸ್ತ್ಯಾತ್ರೇಯ ಎಂಬ ಪುತ್ರರನ್ನು ಸೃಜಿಸಿದನು.

೨೦. ನಾರದಮುನಿಯು ಅರುಂಧತೀ ದೇವಿಯನ್ನು ವಸಿಷ್ಠಮುನಿಗೆ ಭಾರ್ಯೆಯನ್ನಾಗಿ ಕೊಟ್ಟನು. ನಾರದಮುನಿಯು ಆ ಸಮಯದಲ್ಲಿ ದಕ್ಷಬ್ರಹ್ಮನ ಶಾಪದಿಂದ ಊರ್ಧ್ವರೇತನಾಗಿದ್ದನು.

೨೧. ನಾರದಮುನಿಯ ಮಾಯೆಯಿಂದ ದಕ್ಷಬ್ರಹ್ಮನ ಸಂತತಿಯಾದ ಹರ್ಯಶ್ವಪುತ್ರರು ನಾಶಹೊಂದಲು ಕ್ರೋಧದಿಂದ ಕೆಂಪಾದ ನೇತ್ರವುಳ್ಳ ದಕ್ಷಬ್ರಹ್ಮನು ನಾರದಮುನಿಯನ್ನು ಶಪಿಸಿದನು.

೨೨. ನಾರದಮುನಿಯೇ! ನನ್ನ ಸಮಸ್ತ ಪುತ್ರರೂ ನಿನ್ನಿಂದ ಮಾಯೆಯಿಂದ ಸಂಪೂರ್ಣವಾಗಿ ನಾಶಮಾಡಲ್ಪಟ್ಟಿರುವುದರಿಂದ ನೀನು ಸಂತತಿಯಿಲ್ಲದವನಾಗುತ್ತೀಯೆ.

ಅರುಂಧತ್ಯಾಂ ವಸಿಷ್ಠಸ್ತು ಶಕ್ತಿಮುತ್ಪಾದಯತ್ಸುತಮ್ ।
ಶಕ್ತೇಃ ಪರಾಶರಃ ಶ್ರೀಮಾನ್ ಸರ್ವಜ್ಞಸ್ತಪತಾಂ ವರಃ ॥ ೨೩ ॥

ಆರಾಧ್ಯ ದೇವದೇವೇಶಮೀಶಾನಂ ತ್ರಿಪುರಾಂತಕಮ್ ।
ಲೇಭೇ ತ್ವಪ್ರತಿಮಂ ಪುತ್ರಂ ಕೃಷ್ಣದ್ವೈಪಾಯನಂ ಪ್ರಭುಮ್ ॥ ೨೪ ॥

ದ್ವೈಪಾಯನಾಚ್ಛುಕೋ ಜಜ್ಞೇ ಭಗವಾನೇವ ಶಂಕರಃ ।
ಅಂಶಾಂಶೇನಾವತೀರ್ಯೋರ್ವ್ಯಾಂ ಸ್ವಂ ಪ್ರಾಪ ಪರಮಂ ಪದಮ್ ೨೫

ಶುಕಸ್ಯಾಸ್ಯಾಭವನ್ ಪುತ್ರಾಃ ಪಂಚಾತ್ಯಂತತಪಸ್ವಿನಃ ।
ಭೂರಿಶ್ರವಾಃ ಪ್ರಭುಃ ಶಂಭುಃ ಕೃಷ್ಣೋ ಗೌರಶ್ಚ ಪಂಚಮಃ ॥ ೨೬ ॥

---

೨೩. ವಸಿಷ್ಠಮುನಿಯು ಅರುಂಧತೀದೇವಿಯಲ್ಲಿ ಶಕ್ತಿ ಎಂಬ ಪುತ್ರನನ್ನು ಹೊಂದಿದನು. ಶಕ್ತಿ ಎಂಬುವನಿಗೆ ಶ್ರೀಮಂತನೂ, ಮಹಾಜ್ಞಾನಿಯೂ, ತಪಸ್ವಿ ಶ್ರೇಷ್ಠನೂ ಆದ ಪರಾಶರಮುನಿಯು ಪುತ್ರನಾದನು.

೨೪. ಪರಾಶರಮುನಿಯು ದೇವದೇವೋತ್ತಮನೂ, ತ್ರಿಪುರಾಸುರ ಸಂಹಾರಿಯೂ ಆದ ಈಶ್ವರನನ್ನು ಆರಾಧಿಸಿ ಸರ್ವದಕ್ಷನಾದ ಕೃಷ್ಣದ್ವೈಪಾಯನ ಎಂಬ ಅಪ್ರತಿಮ ಪುತ್ರನನ್ನು ಹೊಂದಿದನು.

೨೫. ಆ ಕೃಷ್ಣದ್ವೈಪಾಯನ ಮುನಿಯಿಂದ ಭಗವಂತನಾದ ಶಂಕರನೇ ಶುಕನೆಂಬ ಪುತ್ರರೂಪದಿಂದ ಹುಟ್ಟಿ ಭೂಮಿಯಲ್ಲಿ ಅಂಶಾಂಶದಿಂದ ಅವತರಿಸಿ ನೈಜವಾದ ಪರಮಪದವನ್ನು ಹೊಂದಿದನು.

೨೬. ಶುಕಮುನಿಗೆ ಅತ್ಯಂತ ತಪಸ್ವಿಗಳಾದ ಭೂರಿಶ್ರವ, ಪ್ರಭು, ಶಂಭು, ಕೃಷ್ಣ ಮತ್ತು ಗೌರ ಎಂಬ ನಾಮಾಂಕಿತರಾದ ಐದು ಮಂದಿ ಪುತ್ರರು ಜನಿಸಿದರು.

ಕನ್ಯಾ ಕೀರ್ತಿಮತೀ ಚೈವ ಯೋಗಮಾತಾ ಧೃಢವ್ರತಾ ।
ಏತೇಽತ್ರಿವಂಶಾಃ ಕಥಿತಾ ಬ್ರಹ್ಮಣಾ ಬ್ರಹ್ಮವಾದಿನಾಮ್ ॥ ೨೭ ॥

ಅತ ಊರ್ಧ್ವಂ ನಿಬೋಧಧ್ವಂ ಕಶ್ಯಪಾದ್ರಾಜಸಂತತಿಮ್ ॥ ೨೮ ॥

ಇತಿ ಶ್ರೀ ಕೂರ್ಮಪುರಾಣೇ ಏಕೋನವಿಂಶೋಽಧ್ಯಾಯಃ

---

೨೭, ಹಾಗೂ ಕೀರ್ತಿಮತಿ ಎಂಬ ನಾಮಾಂಕಿತಳೂ, ಯೋಗಮಾತೆಯೂ, ವ್ರತಧಾರಿಣಿಯೂ ಆದ ಕನ್ಯೆಯು ಜನಿಸಿದಳು. ಹೀಗೆ ಬ್ರಹ್ಮದೇವನಿಂದ ಬ್ರಹ್ಮವಾದಿ ಮುನಿಗಳಿಗೆ ಅತ್ರಿವಂಶ ವಿಸ್ತಾರಗಳು ಹೇಳಲ್ಪಟ್ಟವೆ.

೨೮. ಮಹರ್ಷಿಗಳೇ! ಇನ್ನು ಮುಂದೆ ಕಶ್ಯಪ ಪ್ರಜಾಪತಿ ಎಂಬ ಮೂಲ ಪುರುಷನಿಂದ ಹುಟ್ಟಿ ಬೆಳೆದ ರಾಜಾಧಿರಾಜರ ಸಂತತಿಯನ್ನು ಶ್ರವಣಮಾಡಿರಿ.

ಕೂರ್ಮಪುರಾಣದಲ್ಲಿ ಹತ್ತೊಂಭತ್ತನೆಯ ಅಧ್ಯಾಯವು ಸಮಾಪ್ತವು.



ಶ್ರೀಃ

# ಕೂರ್ಮಪುರಾಣಂ

---

## ವಿಂಶೋಽಧ್ಯಾಯಃ

### ( ರಾಜವಂಶಕೀರ್ತನಮ್ )

**ಸೂತ ಉವಾಚ :—**

**ಅದಿತಿಃ ಸುಷುವೇ ಪುತ್ರಮಾದಿತ್ಯಂ ಕಶ್ಯಪಾತ್ಪ್ರಭುಮ್ ।**
**ತಸ್ಯಾದಿತ್ಯಸ್ಯ ಚೈವಾಸೀದ್ಭಾರ್ಯಾಣಾಂ ತು ಚತುಷ್ಟಯಮ್ ॥ ೧ ॥**

**ಸಂಜ್ಞಾ ರಾಜ್ಞೀ ಪ್ರಭಾ ಛಾಯಾ ಪುತ್ರಾಂಸ್ತಾಸಾಂ ನಿಬೋಧತ ।**
**ಸಂಜ್ಞಾ ತ್ವಾಷ್ಟ್ರೀ ತು ಸುಷುವೇ ಸೂರ್ಯಾನ್ಮನುಮನುತ್ತಮಮ್ ॥೨॥**

---

### ಇಪ್ಪತ್ತನೆಯ ಅಧ್ಯಾಯವು.

೧. ಸೂತಮಹರ್ಷಿಯು ಇಂತೆಂದನು :—ಕಶ್ಯಪಮುನಿಯ ಭಾರ್ಯೆಯಾದ ಅದಿತಿದೇವಿಯು ಪ್ರಭುವಾದ ಆದಿತ್ಯನನ್ನು ಪುತ್ರನನ್ನಾಗಿ ಪ್ರಸವಿಸಿದಳು. ಆ ಆದಿತ್ಯನಿಗೆ ನಾಲ್ಕುಮಂದಿ ಭಾರ್ಯೆಯರಿದ್ದರು.

೨. ಸಂಜ್ಞೆ, ರಾಜ್ಞೀ, ಪ್ರಭಾ ಮತ್ತು ಛಾಯಾ ಎಂಬ ನಾಮಾಂಕಿತರಾದ ಆ ಭಾರ್ಯೆಯರ ಪ್ರಜೆಯನ್ನು ಕೇಳಿರಿ. ತ್ವಷ್ಟೃಬ್ರಹ್ಮನ ಪುತ್ರಿಯಾದ ಸಂಜ್ಞಾ ದೇವಿಯು ಸೂರ್ಯನಿಂದ ಸರ್ವೋತ್ತಮನಾದ ಮನುರಾಜನನ್ನು ಪ್ರಸವಿಸಿದಳು.

ಯಮಂ ಚ ಯಮುನಾಂ ಚೈವ ರಾಜ್ಞೀ ರೇವಂತಮೇವ ಚ ।
ಪ್ರಭಾ ಪ್ರಭಾತಮಾದಿತ್ಯಾ ಛಾಯಾ ಸಾವರ್ಣಿಮಾತ್ಮಜಮ್ ॥ ೩ ॥

ಶನಿಂ ಚ ತಪತೀಂ ಚೈವ ವಿಷ್ಟಿಂ ಚೈವ ಯಥಾಕ್ರಮಮ್ ।
ಮನೋಸ್ತು ಪ್ರಥಮಸ್ಯಾಸನ್ನವ ಪುತ್ರಾಸ್ತು ತತ್ಸಮಾಃ ॥ ೪ ॥

ಇಕ್ಷ್ವಾಕುಶ್ಚೈವ ನಾಭಾಗೋ ಧೃಷ್ಟಃ ಶರ್ಯಾತಿರೇವ ಚ ।
ನರಿಷ್ಯಂತಶ್ಚ ನಾಭಾಗೋ ಹ್ಯರಿಷ್ಟಃ ಕರುಷಸ್ತಥಾ ॥ ೫ ॥

ಪೃಷಧ್ರಶ್ಚ ಮಹಾತೇಜಾ ನವೈತೇ ಶಕ್ರಸನ್ನಿಭಾಃ ।
ಇಲಾ ಜ್ಯೇಷ್ಠಾ ವರಿಷ್ಠಾ ಚ ಸೋಮವಂಶಂ ವ್ಯವರ್ಧಯತ್ ॥ ೬ ॥

ಬುಧಸ್ಯ ಗತ್ವಾ ಭವನಂ ಸೋಮಪುತ್ರೇಣ ಸಂಗತಾ ।
ಅಸೂತ ಸೋಮಜಾದ್ದೇವೀ ಪುರೂರವಸಮುತ್ತಮಮ್ ॥ ೭ ॥

---

೩. ರಾಜ್ಞೀದೇವಿಯು ಯಮ, ಯಮುನಾ ಮತ್ತು ರೇವಂತ ಎಂಬ ಪುತ್ರರನ್ನೂ ಪ್ರಭಾ ಎಂಬುವಳು ಪ್ರಭಾತ ಎಂಬ ಪುತ್ರನನ್ನೂ ಹೊಂದಿದರು. ಹಾಗೆ ಛಾಯಾ ಎಂಬುವಳು ಸಾವರ್ಣಿ ಎಂಬ ಪುತ್ರನನ್ನು ಹೊಂದಿದಳು.

೪. ಮತ್ತು ಛಾಯಾದೇವಿಯಲ್ಲಿ ಶನಿ, ತಪತೀ, ವಿಷ್ಟಿ, ಎಂಬುವರು ಕ್ರಮವಾಗಿ ಜನಿಸಿದರು. ಇವರಲ್ಲಿ ಜ್ಯೇಷ್ಠನಾದ ಮನುರಾಜನಿಗೆ ತನಗೆ ಸಮಾನರಾದ ಒಂಭತ್ತು ಮಂದಿ ಪುತ್ರರಿದ್ದರು.

೫. ಆ ಪುತ್ರರಲ್ಲಿ ಇಕ್ಷ್ವಾಕು, ನಾಭಾಗ, ಧೃಷ್ಟ, ಶರ್ಯಾತಿ, ನರಿಷ್ಯಂತ, ನಾಭಾಗ, ಅರಿಷ್ಟ ಮತ್ತು ಕರುಷ ಎಂಬ ಸಂಜ್ಞಾಂಕಿತರು ಸೇರಿರುವರು.

೬. ಮತ್ತು ಮಹಾತೇಜಸ್ವಿಯಾದ ಪೃಷಧ್ರ ಎಂಬುವನು ಸೇರಿ ಈ ಒಂಭತ್ತು ಮಂದಿಯು ದೇವೇಂದ್ರನಿಗೆ ಸಮಾನರೆಂದೆನಿಸಿದ್ದರು. ಇಲಾ ಎಂಬ ಜೇಷ್ಠಳೂ ಶ್ರೇಷ್ಠಳೂ ಆದ ಸತಿಯು ಚಂದ್ರವಂಶವನ್ನು ಬೆಳಗಿದಳು.

೭. ಆ ಇಲಾದೇವಿಯು ಬುಧನ ಗೃಹಕ್ಕೆ ಹೋಗಿ ಸೋಮಪುತ್ರನಾದ ಬುಧನ ಸಂಪರ್ಕವನ್ನು ಹೊಂದಿ ಪುರೂರವನೆಂಬ ಪುತ್ರನನ್ನು ಪ್ರಸವಿಸಿದಳು.

ಪಿತೄಣಾಂ ತೃಪ್ತಿಕರ್ತಾರಂ ಬುಧಾದಿತಿ ಹಿ ನಃ ಶ್ರುತಮ್ ।
ಪ್ರಾಪ್ಯ ಪುತ್ರಂ ಸುವಿಮಲಂ ಸುದ್ಯುಮ್ನ ಇತಿ ವಿಶ್ರುತಮ್ ॥ ೮ ॥

ಇಲಾ ಪುತ್ರತ್ರಯಂ ಲೇಭೇ ಪುನಃ ಸ್ತ್ರೀತ್ವಮವಿಂದತ ।
ಉತ್ಕಲಂ ಚ ಗಯಂ ಚೈವ ವಿನತಂ ಚ ತಥೈವ ಚ ॥ ೯ ॥

ಸರ್ವೇ ತೇಽಪ್ರತಿಮಪ್ರಖ್ಯಾಃ ಪ್ರಪನ್ನಾಃ ಕಮಲೋದ್ಭವಮ್ ।
ಇಕ್ಷ್ವಾಕೋಶ್ಚಾಭವದ್ವೀರೋ ವಿಕುಕ್ಷಿರ್ನಾಮ ಪಾರ್ಥಿವಃ ॥ ೧೦ ॥

ಜ್ಯೇಷ್ಠಪುತ್ರಃ ಸ ತಸ್ಯಾಸೀದ್ದಶ ಪಂಚ ಚ ತತ್ಸುತಾಃ ।
ತೇಷಾಂ ಜ್ಯೇಷ್ಠಃ ಕಕುತ್ಸ್ಥೋಽಭೂತ್ ಕಾಕುತ್ಸ್ಥಸ್ತು ಸುಯೋಧನಃ

ಸುಯೋಧನಾತ್ ಪೃಥುಃ ಶ್ರೀಮಾನ್ ವಿಶ್ವಕಶ್ಚ ಪೃಥೋಃ ಸುತಃ ।
ವಿಶ್ವಕಾದಾರ್ದ್ರಕೋ ಧೀಮಾನ್ ಯುವನಾಶ್ವಶ್ಚ ತತ್ಸುತಃ ॥ ೧೨ ॥

---

೮. ಬುಧಪುತ್ರನಾದ ಆ ಪುರೂರವನು ಪಿತೃದೇವತೆಗಳಿಗೆ ತೃಪ್ತಿಯನ್ನು ಉಂಟುಮಾಡಿದನೆಂದು ನಾವು ಕೇಳಿರುವೆವು. ಮತ್ತು ಆ ಇಳಾದೇವಿಯು ಸುದ್ಯುಮ್ನನೆಂದು ಪ್ರಸಿದ್ಧನಾದ ನಿರ್ದುಷ್ಟ ಪುತ್ರನನ್ನು ಹೊಂದಿದಳು.

೯. ಇಳಾದೇವಿಯು ಮತ್ತೆ ಸ್ತ್ರೀತ್ವವನ್ನು ಹೊಂದಿ ಉತ್ಕಲ ಗಯ ವಿನತ ಎಂಬ ಮೂರು ಮಂದಿ ಪುತ್ರರನ್ನು ಹೊಂದಿದಳು.

೧೦. ಆ ಪುತ್ರರೆಲ್ಲರೂ ನಿರುಪಮವಾದ ಪ್ರಸಿದ್ಧಿಯುಳ್ಳವರಾಗಿ ಕಮಲಾಸನನಾದ ಬ್ರಹ್ಮದೇವನನ್ನು ಭಜಿಸಿದರು. ಇಕ್ಷ್ವಾಕುರಾಜನಿಂದ ವಿಕುಕ್ಷಿ ಎಂಬ ವೀರರಾಜನು ಪುತ್ರನಾಗಿ ಜನಿಸಿದನು.

೧೧. ಆ ವಿಕುಕ್ಷಿಯು ಇಕ್ಷ್ವಾಕುವಿನ ಜ್ಯೇಷ್ಠ ಪುತ್ರನಾಗಿದ್ದನು. ಅವನಿಗೆ ಹದಿನೈದು ಮಂದಿ ಪುತ್ರರಿದ್ದರು. ಅವರಲ್ಲಿ ಕಕುತ್ಸ್ಥನೆಂಬುವನು ಜ್ಯೇಷ್ಠಪುತ್ರನಾಗಿದ್ದನು. ಆ ಕತುತ್ಸ್ಥನಿಗೆ ಸುಯೋಧನನೆಂಬ ಪುತ್ರನು ಹುಟ್ಟಿದನು.

೧೨. ಆ ಸುಯೋಧನಿಗೆ ಶ್ರೀಮಂತನಾದ ಪೃಥು ಎಂಬುವನೂ ಪೃಥುವಿಗೆ ವಿಶ್ವಕ ಎಂಬುವನೂ, ವಿಶ್ವಕನಿಗೆ ಆರ್ದ್ರಕ ಎಂಬುವನೂ ಮತ್ತು ಆರ್ದ್ರಕನಿಗೆ ಜ್ಞಾನಿಯಾದ ಯುವನಾಶ್ವ ಎಂಬುವನೂ ಪುತ್ರರಾಗಿ ಜನಿಸಿದರು.

ಸ ಗೋಕರ್ಣಮನುಪ್ರಾಪ್ಯ ಯುವನಾಶ್ವಃ ಪ್ರತಾಪವಾನ್ ।
ದೃಷ್ಟ್ವಾಽಸೌ ಗೌತಮಂ ವಿಪ್ರಂ ತಪಂತಮನಲಪ್ರಭಮ್ ॥ ೧೩ ॥

ಪ್ರಣಮ್ಯ ದಂಡವದ್ಭೂಮೌ ಪುತ್ರಕಾಮೋ ಮಹೀಪತಿಃ ।
ಅಪೃಚ್ಛತ್ಕರ್ಮಣಾ ಕೇನ ಧಾರ್ಮಿಕಂ ಪ್ರಾಪ್ನುಯಾತ್ಸುತಮ್ ॥ ೧೪ ॥

ಗೌತಮ ಉವಾಚ :—

ಆರಾಧ್ಯ ಪುರುಷಂ ಪೂರ್ವಂ ನಾರಾಯಣಮನಾಮಯಮ್ ।
ಅನಾದಿನಿಧನಂ ದೇವಂ ಧಾರ್ಮಿಕಂ ಪ್ರಾಪ್ನುಯಾತ್ ಸುತಮ್ ॥ ೧೫ ॥

ತಸ್ಯ ಪುತ್ರಃ ಸ್ವಯಂ ಬ್ರಹ್ಮಾ ಪೌತ್ರಃ ಸ್ಯಾನ್ನೀಲಲೋಹಿತಃ ।
ತಮಾದಿಕೃಷ್ಣಮೀಶಾನಮಾರಾಧ್ಯಾಪ್ನೋತಿ ಸತ್ಸುತಮ್ ॥ ೧೬ ॥

---

೧೩. ಪ್ರತಾಪಶಾಲಿಯಾದ ಆ ಯುವನಾಶ್ವರಾಜನು ಗೋಕರ್ಣ ಕ್ಷೇತ್ರವನ್ನು ಹೊಂದಿ ಅಲ್ಲಿ ತಪಿಸುತ್ತಿದ್ದ ಅಗ್ನಿಯಂತೆ ಮಹಾತೇಜಸ್ವಿಯಾದ ಗೌತಮ ಎಂಬ ಬ್ರಹ್ಮರ್ಷಿಯನ್ನು ನೋಡಿದನು.

೧೪. ಅಲ್ಲಿ ಪುತ್ರಕಾಮನೆಯುಳ್ಳ ಯುವನಾಶ್ವರಾಜನು ದಂಡಾಕಾರವಾಗಿ ಭೂಮಿಯಲ್ಲಿ ನಮಸ್ಕರಿಸಿ ಯಾವ ಪುಣ್ಯಕರ್ಮದಿಂದ ಧಾರ್ಮಿಕನಾದ ಪುತ್ರನನ್ನು ತಾನು ಹೊಂದುವೆನೆಂದು ಕೇಳಿಕೊಂಡನು.

೧೫. ಗೌತಮಮುನಿಯು ಇಂತೆಂದನು :—ಪುರಾಣ ಪುರುಷನೂ, ನಿರ್ವಿಕಾರನೂ, ಆದಿ-ಅಂತ ವರ್ಜಿತನೂ, ಆದ ನಾರಾಯಣಸ್ವಾಮಿಯನ್ನು ಆರಾಧಿಸಿ ಅದರ ಬಲದಿಂದ ಧಾರ್ಮಿಕನಾದ ಪುತ್ರನನ್ನು ಹೊಂದಬಹುದು.

೧೬. ಆ ನಾರಾಯಣನಿಗೆ ಬ್ರಹ್ಮದೇವನು ಪುತ್ರನಾಗಿಯೂ, ನೀಲ-ಲೋಹಿತ ವರ್ಣಗಳಿಂದ ಕೂಡಿದ ರುದ್ರನು ಪೌತ್ರನಾಗಿಯೂ ಇರುವರು. ಅಂತಹ ಸರ್ವೇಶ್ವರನಾದ ಆದಿ ವಿಷ್ಣುವನ್ನು ಪೂಜಿಸಿ ಸತ್ಪುತ್ರನನ್ನು ಹೊಂದಬಹುದು.

ನ ಯಸ್ಯ ಭಗವಾನ್ ಬ್ರಹ್ಮಾ ಪ್ರಭಾವಂ ವೇತ್ತಿ ತತ್ತ್ವತಃ ।
ತಮಾರಾಧ್ಯ ಹೃಷೀಕೇಶಂ ಪ್ರಾಪ್ನುಯಾದ್ಧಾರ್ಮಿಕಂ ಸುತಮ್ ॥ ೧೭ ॥

ಸ ಗೌತಮವಚಃ ಶ್ರುತ್ವಾ ಯುವನಾಶ್ವೋ ಮಹೀಪತಿಃ ।
ಆರಾಧಯನ್ ಹೃಷೀಕೇಶಂ ವಾಸುದೇವಂ ಸನಾತನಮ್ ॥ ೧೮ ॥

ತಸ್ಯ ಪುತ್ರೋಽಭವದ್ವೀರಃ ಸಾವಸ್ತಿರಿತಿ ವಿಶ್ರುತಃ ।
ನಿರ್ಮಿತಾ ಯೇನ ಸಾವಸ್ತಿರ್ಗೌಡದೇಶೇ ಮಹಾಪುರೀ ॥ ೧೯ ॥

ತಸ್ಮಾಚ್ಚ ಬೃಹದಶ್ವೋಽಭೂತ್ತಸ್ಮಾತ್ ಕುವಲಯಾಶ್ವಕಃ ।
ಧುಂಧುಮಾರಃ ಸಮಭವತ್ ಧುಂಧುಂ ಹತ್ವಾ ಮಹಾಸುರಮ್ ॥ ೨೦ ॥

---

೧೭. ಪೂಜ್ಯನಾದ ಬ್ರಹ್ಮದೇವನು ಯಾವ ವಿಷ್ಣುವಿನ ಮಹಿಮೆಯನ್ನು ತಾತ್ವಿಕವಾಗಿ ಅರಿಯಲಿಲ್ಲವೋ, ಅಂತಹ ಸರ್ವೇಂದ್ರಿಯ ಪ್ರೇರಕನಾದ ಪರಮಾತ್ಮ ನನ್ನು ಆರಾಧಿಸಿ ಧಾರ್ಮಿಕ ಪುತ್ರನನ್ನು ಹೊಂದಬಹುದು.

೧೮. ಯುವನಾಶ್ವ ಮಹಾರಾಜನು ಗೌತಮಮುನಿಯ ಈ ವಚನವನ್ನು ಶ್ರವಣಮಾಡಿ ಸರ್ವೇಂದ್ರಿಯ ಪ್ರೇರಕನೂ, ಅನಾದಿಯೂ ಆದ ವಾಸುದೇವನನ್ನು ಆರಾಧಿಸಿದನು.

೧೯. ಆಗ ಅವನಿಗೆ ಗೌಡದೇಶದಲ್ಲಿ ಸಾವಸ್ತಿ ಎಂಬ ಮಹಾನಗರಿಯನ್ನು ನಿರ್ಮಾಣಮಾಡಿರುವ ಸಾವಸ್ತಿ ಎಂಬ ನಾಮಾಂಕನದಿಂದ ಪ್ರಸಿದ್ಧನಾದ ವೀರ ಪುತ್ರನು ಜನಿಸಿದನು.

೨೦. ಆ ಸಾವಸ್ತಿಯಿಂದ ಬೃಹದಶ್ವನೂ, ಬೃಹದಶ್ವನಿಂದ ಕುವಲಯಾಶ್ವನೂ, ಪುತ್ರರಾಗಿ ಜನಿಸಿದರು. ಆ ಕುವಲಯಾಶ್ವನು ಧುಂಧು ಎಂಬ ಮಹಾಸುರನನ್ನು ಸಂಹರಿಸಿ ಧುಂಧುಮಾರ ಎಂಬ ಅನ್ವರ್ಥನಾಮವನ್ನು ಹೊಂದಿದನು.

ಧುಂಧುಮಾರಸ್ಯ ತನಯಾಸ್ತ್ರಯಃ ಪ್ರೋಕ್ತಾ ದ್ವಿಜೋತ್ತಮಾಃ ।
ದೃಢಾಶ್ವಶ್ಚೈವ ದಂಡಾಶ್ವಃ ಕಪಿಲಾಶ್ವಸ್ತಥೈವ ಚ ॥ ೨೧ ॥

ದೃಢಾಶ್ವಸ್ಯ ಪ್ರಮೋದಸ್ತು ಹರ್ಯಶ್ವಸ್ತಸ್ಯ ಚಾತ್ಮಜಃ ।
ಹರ್ಯಶ್ವಸ್ಯ ನಿಕುಂಭಸ್ತು ನಿಕುಂಭಾತ್ ಸಂಹತಾಶ್ವಕಃ ॥ ೨೨ ॥

ಕೃತಾಶ್ವೋಽಥ ರಣಾಶ್ವಶ್ಚ ಸಂಹಿತಾಶ್ವಸ್ಯ ವೈ ಸುತಾಃ ।
ಯುವನಾಶ್ವೋ ರಣಾಶ್ವಸ್ಯ ಶಕ್ರತುಲ್ಯಬಲೋ ಯುಧಿ ॥ ೨೩ ॥

ಕೃತ್ವಾ ತು ವಾರುಣೀಮಿಷ್ಟಿಮೃಷೀಣಾಂ ವೈ ಪ್ರಸಾದತಃ ।
ಲೇಭೇ ತ್ವಪ್ರತಿಮಂ ಪುತ್ರಂ ವಿಷ್ಣುಭಕ್ತಮನುತ್ತಮಮ್ ॥ ೨೪ ॥

---

೨೧. ದ್ವಿಜಶ್ರೇಷ್ಠರೇ! ಧುಂಧುಮಾರನಿಗೆ ದೃಢಾಶ್ವ, ದಂಡಾಶ್ವ, ಕಪಿಲಾಶ್ವ ಎಂಬ ನಾಮಾಂಕಿತರಾದ ಮೂರು ಮಂದಿ ಮಕ್ಕಳು ಜನಿಸಿದರೆಂದು ಹೇಳಲ್ಪಟ್ಟಿರುವರು.

೨೨. ದೃಢಾಶ್ವನಿಗೆ ಪ್ರಮೋದನೆಂಬ ಪುತ್ರನೂ, ಅವನಿಗೆ ಹರ್ಯಶ್ವನೆಂಬ ಪುತ್ರನೂ, ಅವನಿಗೆ ನಿಕುಂಭ ಎಂಬ ಪುತ್ರನೂ ಮತ್ತು ನಿಕುಂಭನಿಗೆ ಸಂಹತಾಶ್ವನೆಂಬ ಪುತ್ರನೂ ಇದ್ದರು.

೨೩. ಆ ಸಂಹತಾಶ್ವನೆಂಬುವನಿಗೆ ಕೃತಾಶ್ವ, ರಣಾಶ್ವ ಎಂಬ ಇಬ್ಬರು ಪುತ್ರರಿದ್ದರು. ಅವರಲ್ಲಿ ರಣಾಶ್ವನಿಗೆ ಸಂಗ್ರಾಮದಲ್ಲಿ ದೇವೇಂದ್ರನಿಗೆ ತುಲ್ಯವಾದ ವಿಕ್ರಮವುಳ್ಳ ಯುವನಾಶ್ವನೆಂಬ ಪುತ್ರನಿದ್ದನು.

೨೪. ಆ ಯುವನಾಶ್ವನು ಮಹರ್ಷಿಗಳ ಅನುಗ್ರಹದಿಂದ ವರುಣ ದೇವತಾಕವಾದ ಇಷ್ಟಿಯನ್ನು ಮಾಡಿ ವಿಷ್ಣುಭಕ್ತನೂ, ಸರ್ವೋತ್ತಮನೂ ಮತ್ತು ನಿರುಪಮನೂ ಆದ ಪುತ್ರನನ್ನು ಹೊಂದಿದನು.

ಮಾಂಧಾತಾರಂ ಮಹಾಪ್ರಾಜ್ಞಂ ಸರ್ವಶಸ್ತ್ರಭೃತಾಂ ವರಮ್ ।
ಮಾಂಧಾತುಃ ಪುರುಕುತ್ಸೋಽಭೂದಂಬರೀಷಶ್ಚ ವೀರ್ಯವಾನ್ ॥೨೫॥

ಮುಚುಕುಂದಶ್ಚ ಪುಣ್ಯಾತ್ಮಾ ಸರ್ವೇ ಶಕ್ರಸಮಾ ಯುಧಿ ।
ಅಂಬರೀಷಸ್ಯ ದಾಯಾದೋ ಯುವನಾಶ್ವೋಽಪರಃ ಸ್ಮೃತಃ ॥ ೨೬ ॥

ಹರಿತೋ ಯುವನಾಶ್ವಸ್ಯ ಹಾರೀತಸ್ತತ್ಸುತೋಽಭವತ್ ।
ಪುರುಕುತ್ಸಸ್ಯ ದಾಯಾದಸ್ತ್ರಸದಸ್ಯುರ್ಮಹಾಯಶಾಃ ॥ ೨೭ ॥

ನರ್ಮದಾಯಾಂ ಸಮುತ್ಪನ್ನಃ ಸಂಭೂತಿಸ್ತತ್ಸುತಃ ಸ್ಮೃತಃ ।
ವಿಷ್ಣುವೃದ್ಧಃ ಸುತಸ್ತಸ್ಯ ತ್ವನರಣ್ಯೋಽಭವತ್ತತಃ ।
ಬೃಹದಶ್ವೋಽನರಣ್ಯಸ್ಯ ಹರ್ಯಶ್ವಸ್ತತ್ಸುತೋಽಭವತ್ ॥ ೨೮ ॥

---

೨೫. ಆ ಪುತ್ರನು ಮಹಾಪ್ರಾಜ್ಞನೂ, ಶಸ್ತ್ರಧಾರಿಗಳಲ್ಲೆಲ್ಲಾ ಶ್ರೇಷ್ಠನೂ, ಮತ್ತು ಮಾಂಧಾತಾ ಎಂದು ಪ್ರಸಿದ್ಧನೂ ಆಗಿದ್ದನು. ಮಾಂಧಾತನಿಗೆ ಹುಟ್ಟಿದ ಪುತ್ರರಲ್ಲಿ ವೀರ್ಯವಂತರಾದ ಪುರುಕುತ್ಸ ಮತ್ತು ಅಂಬರೀಷ ಎಂಬುವರು ಸೇರಿದ್ದರು.

೨೬. ಮತ್ತು ಪವಿತ್ರಾತ್ಮನಾದ ಮುಚುಕುಂದನೂ ಸೇರಿ ಮೂರು ಮಂದಿ ಪುತ್ರರು ಯುದ್ಧರಂಗದಲ್ಲಿ ದೇವೇಂದ್ರನಿಗೆ ತುಲ್ಯರಾಗಿದ್ದರು. ಅಂಬರೀಷನಿಗೆ ಪುತ್ರನಾಗಿ ಮತ್ತೊಬ್ಬ ಯುವನಾಶ್ವ ಎಂಬುವನು ಸ್ಮರಿಸಲ್ಪಟ್ಟಿರುವನು.

೨೭. ಯುವನಾಶ್ವನಿಗೆ ಹರಿತನೆಂಬ ಪುತ್ರನಿದ್ದನು. ಹರಿತನಿಗೆ ಹಾರೀತನೆಂಬ ಪುತ್ರನು ಜನಿಸಿದನು. ಪುರುಕುತ್ಸನಿಗೆ ಮಹಾಯಶಸ್ವಿಯಾದ ತ್ರಸದಸ್ಯು ಎಂಬ ಪುತ್ರನು ಹುಟ್ಟಿದನು.

೨೮. ಆ ತ್ರಸದಸ್ಯುವಿಗೆ ನರ್ಮದಾ ಎಂಬಾಕೆಯಲ್ಲಿ ಸಂಭೂತಿ ಎಂಬ ಪುತ್ರನು ಜನಿಸಿದನೆಂದು ಸ್ಮರಿಸಲ್ಪಟ್ಟಿರುವನು. ಸಂಭೂತಿಗೆ ವಿಷ್ಣುವೃದ್ಧನೆಂಬ ಪುತ್ರನೂ, ವಿಷ್ಣುವೃದ್ಧನಿಗೆ ಅನರಣ್ಯ ಎಂಬ ಪುತ್ರನೂ, ಅನರಣ್ಯನಿಗೆ ಬೃಹದಶ್ವನೆಂಬ ಪುತ್ರನೂ ಮತ್ತು ಆ ಬೃಹದಶ್ವನಿಗೆ ಹರ್ಯಶ್ವನೆಂಬ ಪುತ್ರನೂ ಇದ್ದರು.

ಸೋಽತೀವ ಧಾರ್ಮಿಕೋ ರಾಜಾ ಕರ್ದಮಸ್ಯ ಪ್ರಜಾಪತೇಃ ।
ಪ್ರಸಾದಾದ್ಧಾರ್ಮಿಕಂ ಪುತ್ರಂ ಲೇಭೇ ಸೂರ್ಯಪರಾಯಣಮ್ ॥೨೯॥

ಸ ತು ಸೂರ್ಯಂ ಸಮಭ್ಯರ್ಚ್ಯ ರಾಜಾ ವಸುಮನಾಃ ಶುಭಮ್ ।
ಲೇಭೇ ತ್ವಪ್ರತಿಮಂ ಪುತ್ರಂ ತ್ರಿಧನ್ವಾನಮರಿಂದಮಮ್ ॥ ೩೦ ॥

ಅಯಜಚ್ಚಾಶ್ವಮೇಧೇನ ಶತ್ರೂಞ್ಜಿತ್ವಾ ದ್ವಿಜೋತ್ತಮಾಃ ।
ಸ್ವಾಧ್ಯಾಯವಾನ್ ದಾನಶೀಲಸ್ತಿತಿಕ್ಷುರ್ಧರ್ಮತತ್ಪರಃ ॥ ೩೧ ॥

ಋಷಯಸ್ತು ಸಮಾಜಗ್ಮುರ್ಯಜ್ಞವಾಟಂ ಮಹಾತ್ಮನಃ ।
ವಸಿಷ್ಠಕಶ್ಯಪಮುಖಾ ದೇವಾಶ್ಚೇಂದ್ರಪುರೋಗಮಾಃ ॥ ೩೨ ॥

ತಾನ್ ಪ್ರಣಮ್ಯ ಮಹಾರಾಜಃ ಪಪ್ರಚ್ಛ ವಿನಯಾನ್ವಿತಃ ।
ಸಮಾಪ್ಯ ವಿಧಿವದ್ಯಜ್ಞಂ ವಸಿಷ್ಠಾದೀನ್ ದ್ವಿಜೋತ್ತಮಾನ್ ॥ ೩೩ ॥

---

೨೯. ಧಾರ್ಮಿಕೋತ್ತಮನಾದ ಆ ಹರ್ಯಶ್ವರಾಜನು ಕರ್ದಮಪ್ರಜಾಪತಿಯ ಅನುಗ್ರಹದಿಂದ ಸೂರ್ಯಭಕ್ತನಾದ ಧಾರ್ಮಿಕ ಪುತ್ರನನ್ನು ಹೊಂದಿದನು.

೩೦. ವಸುಮನಾ ಎಂಬ ಆ ರಾಜನು ಸೂರ್ಯದೇವತೆಯನ್ನು ಆರಾಧಿಸಿ ಮಂಗಳಮಯನೂ, ನಿರುಪಮನೂ ಮತ್ತು ಶತ್ರುಂಜಯನೂ ಆದ ಅಪ್ರತಿಮನಾದ ಪುತ್ರನನ್ನು ಪಡೆದನು.

೩೧. ದ್ವಿಜೋತ್ತಮರೇ ! ಅವನು ಸಮಸ್ತ ಶತ್ರುಗಳನ್ನು ಜಯಿಸಿ, ವೇದಾಧ್ಯಯನತತ್ಪರನೂ, ದಾನಶೀಲನೂ, ಭವಸಾಗರದಿಂದ ದಾಟಲು ಇಷ್ಟವುಳ್ಳವನೂ ಮತ್ತು ಧರ್ಮತತ್ಪರನೂ ಆಗಿ ಅಶ್ವಮೇಧಯಾಗವನ್ನು ಆರಂಭಿಸಿದನು.

೩೨. ಆಗ ವಸಿಷ್ಠ-ಕಶ್ಯಪ ಮುಂತಾದ ಮಹರ್ಷಿಗಳೂ, ಇಂದ್ರನೇ ಮುಂತಾದ ದೇವತೆಗಳೂ, ಮಹಾತ್ಮನಾದ ಆ ರಾಜನ ಯಜ್ಞಶಾಲೆಗೆ ಬಂದು ಸೇರಿದರು.

೩೩. ಮಹಾರಾಜನು ವಿನಯದಿಂದ ಕೂಡಿದವನಾಗಿ ಯಥಾವಿಧಿಯಾಗಿ ಯಜ್ಞವನ್ನು ಸಮಾಪ್ತಿಗೊಳಿಸಿ ವಸಿಷ್ಠನೇ ಮುಂತಾದ ಆ ದ್ವಿಜೋತ್ತಮರನ್ನು ನಮಸ್ಕರಿಸಿ ಪ್ರಶ್ನಿಸಿದನು.

ವಸುಮನಾ ಉವಾಚ :—

ಕಿಂ ಹಿ ಶ್ರೇಯಸ್ಕರತರಂ ಲೋಕೇಽಸ್ಮಿನ್ ಬ್ರಾಹ್ಮಣರ್ಷಭಾಃ ।
ಯಜ್ಞಸ್ತಪೋ ವಾ ಸನ್ಯಾಸೋ ಬ್ರೂತ ಮೇ ಸರ್ವವೇದಿನಃ ॥ ೩೪ ॥

ವಸಿಷ್ಠ ಉವಾಚ :—

ಅಧೀತ್ಯ ವೇದಾನ್ ವಿಧಿವತ್ ಸುತಾಂಶ್ಚೋತ್ಪಾದ್ಯ ಯತ್ನತಃ ।
ಇಷ್ಟ್ವಾ ಯಜ್ಞೇಶ್ವರಂ ಯಜ್ಞೈರ್ಗಚ್ಛೇದ್ವನಮಥಾತ್ಮವಾನ್ ॥ ೩೫ ॥

ಪುಲಸ್ತ್ಯ ಉವಾಚ :—

ಆರಾಧ್ಯ ತಪಸಾ ದೇವಂ ಯೋಗಿನಂ ಪರಮೇಶ್ವರಮ್ ।
ಪ್ರವ್ರಜೇದ್ವಿಧಿವದ್ಯಜ್ಞೈರಿಷ್ಟ್ವಾ ಪೂರ್ವಂ ಸುರೋತ್ತಮಾನ್ ॥ ೩೬ ॥

ಪುಲಹ ಉವಾಚ :—

ಯಮಾಹುರೇಕಂ ಪುರುಷಂ ಪುರಾಣಂ ಪರಮೇಶ್ವರಮ್ ।
ತಮಾರಾಧ್ಯ ಸಹಸ್ರಾಂಶುಂ ತಪಸೋ ಮೋಕ್ಷಮಾಪ್ನುಯಾತ್ ॥ ೩೭ ॥

---

೩೪. ವಸುಮನರಾಜನು ಇಂತೆಂದನು :— ಸರ್ವಜ್ಞರಾದ ಬ್ರಾಹ್ಮಣೋತ್ತಮರೇ! ಇಹಲೋಕದಲ್ಲಿ ಆಚರಿಸುವ ಯಜ್ಞ, ತಪಸ್ಸು ಅಥವಾ ಸನ್ಯಾಸ ಇವುಗಳಲ್ಲಿ ಯಾವ ಕರ್ಮವು ಅತಿಶಯವಾದ ಶ್ರೇಯಸ್ಸನ್ನು ಕೊಡುವುದು?

೩೫. ವಸಿಷ್ಠಮುನಿಯು ಹೀಗೆ ಹೇಳಿದನು— ಯಥಾವಿಧಿಯಾಗಿ ವೇದಗಳನ್ನು ಅಭ್ಯಾಸಮಾಡಿ ಪ್ರಯತ್ನದಿಂದ ಪುತ್ರರನ್ನು ಸಂಪಾದಿಸಿ ಅನೇಕ ಯಜ್ಞಗಳಿಂದ ಯಜ್ಞೇಶ್ವರನನ್ನು ಅರ್ಚಿಸಿ ಮತ್ತೆ ಜಿತೇಂದ್ರಿಯನಾಗಿ ವನವನ್ನು ಪ್ರವೇಶಿಸಬೇಕು.

೩೬. ಪುಲಸ್ತ್ಯಮುನಿಯು ಹೀಗೆ ಹೇಳಿದದು :—ತಪೋನಿಷ್ಠೆಯಿಂದ ಯೋಗಿಯಾದ ಪರಮೇಶ್ವರಸ್ವಾಮಿಯನ್ನು ಆರಾಧಿಸಿ, ವಿಧಿವಿಹಿತವಾದ ಯಜ್ಞಗಳಿಂದ ಪೂರ್ವದಲ್ಲಿ ದೇವೋತ್ತಮರನ್ನು ಪೂಜಿಸಿ ಸಂಸಾರದಿಂದ ವಿರಕ್ತಿಯನ್ನು ಹೊಂದಬೇಕು.

೩೭. ಪುಲಹಪ್ರಜಾಪತಿಯು ಹೀಗೆಂದನು :—ಮಹೇಶ್ವರನೂ, ಪುರಾಣ ಪುರುಷನೂ, ಅದ್ವಿತೀಯನೂ ಮತ್ತು ಸಹಸ್ರ ಕಿರಣಗಳುಳ್ಳವನೂ ಆದ ಸೂರ್ಯ ನಾರಾಯಣನನ್ನು ತಪಸ್ಸಿನ ಮೂಲಕ ಆರಾಧಿಸಿ ಮೋಕ್ಷವನ್ನು ಹೊಂದಬೇಕು.

ಜಮದಗ್ನಿರುವಾಚ :—

ಅಜೋ ವಿಶ್ವಸ್ಯ ಕರ್ತಾ ಯೋ ಜಗದ್ಬೀಜಂ ಸನಾತನಃ ।
ಅಂತರ್ಯಾಮೀ ಚ ಭೂತಾನಾಂ ಸ ದೇವಸ್ತಪಸೇಜ್ಯತೇ ॥ ೩೮ ॥

ವಿಶ್ವಾಮಿತ್ರ ಉವಾಚ :—

ಯೋಽಗ್ನಿಃ ಸರ್ವಾತ್ಮಕೋಽನಂತಃ ಸ್ವಯಂಭೂರ್ವಿಶ್ವತೋಮುಖಃ ।
ಸ ರುದ್ರಸ್ತಪಸೋಗ್ರೇಣ ಪೂಜ್ಯತೇ ನೇತರೈರ್ಮಖೈಃ ॥ ೩೯ ॥

ಭರದ್ವಾಜ ಉವಾಚ :—

ಯೋ ಯಜ್ಞೈರಿಜ್ಯತೇ ದೇವೋ ವಾಸುದೇವಃ ಸನಾತನಃ ।
ಸ ಸರ್ವದೈವತತನುಃ ಪೂಜ್ಯತೇ ಪರಮೇಶ್ವರಃ ॥ ೪೦ ॥

ಅತ್ರಿರುವಾಚ : —

ಯತಃ ಸರ್ವಮಿದಂ ಜಾತಂ ಯಸ್ಯಾಪತ್ಯಂ ಪ್ರಜಾಪತಿಃ ।
ತಪಃ ಸುಮಹದಾಸ್ಥಾಯ ಪೂಜ್ಯತೇ ಸ ಮಹೇಶ್ವರಃ ॥ ೪೧ ॥

---

೩೮. ಜಮದಗ್ನಿಮುನಿಯು ಉಪದೇಶಿಸಿದನು :—ಜನ್ಮರಹಿತನೂ, ಪ್ರಪಂಚ ಕರ್ತನೂ, ಜಗತ್ತಿಗೆ ಬೀಜರೂಪನೂ, ಸನಾತನನೂ, ಸರ್ವಭೂತಗಳ ಅಂತರ್ಯಾಮಿಯೂ ಆದ ಪರಮಾತ್ಮನು ತಪಸ್ಸಿನಿಂದ ಆರಾಧಿಸಲ್ಪಡಬೇಕು.

೩೯. ವಿಶ್ವಾಮಿತ್ರ ಮಹರ್ಷಿಯು ನುಡಿದನು:—ಸರ್ವಾತ್ಮಕನೂ, ಅಂತ ಶೂನ್ಯನೂ, ಸ್ವಯಂಭುವೂ ಮತ್ತು ರುದ್ರರೂಪಿಯೂ ಆದ ಅಗ್ನಿದೇವನು ಉಗ್ರವಾದ ತಪಸ್ಸಿನಿಂದ ಪೂಜಿಸಲ್ಪಡುತ್ತಾನೆ, ಇತರ ಯಜ್ಞಕರ್ಮಗಳಿಂದ ಪ್ರಯೋಜನವಿಲ್ಲ.

೪೦. ಭರದ್ವಾಜಮಹರ್ಷಿಯು ಹೀಗೆಂದನು :—ಯಜ್ಞ ಕರ್ಮಗಳಿಂದ ಸನಾತನನಾದ ಯಾವ ವಾಸುದೇವಮೂರ್ತಿಯು ಪೂಜಿಸಲ್ಪಡುವನೋ, ಅವನು ಸರ್ವದೇವತಾಮೂರ್ತಿಯೂ ಪರಮೇಶ್ವರನೂ, ಆಗಿ ಪೂಜಿಸಲ್ಪಡುವನು.

೪೧. ಅತ್ರಿಮಹರ್ಷಿಯು ಹೇಳಿದನು :—ಯಾವ ಪರಮಾತ್ಮನಿಂದ ಈ ಸಮಸ್ತ ಪ್ರಪಂಚವು ಜನಿಸಿರುವುದೋ, ಹಿರಣ್ಯಗರ್ಭನು ಯಾವ ಪರಮಾತ್ಮನ ಪುತ್ರನಾಗಿರುವನೋ, ಆ ಮಹೇಶ್ವರನು ಮಹತ್ತಾದ ತಪಶ್ಚರ್ಯೆಯನ್ನು ಅವಲಂಬಿಸಿ ಪೂಜಿಸಲ್ಪಡುತ್ತಾನೆ.

ಗೌತಮ ಉವಾಚ :—

ಯತಃ ಪ್ರಧಾನಪುರುಷೌ ಯಸ್ಯ ಶಕ್ತಿರಿದಂ ಜಗತ್ ।
ಸ ದೇವದೇವಸ್ತಪಸಾ ಪೂಜನೀಯಃ ಸನಾತನಃ ॥ ೪೨ ॥

ಕಶ್ಯಪ ಉವಾಚ :—

ಸಹಸ್ರನಯನೋ ದೇವಃ ಸಾಕ್ಷೀ ಶಂಭುಃ ಪ್ರಜಾಪತಿಃ ।
ಪ್ರಸೀದತಿ ಮಹಾಯೋಗೀ ಪೂಜಿತಸ್ತಪಸಾ ಪರಃ ॥ ೪೩ ॥

ಕ್ರತುರುವಾಚ :—

ಪ್ರಾಪ್ತಾಧ್ಯಯನಯಜ್ಞಸ್ಯ ಲಬ್ಧಪುತ್ರಸ್ಯ ಚೈವ ಹಿ ।
ನಾಂತರೇಣ ತಪಃ ಕಶ್ಚಿದ್ಧರ್ಮಃ ಶಾಸ್ತ್ರೇಷು ದೃಶ್ಯತೇ ॥ ೪೪ ॥

ಇತ್ಯಾಕರ್ಣ್ಯ ಸ ರಾಜರ್ಷಿಸ್ತಾನ್ ಪ್ರಣಮ್ಯಾತಿಹೃಷ್ಟಧೀಃ ।
ವಿಸರ್ಜಯಿತ್ವಾ ಸಂಪೂಜ್ಯ ತ್ರಿಧನ್ವಾನಮಥಾಬ್ರವೀತ್ ॥ ೪೫ ॥

---

೪೨. ಗೌತಮಮಹರ್ಷಿಯು ಹೀಗೆ ಉಪದೇಶಿಸಿದನು:—ಯಾವ ಮೂರ್ತಿಯಿಂದ ಪ್ರಧಾನ-ಪುರುಷರು ಕಲ್ಪಿಸಲ್ಪಟ್ಟಿರುವರೋ, ಯಾವ ಮೂರ್ತಿಯ ಶಕ್ತಿಯಿಂದ ಜಗತ್ತು ಹುಟ್ಟಿರುವುದೋ, ದೇವದೇವನೂ, ಸನಾತನನೂ ಆದ ಆ ಪರಮಾತ್ಮನು ತಪಸ್ಸಿನಿಂದ ಪೂಜಿಸಲ್ಪಡಬೇಕು.

೪೩. ಕಶ್ಯಪ ಮುನಿಯು ಹೀಗೆಂದನು :—ಸಹಸ್ರ ನೇತ್ರವುಳ್ಳವನೂ, ದೀಪ್ಯಮಾನನೂ, ಸಾಕ್ಷಿರೂಪನೂ, ಶಂಕರನೂ, ಪ್ರಜಾಪಾಲಕನೂ, ಮಹಾಯೋಗಿಯೂ, ಆದ ಮಹೇಶ್ವರನು ತಪಸ್ಸಿನಿಂದ ಪೂಜಿಸಲ್ಪಟ್ಟವನಾಗಿ ಪ್ರಸನ್ನನಾಗುತ್ತಾನೆ.

೪೪. ಕ್ರತುಪ್ರಜಾಪತಿಯು ಹೇಳಿದನು :—ಅಧ್ಯಯನ ಮತ್ತು ಯಜ್ಞಾಚರಣಗಳನ್ನು ನೆರವೇರಿಸಿ, ಪುತ್ರಸಂತತಿಯನ್ನು ಹೊಂದಿರುವ ಮಾನವನಿಗೆ ತಪಸ್ಸನ್ನು ಬಿಟ್ಟು ಮತ್ತಾವ ಧರ್ಮವೂ ಶಾಸ್ತ್ರಗಳಲ್ಲಿ ವಿಧಿಸಲ್ಪಡಲಿಲ್ಲ.

೪೫. ಆ ರಾಜರ್ಷಿಯು ಮುನಿಗಳ ಈ ವಚನವನ್ನು ಕೇಳಿ ಅತಿ ಸಂತುಷ್ಟವಾದ ಮಾನಸವುಳ್ಳವನಾಗಿ ನಮಸ್ಕಾರಪೂರ್ವಕವಾಗಿ ಅವರನ್ನು ಸತ್ಕರಿಸಿ ಕಳುಹಿಸಿಕೊಟ್ಟು ಪುತ್ರನಾದ ತ್ರಿಧನ್ವನಿಗೆ ಹೇಳಿದನು.

ಆರಾಧಯಿಷ್ಯೇ ತಪಸಾ ದೇವಮೇಕಾಕ್ಷರಾಹ್ವಯಮ್ ।
ಪ್ರಾಣಂ ಬೃಹಂತಂ ಪುರುಷಮಾದಿತ್ಯಾಂತರಸಂಸ್ಥಿತಮ್ ॥ ೪೬ ॥

ತ್ವಂ ತು ಧರ್ಮರತೋ ನಿತ್ಯಂ ಪಾಲಯೈತದತಂದ್ರಿತಃ ।
ಚಾತುರ್ವರ್ಣ್ಯಸಮಾಯುಕ್ತಮಶೇಷಂ ಕ್ಷಿತಿಮಂಡಲಮ್ ॥ ೪೭ ॥

ಏವಮುಕ್ತ್ವಾ ಸ ತದ್ರಾಜ್ಯಂ ನಿಧಾಯಾತ್ಮಭವೇ ನೃಪಃ ।
ಜಗಾಮಾರಣ್ಯಮನಘಸ್ತಪಸ್ತಪ್ತುಮನುತ್ತಮಮ್ ॥ ೪೮ ॥

ಹಿಮವಚ್ಛಿಖರೇ ರಮ್ಯೇ ದೇವದಾರುವನಾಶ್ರಯೇ ।
ಕಂದಮೂಲಫಲಾಹಾರೈರುತ್ಪನ್ನೈರಯಜತ್ ಸುರಾನ್ ॥ ೪೯ ॥

---

೪೬. ನಾನು ಏಕಾಕ್ಷರವೆಂಬ ಸಂಜ್ಞೆಯುಳ್ಳವನೂ, ಪ್ರಾಣರೂಪಿಯೂ, ಮಹಾತ್ಮನೂ, ಆದಿತ್ಯಮಂಡಲದ ಮಧ್ಯವರ್ತಿಯಾದ ಪುರುಷರೂಪನೂ ಆದ ಸ್ವಾಮಿಯನ್ನು ತಪಸ್ಸಿನಿಂದ ಸೇವಿಸುವೆನು.

೪೭. ನೀನು ಯಾವಾಗಲೂ ಧರ್ಮನಿರತನಾಗಿ ಚಾತುರ್ವರ್ಣ್ಯದಿಂದ ಕೂಡಿರುವ ಈ ಸಮಸ್ತ ಭೂಮಂಡಲವನ್ನು ಸ್ವಲ್ಪವಾದರೂ ಆಲಸ್ಯವಿಲ್ಲದಂತೆ ಪಾಲಿಸುತ್ತ ರಾಜ್ಯಭಾರವನ್ನು ನಿರ್ವಹಿಸು.

೪೮. ಹೀಗೆಂದು ಹೇಳಿ ನಿಷ್ಕಳಂಕನಾದ ಆ ವಸುಮನರಾಜನು ಪುತ್ರನಲ್ಲಿ ರಾಜ್ಯಭಾರವನ್ನಿರಿಸಿ ಶ್ರೇಷ್ಠವಾದ ತಪಸ್ಸನ್ನಾಚರಿಸಲು ಅರಣ್ಯಕ್ಕೆ ಹೋದನು.

೪೯. ಆ ರಾಜನು ದೇವದಾರು ವೃಕ್ಷಗಳ ವನಕ್ಕೆ ಆಶ್ರಯವೂ, ರಮಣೀಯವೂ ಆದ ಹಿಮವತ್ಪರ್ವತದ ಶಿಖರದಲ್ಲಿ ಸುಲಭವಾಗಿ ಸಿಕ್ಕಿದ ಕಂದ-ಮೂಲ ಮತ್ತು ಫಲರೂಪವಾದ ಆಹಾರಗಳಿಂದ ದೇವತೆಗಳನ್ನು ಅರ್ಚಿಸಿದನು.

ಸಂವತ್ಸರಶತಂ ಸಾಗ್ರಂ ತಪೋನಿರ್ಧೂತಕಿಲ್ಬಿಷಃ ।
ಜಜಾಪ ಮನಸಾ ದೇವೀಂ ಸಾವಿತ್ರೀಂ ವೇದಮಾತರಮ್ ॥ ೫೦ ॥

ತಸ್ಯೈವಂ ತಪತೋ ದೇವಃ ಸ್ವಯಂಭೂಃ ಪರಮೇಶ್ವರಃ ।
ಹಿರಣ್ಯಗರ್ಭೋ ವಿಶ್ವಾತ್ಮಾ ತಂ ದೇಶಮಗಮತ್ ಸ್ವಯಮ್ ॥ ೫೧ ॥

ದೃಷ್ಟ್ವಾ ದೇವಂ ಸಮಾಯಾಂತಂ ಬ್ರಹ್ಮಾಣಂ ವಿಶ್ವತೋಮುಖಮ್ ।
ನನಾಮ ಶಿರಸಾ ತಸ್ಯ ಪಾದಯೋರ್ನಾಮ ಕೀರ್ತಯನ್ ॥ ೫೨ ॥

ನಮೋ ದೇವಾಧಿದೇವಾಯ ಬ್ರಹ್ಮಣೇ ಪರಮಾತ್ಮನೇ ।
ಹಿರಣ್ಯಮೂರ್ತಯೇ ತುಭ್ಯಂ ಸಹಸ್ರಾಕ್ಷಾಯ ವೇಧಸೇ ॥ ೫೩ ॥

---

೫೦. ಹಾಗು ಒಂದು ನೂರು ಸಂವತ್ಸರಗಳವರೆಗೆ ತಪಶ್ಚರ್ಯೆಯಿಂದ ಪವಿತ್ರವಾದ ಪಾಪವುಳ್ಳವನಾಗಿ ವೇದಜನನಿಯಾದ ಸಾವಿತ್ರೀದೇವಿಯನ್ನು ಮನಸ್ಸಿನಲ್ಲಿ ಜಪಿಸಿದನು.

೫೧. ಆ ರಾಜನು ಹೀಗೆ ತಪವನ್ನು ಆಚರಿಸುತ್ತಿರಲು ಸ್ವಯಂಭುವೂ, ಪರಮೇಶ್ವರನೂ, ವಿಶ್ವರೂಪಿಯೂ ಆದ ಬ್ರಹ್ಮದೇವನು ಆ ಸ್ಥಳಕ್ಕೆ ತಾನಾಗಿ ಬಂದನು.

೫೨. ಹೀಗೆ ಸರ್ವತೋಮುಖನಾದ ಬ್ರಹ್ಮದೇವನು ಬರುತ್ತಿದ್ದುದನ್ನು ಕಂಡು ಆ ರಾಜನು ತನ್ನ ನಾಮವನ್ನು ಕೀರ್ತಿಸುತ್ತಾ ಬ್ರಹ್ಮದೇವನ ಪಾದಗಳಿಗೆ ಶಿರಸ್ಸಿನಿಂದ ವಂದಿಸಿದನು.

೫೩. ದೇವಾಧಿದೇವನೂ, ಪರಮಾತ್ಮರೂಪಿಯೂ ಆದ ಬ್ರಹ್ಮದೇವನಿಗೆ ನಮಸ್ಕಾರವು. ಸುವರ್ಣದಂತೆ ಉಜ್ವಲವಾದ ಮೂರ್ತಿಯುಳ್ಳವನೂ, ಸಹಸ್ರಾಕ್ಷನೂ ಆದ ಬ್ರಹ್ಮನಿಗೆ ನಮಸ್ಕಾರವು.

ನಮೋ ಧಾತ್ರೇ ವಿಧಾತ್ರೇ ಚ ನಮೋ ದೇವಾತ್ಮಮೂರ್ತಯೇ ।
ಸಾಂಖ್ಯಯೋಗಾಧಿಗಮ್ಯಾಯ ನಮಸ್ತೇ ಜ್ಞಾನಮೂರ್ತಯೇ ॥ ೫೪ ॥

ನಮಸ್ತ್ರಿಮೂರ್ತಯೇ ತುಭ್ಯಂ ಸ್ರಷ್ಟ್ರೇ ಸರ್ವಾರ್ಥವೇದಿನೇ ।
ಪುರುಷಾಯ ಪುರಾಣಾಯ ಯೋಗಿನಾಂ ಗುರವೇ ನಮಃ ॥ ೫೫ ॥

ತತಃ ಪ್ರಸನ್ನೋ ಭಗವಾನ್ ವಿರಿಂಚಿರ್ವಿಶ್ವಭಾವನಃ ।
ವರಂ ವರಯ ಭದ್ರಂ ತೇ ವರದೋಽಸ್ಮೀತ್ಯಭಾಷತ ॥ ೫೬ ॥

ರಾಜೋವಾಚ :—

ಜಪೇಯಂ ದೇವದೇವೇಶ ಗಾಯತ್ರೀಂ ವೇದಮಾತರಮ್ ।
ಭೂಯೋ ವರ್ಷಶತಂ ಸಾಗ್ರಂ ತಾವದಾಯುರ್ಭವೇನ್ಮಮ ॥ ೫೭ ॥

---

೫೪. ಸೃಷ್ಟಿಕರ್ತನೂ, ಪಾಲಕನೂ ಆದ ಬ್ರಹ್ಮದೇವನಿಗೆ ನಮಸ್ಕಾರವು. ಸಮಸ್ತ ದೇವತಾಸ್ವರೂಪಿಯಾದ ಬ್ರಹ್ಮದೇವನಿಗೆ ನಮಸ್ಕಾರವು ಮತ್ತು ಸಾಂಖ್ಯ-ಯೋಗಗಳಿಂದ ವೇದ್ಯನೂ, ಜ್ಞಾನಮೂರ್ತಿಯೂ ಆದ ನಿನಗೆ ವಂದನೆಯು.

೫೫. ಮತ್ತು ತ್ರಿಮೂರ್ತಿಸ್ವರೂಪನೂ, ಸೃಷ್ಟಿಕರ್ತನೂ, ಸರ್ವಾರ್ಥ ಜ್ಞಾನಿಯೂ ಆದ ನಿನಗೆ ನಮಸ್ಕಾರವು ಮತ್ತು ಪುರಾಣಪುರುಷ ಸ್ವರೂಪನೂ, ಯೋಗಿಗಳಿಗೆ ಗುರುವೂ ಆದ ಬ್ರಹ್ಮದೇವನಿಗೆ ನಮಸ್ಕಾರವು.

೫೬. ತರುವಾಯ ಪ್ರಪಂಚಕಾರಣನಾದ ಪೂಜ್ಯಬ್ರಹ್ಮದೇವನು ಸ್ತುತಿಯಿಂದ ಪ್ರಸನ್ನನಾಗಿ " ವರವನ್ನು ಪ್ರಾರ್ಥಿಸು. ನಿನಗೆ ಮಂಗಳವಾಗಲಿ. ನಾನು ವರದಾನಕ್ಕೆ ಬಂದಿರುತ್ತೇನೆ." ಹೀಗೆಂದು ರಾಜನಿಗೆ ಹೇಳಿದನು.

೫೭. ರಾಜನು ಹೀಗೆಂದನು :– ದೇವದೇವೋತ್ತಮನೇ ! ವೇದಮಾತೆಯಾದ ಗಾಯತ್ರೀದೇವಿಯನ್ನು ಸಂಪೂರ್ಣವಾಗಿ ಮತ್ತೊಂದು ನೂರು ವರ್ಷಗಳವರೆಗೆ ಜಪಿಸುವೆನು. ನನಗೆ ಅಷ್ಟರವರೆಗೆ ಆಯುಷ್ಯವು ದೊರಕಲಿ.

ಬಾಢಮಿತ್ಯಾಹ ವಿಶ್ವಾತ್ಮಾ ಸಮಾಲೋಕ್ಯ ನರಾಧಿಪಮ್ ।
ಸ್ಪೃಷ್ಟ್ವಾ ಕರಾಭ್ಯಾಂ ಸುಪ್ರೀತಸ್ತತ್ರೈವಾಂತರಧೀಯತ ॥ ೫೮ ॥

ಸೋಽಪಿ ಲಬ್ಧವರಃ ಶ್ರೀಮಾನ್ ಜಜಾಪಾತಿಪ್ರಸನ್ನಧೀಃ ।
ಶಾಂತಸ್ತ್ರಿಷವಣಸ್ನಾಯೀ ಕಂದಮೂಲಫಲಾಶನಃ ॥ ೫೯ ॥

ತಸ್ಯ ಪೂರ್ಣೇ ವರ್ಷಶತೇ ಭಗವಾನುಗ್ರದೀಧಿತಿಃ ।
ಪ್ರಾದುರಾಸೀನ್ಮಹಾಯೋಗೀ ಭಾನೋರ್ಮಂಡಲಮಧ್ಯತಃ ॥ ೬೦ ॥

ತಂ ದೃಷ್ಟ್ವಾ ವೇದವಪುಷಂ ಮಂಡಲಸ್ಥಂ ಸನಾತನಮ್ ।
ಸ್ವಯಂಭುವಮನಾದ್ಯಂತಂ ಬ್ರಹ್ಮಾಣಂ ವಿಸ್ಮಯಂ ಗತಃ ॥ ೬೧ ॥

---

೫೮. ಆಗ ವಿಶ್ವರೂಪಿಯಾದ ಬ್ರಹ್ಮನು ಹಾಗೆ ಆಗಲೆಂದು ಹರಸಿ ರಾಜಾಧಿರಾಜನನ್ನು ನೋಡುತ್ತಾ ಅಲ್ಲಿಯೇ ಸುಪ್ರೀತನಾಗಿ ಹಸ್ತಗಳಿಂದ ಅವನನ್ನು ಸ್ಪರ್ಶಿಸುತ್ತಾ ಅಲ್ಲಿಯೇ ಅದೃಶ್ಯನಾದನು.

೫೯. ಆ ರಾಜನು ಹೊಂದಿದ ವರವುಳ್ಳವನೂ, ಕಾಂತಿಸ್ವರೂಪನೂ, ಪ್ರಸನ್ನವಾದ ಬುದ್ಧಿಯುಳ್ಳವನೂ, ಶಾಂತನೂ, ತ್ರಿಷವಣಸ್ನಾನಮಾಡುವವನೂ ಮತ್ತು ಕಂದ-ಮೂಲ-ಫಲಗಳನ್ನು ಭಕ್ಷಿಸುವವನೂ ಆಗಿ ಗಾಯತ್ರಿಯನ್ನು ಜಪಿಸಿದನು.

೬೦. ಆಗ ಒಂದು ನೂರು ವರ್ಷಗಳು ಪೂರ್ಣವಾಗಿ ಕಳೆಯಲು ಸೂರ್ಯಮಂಡಲದ ಮಧ್ಯಭಾಗದಿಂದ ಉಗ್ರವಾದ ಕಿರಣಗಳುಳ್ಳ ಭಗವಂತನಾದ ಮಹಾಯೋಗಿಯು ಪ್ರಾದುರ್ಭವಿಸಿದನು.

೬೧. ವೇದಸ್ವರೂಪನೂ, ಸೂರ್ಯಮಂಡಲದಲ್ಲಿರುವವನೂ, ಸನಾತನನೂ, ಸ್ವಯಂಭುವೂ, ಆದಿ-ಅಂತಗಳಿಂದ ರಹಿತನೂ, ಬ್ರಹ್ಮರೂಪಿಯೂ ಆದ ಆ ಮಹಾಯೋಗಿಯನ್ನು ನೋಡಿ ರಾಜನು ವಿಸ್ಮಯವನ್ನು ಹೊಂದಿದನು.

ತುಷ್ಟಾವ ವೈದಿಕೈರ್ಮಂತ್ರೈಃ ಸಾವಿತ್ರ್ಯಾ ಚ ವಿಶೇಷತಃ ।
ಕ್ಷಣಾದಪಶ್ಯತ್ಪುರುಷಂ ತಮೇವ ಪರಮೇಶ್ವರಮ್ ॥ ೬೨ ॥

ಚತುರ್ಮುಜಂ ಜಟಾಮೌಲಿಮಷ್ಟಹಸ್ತಂ ತ್ರಿಲೋಚನಮ್ ।
ಚಂದ್ರಾವಯವಲಕ್ಷ್ಮಾಣಂ ನರನಾರೀತನುಂ ಹರಮ್ ॥ ೬೩ ॥

ಭಾಸಯಂತಂ ಜಗತ್ ಕೃತ್ಸ್ನಂ ನೀಲಕಂಠಂ ಸ್ವರಶ್ಮಿಭಿಃ ।
ರಕ್ತಾಂಬರಧರಂ ರಕ್ತಂ ರಕ್ತಮಾಲ್ಯಾನುಲೇಪನಮ್ ॥ ೬೪ ॥

ತದ್ಭಾವಭಾವಿತೋ ದೃಷ್ಟ್ವಾ ಸದ್ಭಾವೇನ ಪರೇಣ ಹಿ ।
ನನಾಮ ಶಿರಸಾ ರುದ್ರಂ ಸಾವಿತ್ರ್ಯಾ ತೇನ ಚೈವ ಹಿ ॥ ೬೫ ॥

---

೬೨. ಆಗ ರಾಜನು ವೈದಿಕಮಂತ್ರಗಳಿಂದಲೂ, ವಿಶೇಷವಾಗಿ ಸಾವಿತ್ರೀ ಮಂತ್ರದಿಂದಲೂ ಸ್ತುತಿಸಿ ಕ್ಷಣಮಾತ್ರದಲ್ಲಿ ಆ ಪುರುಷನನ್ನು ಪರಮೇಶ್ವರನನ್ನಾಗಿ ಸಾಕ್ಷಾತ್ಕರಿಸಿದನು.

೬೩. ನಾಲ್ಕು ಮುಖವುಳ್ಳವನೂ, ಶಿರದಲ್ಲಿ ಜಟಾಮಂಡಲಧಾರಿಯೂ, ಎಂಟು ಹಸ್ತ, ಮೂರು ನೇತ್ರಗಳಿಂದ ಶೋಭಿತನೂ, ಚಂದ್ರಕಲೆಯ ಲಕ್ಷಣ ವುಳ್ಳವನೂ ಮತ್ತು ಅರ್ಧನಾರೀಶ್ವರರೂಪನೂ ಆದ ಪರಮೇಶ್ವರನನ್ನು ನೋಡಿದನು.

೬೪. ಮತ್ತು ಆ ಪರಮೇಶ್ವರಮೂರ್ತಿಯು ತನ್ನ ಕಿರಣಗಳಿಂದ ಸಂಪೂರ್ಣ ವಾದ ಜಗತ್ತನ್ನು ಪ್ರಕಾಶಪಡಿಸುವವನೂ, ಕಪ್ಪಾದ ಕಂಠವುಳ್ಳವನೂ, ರಕ್ತವಸ್ತ್ರವನ್ನು ಧರಿಸಿದವನೂ, ರಕ್ತವಾದ ಮಾಲ್ಯ-ಅನುಲೇಪಗಳಿಂದ ಕೂಡಿದವನೂ ಮತ್ತು ರಕ್ತ ವರ್ಣವುಳ್ಳವನೂ ಆಗಿದ್ದನು.

೬೫. ಆಗ ಆ ರಾಜನು ಪರಮೇಶ್ವರಭಾವನೆಯಿಂದ ಕೂಡಿದ ಚಿತವುಳ್ಳವನಾಗಿ ಉತ್ತಮವಾದ ಸಾಧುಭಾವದಿಂದ ಆ ಸಾವಿತ್ರೀಮಂತ್ರದಿಂದ ರುದ್ರನನ್ನು ಸ್ತುತಿಸಿ ಶಿರಸ್ಸಿನಿಂದ ವಂದಿಸಿದನು.

ನಮಸ್ತೇ ನೀಲಕಂಠಾಯ ಭಾಸ್ವತೇ ಪರಮೇಷ್ಠಿನೇ ।
ತ್ರಯೀಮಯಾಯ ರುದ್ರಾಯ ಕಾಲರೂಪಾಯ ಹೇತವೇ　　॥ ೬೬ ॥

ತದಾ ಪ್ರಾಹ ಮಹಾದೇವೋ ರಾಜಾನಂ ಪ್ರೀತಮಾನಸಃ ।
ಇಮಾನಿ ಮೇ ರಹಸ್ಯಾನಿ ನಾಮಾನಿ ಶೃಣು ಚಾನಘ　　॥ ೬೭ ॥

ಸರ್ವವೇದೇಷು ಗೀತಾನಿ ಸಂಸಾರಶಮನಾನಿ ತು ।
ನಮಃ ಕುರುಷ್ವ ನೃಪತೇ ಏಭಿರ್ಮಾಂ ಸತತಂ ಶುಚಿಃ　　॥ ೬೮ ॥

ಅಧೀಷ್ವ ಶತರುದ್ರೀಯಂ ಯಜುಷಾಂ ಸಾರಮುದ್ಧೃತಮ್ ।
ಜಪಸ್ವಾನನ್ಯಚೇತಸ್ಕೋ ಮಯ್ಯಾಸಕ್ತಮನಾ ನೃಪ　　॥ ೬೯ ॥

---

೬೬. ನೀಲಕಂಠನೂ, ಪ್ರಕಾಶಮಯನೂ, ಉತ್ತಮಸ್ಥಾನದಲ್ಲಿರುವವನೂ, ವೇದತ್ರಯಮಯನೂ, ರುದ್ರರೂಪಿಯೂ, ಕಾಲಸ್ವರೂಪನೂ, ಜಗತ್ಕಾರಣನೂ ಆದ ರುದ್ರನಿಗೆ ನಮಸ್ಕಾರವು.

೬೭. ಆಗ ಮಹಾದೇವನು ರಾಜನನ್ನು ಕುರಿತು ಸಂತುಷ್ಟವಾದ ಚಿತ್ತವುಳ್ಳವನಾಗಿ ಹೀಗೆಂದು ಹೇಳಿದನು :—ನಿಷ್ಕಳಂಕನಾದ ರಾಜನೇ ! ಈ ನನ್ನ ರಹಸ್ಯವಾದ ನಾಮಗಳನ್ನು ಶ್ರವಣಮಾಡು.

೬೮. ಸಂಸಾರ ದುಃಖವನ್ನು ಶಮನಮಾಡುವ ಈ ನಾಮಗಳು ಸಮಸ್ತ ವೇದಗಳಲ್ಲಿ ಪಠಿಸಲ್ಪಟ್ಟಿವೆ. ರಾಜನೇ ! ನೀನು ಯಾವಾಗಲೂ ಶುಚಿಯಾಗಿ ಈ ನಾಮಗಳನ್ನು ಪಠಿಸಿ ನನ್ನನ್ನು ನಮಸ್ಕರಿಸು.

೬೯. ರಾಜನೇ ! ಯಜುರ್ವೇದದಲ್ಲಿ ಸಾರಾಂಶವಾಗಿ ಉದ್ಧರಿಸಲ್ಪಟ್ಟಿರುವ ಶತರುದ್ರೀಯ ಸೂಕ್ತವನ್ನು ವಿಷಯಾಂತರದಲ್ಲಿ ಮನಸ್ಸನ್ನು ಇಡದೆ ನನ್ನಲ್ಲಿ ಆಸಕ್ತವಾದ ಮಾನಸವುಳ್ಳವನಾಗಿ ಜಪಿಸು.

ಬ್ರಹ್ಮಚಾರೀ ನಿರಾಹಾರೋ ಭಸ್ಮನಿಷ್ಠಃ ಸಮಾಹಿತಃ ।
ಜಪೇದಾಮರಣಾದ್ರುದ್ರಂ ಸ ಯಾತಿ ಪರಮಂ ಪದಮ್ ॥ ೭೦ ॥

ಇತ್ಯುಕ್ತ್ವಾ ಭಗವಾನ್ ರುದ್ರೋ ಭಕ್ತಾನುಗ್ರಹಕಾಮ್ಯಯಾ ।
ಪುನಃ ಸಂವತ್ಸರಶತಂ ರಾಜ್ಞೋ ಹ್ಯಾಯುರಕಲ್ಪಯತ್ ॥ ೭೧ ॥

ದತ್ವಾಸ್ಮೈ ತತ್ಪರಂ ಜ್ಞಾನಂ ವೈರಾಗ್ಯಂ ಪರಮೇಶ್ವರಃ ।
ಕ್ಷಣಾದಂತರ್ದಧೇ ರುದ್ರಸ್ತದದ್ಭುತಮಿವಾಭವತ್ ॥ ೭೨ ॥

ರಾಜಾಪಿ ತಪಸಾ ರುದ್ರಂ ಜಜಾಪಾನನ್ಯಮಾನಸಃ ।
ಭಸ್ಮಚ್ಛನ್ನಸ್ತ್ರಿಷವಣಂ ಸ್ನಾತ್ವಾ ಶಾಂತಃ ಸಮಾಹಿತಃ ॥ ೭೩ ॥

---

೭೦. ಬ್ರಹ್ಮಚರ್ಯ ವ್ರತಧಾರಿಯೂ, ನಿರಾಹಾರನೂ, ಭಸ್ಮೋದ್ಧೂಳನ ನಿಷ್ಠನೂ, ಸಮಾಧಾನವುಳ್ಳವನೂ ಆಗಿ ಮರಣದವರೆಗೆ ರುದ್ರಮೂರ್ತಿಯನ್ನು ಜಪಿಸಿದ ಮಾನವನು ಪರಮಪದವನ್ನು ಹೊಂದುತ್ತಾನೆ.

೭೧. ಭಗವಂತನಾದ ರುದ್ರನು ಹೀಗೆ ಉಪದೇಶಿಸಿ ಭಕ್ತರಿಗೆ ಅನುಗ್ರಹ ಮಾಡಬೇಕೆಂಬ ಕುತೂಹಲದಿಂದ ಆ ರಾಜನಿಗೆ ಮತ್ತೊಂದು ನೂರು ವರ್ಷಕಾಲ ಆಯುಷ್ಯವನ್ನು ಕೊಟ್ಟನು.

೭೨. ಹೀಗೆ ಪರಮೇಶ್ವರನು ಆ ರಾಜನಿಗೆ ಪರಮ ಜ್ಞಾನವನ್ನೂ, ವೈರಾಗ್ಯ ವನ್ನೂ ಅನುಗ್ರಹಿಸಿ ಕ್ಷಣಮಾತ್ರದಲ್ಲಿ ಅಂತರ್ಧಾನಹೊಂದಿದನು. ಅದೊಂದು ಅದ್ಭುತದಂತೆ ಭಾಸವಾಯಿತು.

೭೩. ಆ ರಾಜನೂ ಕೂಡ ಬೇರೆ ವಿಷಯದಲ್ಲಿ ಮನಸ್ಸನ್ನಿಡದೆ ಭಸ್ಮದಿಂದ ಅನುಲಿಪ್ತನೂ, ತ್ರಿಷವಣಸ್ನಾನವನ್ನು ಮಾಡಿದವನೂ, ನಿರ್ವಿಕಾರನೂ ಮತ್ತು ಚಿತ್ತಸಮಾಧಾನವುಳ್ಳವನೂ ಆಗಿ ತಪಸ್ಸಿನಿಂದ ರುದ್ರನನ್ನು ಜಪಿಸಿದನು.

ಜಪತಸ್ತಸ್ಯ ನೃಪತೇಃ ಪೂರ್ಣೇ ವರ್ಷಶತೇ ಪುನಃ ।
ಯೋಗಪ್ರವೃತ್ತಿರಭವತ್ ಕಾಲಾತ್ ಕಾಲಪರಂ ಪದಮ್ ॥ ೭೪ ॥

ವಿವೇಶೈತದ್ವೇದಸಾರಂ ಸ್ಥಾನಂ ವೈ ಪರಮೇಷ್ಠಿನಃ ।
ಭಾನೋಃ ಸುಮಂಡಲಂ ಶುಭ್ರಂ ತತೋ ಯಾತೋ ಮಹೇಶ್ವರಮ್ ॥

ಯಃ ಪಠೇಚ್ಛೃಣುಯಾದ್ವಾಪಿ ರಾಜ್ಞಶ್ಚರಿತಮುತ್ತಮಮ್ ।
ಸರ್ವಪಾಪವಿನಿರ್ಮುಕ್ತೋ ಬ್ರಹ್ಮಲೋಕೇ ಮಹೀಯತೇ ॥ ೭೬ ॥

ಇತಿ ಶ್ರೀ ಕೂರ್ಮಪುರಾಣೇ ವಿಂಶೋಽಧ್ಯಾಯಃ

---

೭೪. ಹೀಗೆ ಆ ರಾಜನು ರುದ್ರವನ್ನು ಜಪಿಸುತ್ತಾ ಒಂದು ನೂರು ವರ್ಷ ಕಾಲವು ಪೂರ್ಣವಾಗಿ ಕಳೆಯಲು ಮತ್ತೆ ಆ ಯೋಗಪ್ರವೃತ್ತಿಯಿಂದ ಕಾಲಕಾಲನ ಪದವಿಗಿಂತ ಉತ್ತಮವಾದ ಪದವು ಲಭಿಸಿತು.

೭೫. ತರುವಾಯ ಆ ರಾಜನು ಬ್ರಹ್ಮದೇವನ ಸ್ಥಾನವೂ, ವೇದಗಳ ಸಾರವೂ ಮತ್ತು ಪವಿತ್ರವೂ ಆದ ಸೂರ್ಯಮಂಡಲವನ್ನು ಪ್ರವೇಶಿಸಿ ಅಲ್ಲಿಂದ ಮಹೇಶ್ವರನನ್ನು ಹೊಂದಿದನು.

೭೬. ಯಾವ ಮಾನವನು ರಾಜನ ಈ ಉತ್ತಮ ಚರಿತ್ರೆಯನ್ನು ಪಠನ ಮಾಡುವನೋ, ಅವನು ಸಮಸ್ತ ಪಾಪಗಳಿಂದ ನಿರ್ಮುಕ್ತನಾಗಿ ಬ್ರಹ್ಮಲೋಕದಲ್ಲಿ ಪೂಜ್ಯನಾಗುವನು.

ಕೂರ್ಮಪುರಾಣದಲ್ಲಿ ಇಪ್ಪತ್ತನೆಯ ಅಧ್ಯಾಯವು ಸಮಾಪ್ತವು.

